ದಿವ್ಯಪ್ರಬಂಧಮಾಲಾ ಕುಸುಮ–೮

ತಿರುಮಂಗೈ ಆಳ್ವಾರ್
ಅನುಗ್ರಹಿಸಿದ

# ಪೆರಿಯ ತಿರುಮೊೞಿ

(ಸಂಚಿಕೆ–ನಾಲ್ಕು)

ಅನುವಾದ ಮತ್ತು ವಿವರಣೆ :

**ಡಾ|| ಎನ್. ಎಸ್. ಅನಂತರಂಗಾಚಾರ್ಯ**

ದಿವ್ಯ ಪ್ರಬಂಧಮಾಲಾ–ಕುಸುಮ ೮

ತಿರುಮಂಗೈಯಾಳ್ವಾರ್ರವರು ಅನುಗ್ರಹಿಸಿದ

# ಪೆರಿಯ ತಿರುಮೊೞಿ

(ಸಂಚಿಕೆ–ನಾಲ್ಕು)

(ಐದನೆಯ ಪತ್ತಿನ ಆರನೆಯ ದಶಕದಿಂದ ಆರನೆಯ ಪತ್ತಿನ ಹತ್ತನೆಯ ದಶಕ ಪೂರ್ತ)

This Book is published with the
Financial assistace of
THIRUMALA THIRUPATHI
DEVASTHANAMS
under their scheme
Aid to publish Religious Books

ಅನುವಾದ ಪ:ತ್ತು ವಿವರಣೆ
ವೇದಾಂತವಿದ್ವಾನ್ ವೇದಾಂತವಿದ್ವನ್ಮಣಿ
ಸತ್ಸಂಪ್ರದಾಯಭೂಷಣಮ್

ಡಾ॥ ಎನ್. ಎಸ್. ಅನಂತರಂಗಾಚಾರ್ಯ
ಬೆಂಗಳೂರು

Divya Prabhandha Mala-Vol. 8 consisting five decades of fifth centum and sixth centum in full-in all 150 pasurams of Periya Thirumoli of Sri Thirumangai Alwar-Kannada Translation & explanation by Dr. N. S. Anantha Rangachar 780, V Main Road, Vijayanagar, Bangalore-560 040.



First Edition 1991
No. of copies printed - 1000



Price Rs. 16-00
ಬೆಲೆ : ಹದಿನಾರು ರೂಪಾಯಿಗಳು



ಮುದ್ರಕರು :
ಲೋಟಸ್ ಪ್ರಿಂಟರ್ಸ್
ಬೆಂಗಳೂರು-44

# ಅರಿಕೆ

ಶ್ರೀ ತಿರುಮಂಗೈ ಆಳ್ವಾರ್ ಅವರು ಹಾಡಿದ ಪೆರಿಯ ತಿರುಮೊಳಿಯ ನಾಲ್ಕನೆಯ ಸಂಚಿಕೆಯನ್ನು ದಿವ್ಯ ಪ್ರಬಂಧಮಾಲೆಯ ಎಂಟನೆಯ ಕುಸುಮವಾಗಿ ಸಹೃದಯ ಮಹಾಶಯರಲ್ಲಿ ಸಮರ್ಪಿಸಲು ಸಾಧ್ಯವಾದುದಕ್ಕಾಗಿ ಸಂತೋಷ ವೆನಿಸಿದೆ. ಹದಿನೈದು ದಶಕಗಳ ಕನ್ನಡಾನುವಾದ ಮತ್ತು ಸಂಗ್ರಹವಾದ ವಿವರಣೆಯನ್ನು ಈ ಕುಸುಮದಲ್ಲಿ ಅಳವಡಿಸಲಾಗಿದೆ. ಹೀಗೆಯೇ ಕ್ರಮವಾಗಿ ಭಗವದ್ಭಾಗವತರ ಸಂಕಲ್ಪಕ್ಕನುಸಾರವಾಗಿ ಉಳಿದ ಭಾಗವನ್ನು ಪ್ರಕಟಿಸಬೇಕೆಂಬ ಆಶೆಯಿದೆ. ಸಹೃದಯರ ಸಹಕಾರ ಮತ್ತು ಪ್ರೋತ್ಸಾಹಗಳಿಂದ ಅದು ಸಾಧ್ಯ ವಾಗುವುದೆಂದು ನಂಬಲಾಗಿದೆ.

ಈ ಪ್ರಕಟಣೆಗೆ ಉದಾರವಾಗಿ ಆರ್ಥಿಕ ನೆರವನ್ನಿತ್ತು ಪರಮೋಪಕಾರ ಮಾಡಿರುವ ಶ್ರೀ ತಿರುಮಲೆ ತಿರುಪತಿ ದೇವಸ್ಥಾನದ ನಿರ್ವಾಹಣಾಧಿಕಾರಿಗಳಿಗೂ ಸಂಪಾದಕರಾದ ಶ್ರೀ ಕೆ. ಸುಬ್ಬಾರಾವ್ ಅವರಿಗೂ ನನ್ನ ಅನಂತ ವಂದನೆಗಳು. ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಲೋಟಸ್ ಪ್ರಿಂಟರ್ಸ್ ಅವರಿಗೆ ನಾನು ಆಭಾರಿಯಾಗಿದ್ದೇನೆ.

ವೆಂಕಟಾದ್ರೀಶ್ವರನಾದ ಶ್ರೀ ಶ್ರೀನಿವಾಸನ ದಿವ್ಯ ಪಾದಾರವಿಂದಗಳಲ್ಲಿ ಈ ಕೃತಿ ಸಮರ್ಪಿತವಾಗಿದೆ.

ಇಂತು ಸಜ್ಜನ ವಿಧೇಯ

ಬೆಂಗಳೂರು **ಎನ್. ಎಸ್. ಅನಂತರಂಗಾಚಾರ್ಯ**

ಪ್ರಜೋತ್ಪತ್ತಿ ಶ್ರಾವಣ
ಶುಕ್ಲ ತ್ರಯೋದಶೀ
೨೩–೮–೯೧

# ಪೆರಿಯ ತಿರುಮೊೞಿ

## ಐದನೆಯ ಪತ್ತು—ಆರನೆಯ ತಿರುಮೊೞಿ

# 'ಕೈಮ್ಮಾನಮ್'

## ಪ್ರವೇಶ

'ಯಾವಾಗಲೂ ಮಾಧವನೇ ಮಾಯವನೇ ಎಂದು ಹೇಳುತ್ತಿದ್ದಾಳೆ' ಎಂದು ಪರಮಾತ್ಮನ ಶ್ರೀನಾಮಗಳನ್ನು ಹೇಳುತ್ತಾ ಇರುವುದರ ಜೊತೆಗೆ ತಾಯಿಯು ಹೇಳುವುದನ್ನೂ ಕೇಳಿ ಕೇಳಿ ಆ ಶ್ರೀನಾಮಗಳಲ್ಲಿ ವಾಸನೆ ಉಂಟಾಯಿತು. ಶ್ರೀನಾಮಗಳಾದರೂ ಸತ್ತಾಧಾರಕಗಳಾಗಿ ತಾನೇ ಇರುವುದು ? ಅದರಿಂದ ಆ ನಾಮಗಳನ್ನು ಹೇಳುತ್ತಾ ಆತ್ಮಲಾಭ ಹೊಂದಿದರು. ಭಗವಂತನು ತನ್ನ ಅವತಾರ ಸೌಲಭ್ಯಗಳನ್ನು ತೋರಿ, 'ನಾವಿಲ್ಲಿ ಬಂದು ಸುಲಭರಾಗಿರುವುದು ನಿಮಗೋಸ್ಕರ ತಾನೇ' ಎಂದೂ, 'ಅಯಾ ಕ್ಷೇತ್ರಗಳಲ್ಲಿ ಬಂದು ಸನ್ನಿಹಿತರಾಗಿರುವುದು ನಿಮಗಾಗಿಯೇ. ವಿಶೇಷತಃ ಶ್ರೀರಂಗದಲ್ಲಿ ನೆಲೆಸಿರುವುದೂ ನಿಮಗಾಗಿಯೇ. ನಮ್ಮ ಸಾನ್ನಿಧ್ಯದ ಫಲವನ್ನು ಪಡೆದುಕೊಳ್ಳಲು ಆಗುವಂತೆ ನಾವು ಅನುಗ್ರಹಿಸುತ್ತೇವೆ,'—ಎಂದು ಹೇಳಿ ಆಳ್ವಾರ್‌ರವರ ಮನಸ್ಸಿನ ತುಂಬ ತುಂಬಿಕೊಂಡನು, ಭಗವಂತನು ಹಾಗೆ ಮನದಲ್ಲಿ ನಿಂತು ಅವರನ್ನನುಭವಿಸಲು, ಆಳ್ವಾರ್‌ರವರೂ ಹೃಷ್ಟರಾಗಿ ಭಗವದನುಭವವನ್ನು ಹೊಂದಿದವರಾಗಿ– 'ನಾವು ಅನುಭವಿಸಬೇಕಾದುದು ಶ್ರೀರಂಗವನ್ನು' ಎಂದು ಹೇಳಿಕೊಂಡು ಕೃತಾರ್ಥರಾಗುತ್ತಾರೆ.

**ಕೈಮ್ಮಾನಂ ಮೞ ಕಳಿತ್ತೈ ಕಡಲ್ ಕಿಡಂದ ಕರುಮಣಿಯೈ**
**ಮೈಮ್ಮಾನಂ ಮರತಕತ್ತೈ ಮಱೈಯುರೈತ್ತ ತಿರುಮಾಲೈ**
**ಎಮ್ಮಾನೈ ಎನಕ್ಕೆನ್ಱುಂ ಇನಿಯಾನೈ ಪನಿಕಾತ್ತ**
**ಅಮ್ಮಾನೈ ಯಾನ್‌ಕಂಡದು ಅಣಿನೀರ್ ತೆನ್ನರಂಗತ್ತೇ ॥೧॥**

(ಮಾನಂಕೈ) ನೀಡಿದ ಕೈಯುನ್ನುಳ್ಳ (ಮೞಿ ಕಳಿತ್ತೈ) ಚಿಕ್ಕವಯಸ್ಸಿನ ಆನೆಯುನ್ನು ಹೋಲುವವನೂ, (ಕಡಲ್ ಕಿಡಂದ ಕರುಮಣಿಯೈ) ಸಾಗರದಲ್ಲಿ ಶಯನಿಸಿರುವ ನೀಲಮಣಿಯಂತಿರುವವನೂ, (ಮೈಮಾನಂ ಮರತಕತ್ತೈ) ಹಸಿರು ಬಣ್ಣವು ಅತ್ಯಧಿಕವಾಗಿರುವ ಮರತಕದ ಪಚ್ಚೆಮಣಿಯಂತಿರುವವನೂ, (ಮಱೈ ಉರೈತ್ತ ತಿರುಮಾಲೈ) ವೇದಗಳಿಂದ ಪ್ರತಿಪಾದಿಸಲ್ಪಟ್ಟ ಶ್ರಿಯಃಪತಿಯಾದವನೂ (ಎಮ್ಮಾನೈ) ನನಗೆ ಸ್ವಾಮಿಯಾದವನೂ, (ಎನಕ್ಕು ಎನ್ಱುಂ ಇನಿಯಾನೈ) ನನಗೆ ಎಲ್ಲ ಕಾಲದಲ್ಲಿಯೂ ಭೋಗ್ಯನಾಗಿರುವವನೂ, (ಪನಿ ಕಾತ್ತ ಅಮ್ಮಾನೈ) ಮಳೆಯಿಂದ ಪಶುಸಮೂಹವನ್ನು ಕಾಪಾಡಿದ ಪರಮನನ್ನು (ಯಾನ್ ಕಂಡದು) ನಾನು ಸೇವಿಸಲು ಪಡೆದುಕೊಂಡುದು ಎಲ್ಲಿ ಎಂದರೆ (ಅಣಿನೀರ್ ತೆನ್ ಅರಂಗತ್ತು) ಚೆಲುವಾದ ತೀರ್ಥಗಳಿಂದ ಸಮೃದ್ಧವಾದ ಶ್ರೀರಂಗದಲ್ಲಿ.

ಒಂದು ಆನೆಯು ಕೈಗಳನ್ನೂ ಕಾಲ್ಗಳನ್ನೂ ಹರಡಿಕೊಂಡು ಶಯನಿಸುವ ರೀತಿಯಲ್ಲಿ ಸ್ವಾಮಿ ಶಯನಿಸಿದ್ದಾನೆ ಭವ್ಯವಾಗಿ. ಸಮುದ್ರದಲ್ಲಿ ನೀಲರತ್ನವು ಶಯನಿಸಿದಂತೆ ಕ್ಷೀರಾಬ್ಧಿಯಲ್ಲಿ ಶಯನಿಸಿದವನು ಅವನು. ಶ್ಯಾಮಲವರ್ಣವು ಮಿಗಿಲಾಗಿ ಹರಡುವ ಮರತಕರತ್ನದಂತೆ ಇದ್ದಾನೆ. 'ಹ್ರೀಶ್ಚತೇ' 'ಅಸ್ಯೇಶಾನಾಂ' ಎಂದು ವೇದವು ಸ್ತುತಿಸುವುದಕ್ಕನುಗುಣವಾಗಿ ಶ್ರೀಭೂದೇವಿಯರೊಡನೆ ಸೇರಿದ್ದುಕೊಂಡು ನನ್ನನ್ನು ಅನನ್ಯಾರ್ಹನಾಗಿಸಿದವನು ಅವನು. ಅಶರಣ್ಯರನ್ನು ರಕ್ಷಿಸುವ ಮಹಾನುಭಾವ. 'ಗೋವರ್ಧನವನ್ನೆತ್ತಿ ಪಶುಗಳನ್ನು ಸಲಹಿದ,' 'ಕ್ಷೀರ ಸಮುದ್ರದಲ್ಲಿ ಶಯನಿಸಿದವನು' ಎಂದು ಯಾರೋ ಹೇಳಿದ ಮಾತನ್ನು ಕೇಳುವದಿರಲಿ ; ನಾನೇ ನನ್ನ ಕಣ್ಣುಗಳಿಂದ ಅವನು ಶ್ರೀರಂಗದಲ್ಲಿ ಶಯನಿಸಿರುವುದನ್ನು ಸಾಕ್ಷಾತ್ಕರಿಸಿಕೊಂಡೆ. ಅವನ ವಿಶ್ಲೇಷದ ಕಾರಣ ಉಂಟಾದ ಕಂಬನಿಯ ವರ್ಷವನ್ನೂ ತಡೆದು ರಕ್ಷಿಸಿದನೆಂಬುದೂ ಸೂಚಿತವಾಗಿದೆ.

**ಪೇರಾನೈ ಕುರುಂಗುಡಿ ಎಂಬೆರುಮಾನೈ ತಿರುತ್ತಣ್‌ಕಾ**
**ಲೂರಾನೈ ಕರಂಬನೂರುತ್ತಮನೈ ಮುತ್ತಿಲಂಗು**
**ಕಾರಾರ್ ತಿಣ್‌ಕಡಲೇೞುಂ ಮಲೈಯೇ ೞಿವ್ವುಲಹು**
**ಏೞುಂಡುಮ್**
**ಆರಾದು ಎನ್ರಿರುಂದಾನೈ ಕಂಡದು ತೆನ್ನರಂಗತ್ತೈ ॥೨॥**

(ಪೇರಾನೈ) ತಿರುಪ್ಪೇರ್ ನಗರಿಯಲ್ಲಿರುವವನೂ, (ಕುರುಂಗುಡಿಎಂಬೆರು ಮಾನೈ) ತಿರುಕ್ಕುರುಂಗುಡಿಯಲ್ಲಿರುವ ಸ್ವಾಮಿಯಾದವನೂ, (ತಿರುತ್ತಣ್ ಕಾಲೂರಾನೈ) ತಿರುತ್ತಣ್ ಕಾಲ್ ಕ್ಷೇತ್ರದಲ್ಲಿ ನಿತ್ಯವಾಸ ಮಾಡುವವನೂ (ಕರಂಬನೂರ್ ಉತ್ತಮನೈ) ತಿರುಕ್ಕರಂಬನೂರಿನಲ್ಲಿ ಉತ್ತಮನಾಗಿ ಪ್ರಕಾಶಿಸುವವನೂ, (ಮುತ್ತು ಇಲಂಗು) ಒಳಗೆ ಮುತ್ತುಗಳು ಪ್ರಕಾಶಿಸುವಂತಹವೂ (ಕಾರ್ ಆರ್ ತಿಣ್ ಕಡಲ್ ಏಟುಮ್) ಕಪ್ಪಾದ ಬಣ್ಣವು ಅತ್ಯಧಿಕವಾಗಿರುವುವೂ ದೃಢವಾಗಿರುವುವೂ ಆದ ಸಪ್ತಸಮುದ್ರಗಳನ್ನೂ, (ಏಟ್‌ಮಲೈ) ಸಪ್ತಕುಲಾಚಲಗಳನ್ನೂ, (ಇವ್ವೇಟುಉಲಹು) ಈ ಏಳು ಲೋಕಗಳನ್ನೂ, (ಉಂಡುಂ) ಪ್ರಳಯ ಕಾಲದಲ್ಲಿ ಭುಜಿಸಿಯೂ (ಆರಾದು ಎನ್ರು ಇರುಂದಾನೈ) 'ಸಾಲದು' ಎಂದು ತೃಪ್ತಿ ಹೊಂದದೆ ಇರುವವನೂ ಆದ ಪರಮಾತ್ಮನನ್ನು (ಕಂಡದು ತೆನ್ನರಂಗತ್ತು) ನಾನು ನೋಡಿದುದು ಎಲ್ಲಿ ಎಂದರೆ ಶ್ರೀರಂಗಕ್ಷೇತ್ರದಲ್ಲಿ.

ಸರ್ವಭೋಗ್ಯವಾಗುವಂತೆ ತಿರುಪ್ಪೇರ್‌ನಲ್ಲಿ ಸನ್ನಿಹಿತನಾಗಿರುವ ಸ್ವಾಮಿಯನ್ನೂ, ಆಳ್ವಾರ್ ಅವರ ಸ್ವಾತಂತ್ರ್ಯವು ನಡೆಯುವಂತಹುದೂ ಅವರಿಗೆ ವಿಶೇಷವಾಗಿ ಪ್ರಾಪ್ತಿಲಭಿಸಿದುದೂ ಆದ ತಿರುಕ್ಕುರುಂಗುಡಿಯಲ್ಲಿರುವ ದೇವನನ್ನೂ, ತನ್ನನ್ನು ಎಲ್ಲರಿಗೂ ಕೊಟ್ಟುಕೊಳ್ಳುವ ಔದಾರ್ಯದ ಕಾರಣ 'ಉತ್ತಮನ್' ಎಂಬ ಹೆಸರುಳ್ಳವನೂ ಆದ ಸ್ವಾಮಿಯನ್ನೂ ಇಲ್ಲಿ ಅನುಸಂಧಾನ ಮಾಡಿದ್ದಾರೆ, ದೃಢವಾದ ಸಪ್ತಸಮುದ್ರಗಳನ್ನೂ, ಕುಲಪರ್ವತಗಳನ್ನೂ ಸಪ್ತಲೋಕಗಳನ್ನೂ ತನ್ನ ಹೊಟ್ಟೆಯಲ್ಲಿಟ್ಟುಕೊಂಡು ರಕ್ಷಿಸಿದರೂ, ತಾನು ಏನನ್ನೂ ಉಪಕಾರ ಮಾಡದವನಂತೆ ಇರುತ್ತಿರುವ ದೇವನ ಔದಾರ್ಯವನ್ನು ಕೊಂಡಾಡಿದ್ದಾರೆ.

**ಏನಾಹಿ ಉಲಹು ಇಡನ್ದು ಅನ್ರು ಇರುನಿಲನುಂ**
**ಪೆರುನಿಶುಂಬುಂ**
**ತಾನಾಯ ಪೆರುಮಾನೈ ತನ್ ಅಡಿಯಾರ್ ಮನತ್ತು ಎನ್ರುಂ**
**ತೇನಾಹಿ ಅಮುದಾಹಿ ತಿಹಟ್‌ನ್ದಾನೈ ಮಹಿಟ್‌ನ್ದು**
**ಒರುಕಾಲ್**
**ಆನ್ ಆಯನ್ ಆನಾನೈ ಕಂಡದು ತೆನ್ನರಂಗತ್ತೇ ॥೩॥**

(ಅನ್ರು) ವರಾಹ ಕಲ್ಪದ ಆದಿಯಲ್ಲಿ (ಏನ್ ಆಹಿ) ಮಹಾವರಾಹರೂಪಿಯಾಗಿ ಅವತರಿಸಿ (ಉಲಹು ಇಡಂದು) ಭೂಮಿಯನ್ನು ಅಂಡಭಿತ್ತಿಯಿಂದ ಮೇಲಕ್ಕೆತ್ತಿ ತಂದವನೂ, (ಇರುನಿಲನುಮ್) ವಿಶಾಲವಾದ ಭೂಲೋಕವೂ (ಪೆರುವಿ ಶುಂಬುಂ) ವಿಶಾಲವಾದ ಅಂತರಿಕ್ಷ ಲೋಕವೂ (ತಾನ್ ಆಯ) ತನ್ನಲ್ಲಿ ಅಡಗುವಂತೆ ಮಾಡಿದ (ಪೆರುಮಾನ್ನೈ) ಸ್ವಾಮಿಯಾದವನೂ, (ತನ್ ಅಡಿಯಾರ್ ಮನತ್ತು) ತನ್ನ ಭಕ್ತರ ಮನಸ್ಸಿನಲ್ಲಿ (ಎನ್ರುಂ) ಯಾವಾಗಲೂ (ತೇನ್ಆಹಿ ಅಮುದು ಆಕಿ ತಿಹಟ್ನ್ದಾನ್ನೈ) ಜೇನಿನಂತೆಯೂ ಅಮೃತದಂತೆಯೂ ಪ್ರಕಾಶಿಸುತ್ತಿರುವವನೂ (ಒರುಕಾಲ್) ಹಿಂದೊಂದು ಕಾಲದಲ್ಲಿ (ವಿಹಿಟ್ನ್ದು) ಮನವೊಲಿದು (ಅನ್ ಆಯನ್ ಆನಾನ್ನೈ) ಪಶುಗಳನ್ನು ಕಾಯುವ ಗೋಪಾಲನಾಗಿ ಅವತರಿಸಿದವನಾದವನೂ ಆದ ನಮ್ಮ ಸ್ವಾಮಿಯನ್ನು (ಕಂಡದು ತೆನ್ ಅರಂಗತ್ತೇ) ನಾನು ಸಾಕ್ಷಾತ್ಕರಿಸಿದುದು ಶ್ರೀರಂಗಕ್ಷೇತ್ರದಲ್ಲಿ.

ಪ್ರಳಯಪಯೋಧಿಯಲ್ಲಿ ನಿಮಗ್ನವಾದ ಭೂಮಿಯನ್ನು ಮೇಲೆತ್ತಿ ತಂದ ಆ ಉಪಕಾರಕ. ಭೂಮ್ಯಂತರಿಕ್ಷಗಳೆಲ್ಲ ಅವನೇ ಎಂದು ಹೇಳುವಂತೆ ಎಲ್ಲವನ್ನೂ ವ್ಯಾಪಿಸಿದ ಆ ಸ್ವಾಮಿ. ಜಗತ್ತಿಗೆ ಬಂದ ಆಪತ್ತು ತನಗೆ ಬಂದ ಆಪತ್ತೆಂಬಂತೆ ಅಭಿಮಾನಿಸಿರುವವನು ಅವನು. ತನಗೆ ಅಸಾಧಾರಣರಾದ ಭಕ್ತರಿಗೆ ಅವನು ಸರ್ವವಿಧಭೋಗ್ಯನೂ ಉಜ್ವಲನೂ ಆಗಿದ್ದಾನೆ. ಪರಮ ಸೌಲಭ್ಯದಿಂದ ಗೋಪಾಲಕನಾಗಿ ಅವತರಿಸಿ ಪ್ರೀತಿ ಪ್ರಕರ್ಷದೊಡನೆ ವರ್ತಿಸಿದವನು. ಇಂಥ ಸ್ವಾಮಿಯನ್ನು ಶ್ರೀರಂಗಕ್ಷೇತ್ರದಲ್ಲಿ ನಾನು ಸಾಕ್ಷಾತ್ಕರಿಸಿಕೊಂಡೆ–ಎನ್ನುತ್ತಾರೆ ಆಳ್ವಾರ್ರವರು.

**ವಳರ್ನ್ದವನೈ ತಡಂಕಡಲುಳ್ ವಲಿ ಉರುವಿನ್ ತಿರಿ ಶಕಡಮ್**
**ತಳರ್ನ್ದು ಉದಿರ ಉದೈತ್ತವನೈ ತರಿಯೊಡು ಅನ್ರು**
**ಇರಣಿಯನೈ**
**ಪಿಳನ್ದವನೈ ಪೆರುನಿಲಂ ಈರಡಿನೀಟ್ಟಿ ಪಂಡು ಒರುನಾಳ್**
**ಅಳನ್ದವನೈ ಯಾನ್ ಕಂಡದು ಅಣಿನೀರ್ ತೆನ್ನರಂಗತ್ತೇ ॥೪॥**

(ತಡಂಕಡಲುಳ್) ವಿಶಾಲವಾದ ಸಮುದ್ರದಲ್ಲಿ (ವಳರ್ನ್ದವನೈ) ಶಯನಿಸಿ ಕರುಣಿಸುವವನೂ, (ವಲಿಉರುವಿನ್) ಬಲಯುತವಾದ ದೇಹವನ್ನು ಹೊಂದಿ

(ತಿರಿ ಶಕಟಮ್) ಉರುಳುತ್ತಾ ಬಂದ ಅಸುರಾವಿಷ್ಟವಾದ ಶಕಟವು (ತಳರ್‌ನ್ದು ಉದಿರ) ಕಟ್ಟುಗಳೆಲ್ಲಾ ಕಳಚಿಹೋಗಿ ಛಿನ್ನಭಿನ್ನವಾಗುವಂತೆ (ಉದೈತ್ತವನ್ನೈ) ಅದನ್ನು ಕಾಲಿನಿಂದ ಒದೆದವನೂ, (ಅನ್ರು) ಹಿಂದೊಮ್ಮೆ (ತರಿಯಾದು) ಸಹಿಸಲಸಾಧ್ಯವಾಗಿದ್ದ (ಇರಣಿಯನೈ ಪಿಳಂದವನ್ನೈ) ಹಿರಣ್ಯಕಶಿಪುವನ್ನು ಸೀಳಿ ಹಾಕಿದವನೂ (ಪಂಡು ಒರುಕಾಲ್) ಮತ್ತೊಮ್ಮೆ (ಈರ್ ಅಡಿನೀಟ್ಟಿ) ಎರಡು ಹೆಜ್ಜೆಗಳನ್ನು ಹರಡಿ (ಪೆರುನಿಲಂ ಅಳಂದವನ್ನೈ) ವಿಶಾಲವಾದ ಭೂಮಿಯು ನ್ನೆಲ್ಲಾ ಅಳೆದುಕೊಂಡವನೂ ಆದ ಪರಮಾತ್ಮನನ್ನು (ಯಾನ್ ಕಂಡದು ಅಣಿ ನೀರ್‌ತೆನ್ ಅರಂಗತ್ತೇ) ನಾನು ಸಾಕ್ಷಾತ್ಕರಿಸಿದುದು ಸುಂದರವಾದ ತೀರ್ಥಗಳ ನ್ನುಳ್ಳ ಶ್ರೀರಂಗದಲ್ಲಿ.

ಸರ್ವಾವತಾರಗಳಿಗೂ ಕಂದಸ್ಥಾನವಾದ ಕ್ಷೀರಾಬ್ಧಿಯಲ್ಲಿ ಶಯನಿಸಿದವನು ಆ ಸ್ವಾಮಿ. 'ಅಸುರರುಗಳು ಪ್ರಬಲರಾದರು' ಎಂಬ ವಾರ್ತೆ ಕೇಳಿದ ಕೂಡಲೇ ಬಂದು ಅವತರಿಸಿದ ಉಪಕಾರಕ ಅವನು. ಎಳೆಯನಾದ ಪ್ರಹ್ಲಾದ ಬಾಲಕ ನನ್ನು ಸಮುದ್ರದಲ್ಲಿ ತಳ್ಳುವುದು, ಮೇಲೆ ಬೆಟ್ಟಗಳನ್ನಿಟ್ಟು ಅಮುಕುವುದು ಮೊದಲಾದವುಗಳನ್ನು ಮಾಡಿದಾಗ ಅದನ್ನು ಸಹಿಸಲಾರದವನಾಗಿ ಸ್ವಾಮಿ ಶ್ರೀ ನೃಸಿಂಹರೂಪಿಯಾಗಿ ಮೈದೋರಿ ಆ ಹಿರಣ್ಯಕಶಿಪುವನ್ನು ಸೀಳಿ ಹಾಕಿದ.

**ನೀರ್ ಅಟಲ್ ಆಯ್ ನೆಡುನಿಲನಾಯ್ ನಿನ್ರಾನೈ ಅನ್ರು**
**ಅರಕ್ಕನ್**
**ಊರ್ ಅಟಲಾಲ್ ಉಂಡಾನೈ ಕಂಡಾರ್ ಪಿನ್ ಕಾಣಾಮೇ**
**ಸೇರಟಲಾಯ್ ಪೆರುವಿಶುಂಬಾಯ್ ಪಿನ್ ಮಱ್ಱೆಯೋರ್**
**ಮಂದಿರತ್ತಿನ್**
**ಅರಟಲಾಲ್‌ಉಂಡಾನ್ನೈ ಕಂಡದು ತೆನ್ನರಂಗತ್ತೇ ॥೫॥**

(ನೀರ್‌ಆಯ್ ಅಟಲ್ ಆಯ್) ಜಲಸ್ವರೂಪಿಯೂ ಅಗ್ನಿಸ್ವರೂಪಿಯೂ ಆಗಿ (ನೆಡುನಿಲನ್ ಆಯ್) ವಿಶಾಲವಾದ ಭೂಮಿಸ್ವರೂಪಿಯಾಗಿ (ನಿನ್ರಾನೈ) ಇರು ತ್ತಿರುವವನೂ, (ಅನ್ರು) ಅಂದು ರಾಮನಾಗಿ ಅವತರಿಸಿದಾಗ (ಅರಕ್ಕನ್ ಊರ್) ರಾವಣನ ನಗರವಾದ ಲಂಕೆಯನ್ನು (ಕಂಡಾರ್ ಪಿನ್ ಕಾಣಾಮೇ) ಮೊದಲು ನೋಡಿದವರು ಮತ್ತೆ ನೋಡುವುದಕ್ಕಾಗದಂತೆ (ಅಟಲಾಲ್

ಉಂಡಾನ್ನೈ) ಅಗ್ನಿಯ ರೂಪದಲ್ಲಿ ಭಸ್ಮ ಮಾಡಿದವನೂ, (ಪೇರ್ ಅಟಲ್ ಆಯ್) ದೊಡ್ಡ ಬಡಬಾಗ್ನಿಸ್ವರೂಪಿಯಾಗಿ (ಪೆರುವಿಶುಂಬು ಆಯ್) ಹಿರಿಯ ಪರಮಪದಕ್ಕೆ ನಿರ್ವಾಹಕನಾಗಿ (ಪಿನ್) ಅದರ ಮೇಲೆ (ಮರೈಯೋರ್ ಮಂದಿರತ್ತಿನ್ ಆರ್ ಅಟಲಾಲ್ ಉಂಡಾನ್ನೈ) ವೈದಿಕ ಬ್ರಾಹ್ಮಣರು ಅರ್ಪಿಸಿದ ಮಂತ್ರಪೂತವಾದ ಹವಿಸ್ಸನ್ನು ಅಗ್ನಿ ಮುಖದಲ್ಲಿ ಭುಜಿಸಿದವನೂ ಆದ ಸ್ವಾಮಿಯನ್ನು (ಕಂಡದು ತೆನ್ ಅರಂಗತ್ತೇ) ನಾನು ಸಾಕ್ಷಾತ್ಕರಿಸಿದುದು ಶ್ರೀರಂಗದಲ್ಲಿ.

'ಹಂತಾಹಮಿಮಾಃ ತಿಸ್ರೋ ದೇವತಾಃ' ಎಂದು ಛಾಂದೋಗ್ಯದಲ್ಲಿ ಹೇಳಿದಂತೆ ಜಲ, ತೇಜಸ್ಸು ಮತ್ತು ಪೃಥ್ವೀ ಇವುಗಳನ್ನು ಶರೀರವನ್ನಾಗಿ ಹೊಂದಿದವನು ಅವನು. ಕಾರಣವೂ ಕಾರ್ಯವೂ ತಾನೇ ಆಗಿ ನಿಂತವನವನು. ತ್ರಿವೃತ್ಕರಣವು ಪಂಚೀಕರಣಕ್ಕೆ ಉಪಲಕ್ಷಣ. ಇಲ್ಲಿ ಹೇಳದೆ ಇರುವ ಆಕಾಶ ಮತ್ತು ವಾಯುಗಳನ್ನೂ ಶರೀರವನ್ನಾಗಿ ಹೊಂದಿದವನು ಅವನು. ರಾವಣನ ನಗರಿಯಲ್ಲಿ ಕೋಟೆಗಳನ್ನೂ, ಅಟ್ಟಾಲಕಗಳನ್ನೂ ರಾಜಮಾರ್ಗಗಳನ್ನೂ ಕಂಡವರು ಉತ್ತರ ಕ್ಷಣದಲ್ಲಿ ಶ್ಮಶಾನಸದೃಶವಾಗಿ ಕಾಣುವಂತೆ ಅಗ್ನಿಯಿಂದ ಅದನ್ನು ಮುಗಿಸಿದವನು ಆ ದೇವ. ಬಡಬಾಗ್ನಿರೂಪಿಯೂ ಅವನೇ. ಭಕ್ತರಿಗೆ ಪ್ರಾಪ್ಯವಾದ ಪರಮಪದವೂ ಅವನೇ. ಮಂತ್ರಪೂತವಾದ ಹವಿಸ್ಸುಗಳನ್ನು ತ್ರೇತಾಗ್ನಿ ರೂಪದಲ್ಲಿ ಭುಜಿಸುವವನೂ ಅವನೇ.

**ತವಮ್ ಶಿನತ್ತೈ ತವಿರ್ ತ್ತು ಅಡೈಂದಾರ್ ತವನೆರಿಯೈ**
**ತರಿಯಾದು**
**ಕಂಜನೈ ಕೊನ್ರು ಅನ್ರು ಉಲಹಂ ಉಂಡುಮಿಟ್ನ**
**ಕರ್ಪಕತ್ತೈ**
**ವೆವಮ್ ಶಿನತ್ತ ಕೊಡುಂ ತೊಟಿಲೋನ್ ವಿಶೈಉರುವೈ**
**ಅಶೈವಿತ್ತ**
**ಅವಮ್ ಶಿರ್ಪೈ ಪುಳ್ ಪಾಹನೈ ಯಾನ್ ಕಂಡದು**
**ತೆನ್ನರಂಗತ್ತೇ ॥೬॥**

(ತವಮ್‌ಶಿನತ್ತೈ ತವಿರ್ತು) ತಮ್ಮ ದ್ವೇಷವನ್ನು ಬಿಟ್ಟು ಬಿಟ್ಟು (ಅಡೈಂದಾರ್) ತನ್ನನ್ನು ಆಶ್ರಯಿಸಿದವರಿಗೆ (ತವನೆರಿಯೈ) ಉಪಾಯ ಮಾರ್ಗವಾಗಿರುವನೂ, (ತರಿಯಾದು) ಅವನ ದುಷ್ಕರ್ಮಗಳನ್ನು ಸಹಿಸಲಾಗದೆ ಇದ್ದ ಕಾರಣ (ಕಂಜನೈ

ಕೊನ್ರು) ಕಂಸನನ್ನು ವಧಿಸಿದವನೂ, (ಅನ್ರು) ಹಿಂದೊಂದು ಕಾಲವಲ್ಲಿ (ಉಲಹಂ ಉಂಡು ಉಮಿೞ್ನ್ದ ಕರ್ಪಹತ್ತೈ) ಲೋಕಗಳನ್ನು ಭುಜಿಸಿ ಮತ್ತೆ ಹೊರ ಪಡಿಸಿದ ಉದಾರನೂ, (ವೆಮ್‌ಶಿನತ್ತ ಕೊಡುಂ ತೊೞಿಲೋನ್) ಅಧಿಕವಾದ ಕೋಪದಿಂದ ಮಾಡುವ ಸಂಹಾರ ಕಾರ್ಯವನ್ನುಳ್ಳ ರುದ್ರನ (ವಿಶೈಉರುವೈ) ಅಧಿಕವಾದ ಕೋಪದಿಂದ ಕೂಡಿದ ವೃಷಭವನ್ನು (ಅಶ್ಶೈವಿತ್ತ) ಬಾಣಾಸುರ ಯುದ್ಧದಲ್ಲಿ ತತ್ತರಿಸಿ ಬೀಳುವಂತೆ ಮಾಡಿದವನೂ, (ಅಮ್ ಶಿರೈ ಪುಳ್ ಪಾಹನ್ನೈ) ಸುಂದರವಾದ ರೆಕ್ಕೆಗಳುಳ್ಳ ಗರುಡನನ್ನು ವಾಹನವನ್ನಾಗಿ ಹೊಂದಿ ನಡೆಸುವವನೂ ಆದ ಸ್ವಾಮಿಯನ್ನು (ಯಾನ್ ಕಂಡದು ತೆನ್ ಅರಂಗತ್ತೇ) ನಾನು ಸಾಕ್ಷಾತ್ಕರಿಸಿಕೊಂಡುದು ಶ್ರೀರಂಗದಲ್ಲಿ.

ಅಸೂಯೆಗೆ ಕಾರಣವಾದ ದ್ವೇಷವನ್ನು ಬಿಟ್ಟು ತನ್ನನ್ನು ಆಶ್ರಯಿಸಿದವರಿಗೆ ದೃಢವಾದ ಮಾರ್ಗವಾದವನು ಅವನು. 'ಪ್ರವಕ್ಷ್ಯಾಮ್ಯನ ಸೂಯವೇ' ಎಂದು ಕರುಣಿಸಿದನಷ್ಟೇ ಅರ್ಜುನನಿಗೆ. ತನ್ನಲ್ಲಿ ಪ್ರದ್ವೇಷ ಇಲ್ಲದಿದ್ದರೆ ಸಾಕು. ಅಂಥವರಿಗೆ ಅವನೇ ಅವನ ಪ್ರಾಪ್ತಿಗೆ ಸಾಧನನಾಗುತ್ತಾನೆ. ಕಂಸನ ಕ್ರೂರಕರ್ಮಗಳನ್ನು ಸಹಿಸಿಕೊಂಡಿರಲಾರದೆ ಅವನನ್ನು ವಧಿಸಿದ ಸ್ವಾಮಿ. ತನ್ನನ್ನು ದ್ವೇಷಿಸದೆಯೂ ಆಶ್ರಯಿಸದೆಯೂ ಇದ್ದವರನ್ನೂ ಪ್ರಳಯಕಾಲದಲ್ಲಿ ರಕ್ಷಿಸಿದ ತನ್ನ ಹೊಟ್ಟೆಯೊಳಗೆ ಇಟ್ಟುಕೊಂಡು. 'ಹೀಗೆ ಇವರಿಗೆ ಉಪಕಾರ ಮಾಡಿದೆ' ಎಂದು ಕೂಡ ನೆನೆಯುವುದಿಲ್ಲವಂತೆ ಅವನು.

**ಶಿಂದನೈಯೈ ತವನೆರಿಯೈ ತಿರುಮಾಲೈ ಪಿರಿಯಾದು**
**ವಂದು ಎನದು ಮನತ್ತು ಇರುಂದ ವಡಮಲೈಯೈ**
**ಪರಿವಂಡು ಆರ್**
**ಕೊಂದು ಅಣೈಂದ ಪೊೞಿಲ್ ಕೋವಲ್ ಉಲಹಳಪ್ಪಾನ್**
**ಅಡಿ ನಿಮಿರ್ತ್ತ**
**ಅಂದಣನೈ ಯಾನ್ ಕಂಡದು ಅಣಿನೀರ್ ತೆನ್ನರಂಗತ್ತೇ ॥೭॥**

(ಶಿಂದನೈಯೈ) ನನ್ನ ಮನೋರಥಕ್ಕೆ ವಿಷಯನಾದವನೂ, (ತವಮ್ ನೆರಿಯೈ) ಉಪಾಯ ಮಾರ್ಗವಾಗಿರುವವನೂ, (ತಿರುಮಾಲೈ) ಶ್ರೀದೇವಿಯಲ್ಲಿ ವ್ಯಾಮೋಹಗೊಂಡವನೂ, (ವಡಮಲೈಯೈ) ಶ್ರೀ ವೇಂಕಟಾದ್ರಿಗೆ ನಿರ್ವಾಹಕ

ನಾಗಿದ್ದೂ (ವಂದು ಎನದು ಮನತ್ತು) ಆ ಜಾಗವನ್ನು ಬಿಟ್ಟು, ಬಂದು ನನ್ನ ಮನಸ್ಸಿನಲ್ಲಿ (ಪಿರಿಯಾದು ಇರುಂದ) ಅರೆಕ್ಷಣವೂ ಬಿಟ್ಟು ಅಗಲದಂತೆ ನೆಲಸಿರುವವನೂ, (ವರಿವಂಡು ಆರ್) ಸುಂದರವಾದ ದುಂಬಿಗಳು ಎರಗಿರುವ (ಕೊನ್ದು ಅಣ್ಕಿಂದ) ಹೂಗೊಂಚಲುಗಳಿಂದ ಸಾಂದ್ರವಾಗಿರುವ (ಪೊಟಿಲ್) ತೋಪುಗಳನ್ನುಳ್ಳ (ಕೋವಲ್) ತಿರುಕ್ಕೋವಲೂರಿನಲ್ಲಿ (ಉಲಹು ಅಳಪ್ಪಾನ್ ಅಡಿನಿಮಿರ್ತ್ತ ಅಂದಣನ್ನೈ) ಲೋಕಗಳನ್ನು ಅಳೆಯುವುದಕ್ಕಾಗಿ ತನ್ನ ಚೆಲುವಡಿಯನ್ನು ನೀಡಿ ಸೇವೆ ಕೊಡುತ್ತಿರುವ ಪರಮಾತ್ಮನನ್ನು (ಯಾನ್ ಕಂಡದು ಅಣಿನೀರ್ತೆನ್ ಅರಂಗತ್ತೇ) ನಾನು ಸಾಕ್ಷಾತ್ಕರಿಸಿದುದು ದಿವ್ಯತೀರ್ಥಗಳಿಂದ ಸಮೃದ್ಧವಾದ ಶ್ರೀರಂಗ ಕ್ಷೇತ್ರದಲ್ಲಿ.

ಭಗವಂತನ ಉಪಾಯತ್ವ ಪ್ರಕಾರವನ್ನನುಸಂಧಾನ ಮಾಡಿ ತಾವು ಪಡೆಯುವ ಪ್ರಾಪ್ಯಸ್ವರೂಪವನ್ನು ಹೊಂದಿಸುವವಳಾದ ಪುರುಷಕಾರ ಭೂತೆಯಾದ ಶ್ರೀದೇವಿಯ ಅನುಸಂಧಾನವನ್ನು ಹೊಂದಿದವರಾಗಿ, ದ್ವಯಮಂತ್ರದ ಪದಗಳಲ್ಲಿ ತೋರುವ ಪ್ರಾಪ್ಯತ್ವ ಪ್ರಾಪಕತ್ವಗಳನ್ನು ನೆನೆದು ಶ್ರೀರಂಗನಾಥನಲ್ಲಿ ಕೃತಜ್ಞತೆಯನ್ನು ವ್ಯಕ್ತಮಾಡಿದ್ದಾರೆ. 'ಅಡಿಮೈಶೆಯ್ಯವೇಂಡು ನಾಂ' ಎಂಬುವ ಮನೋರಥಕ್ಕೆ ವಿಷಯವಾಗಿ ಪ್ರಾಪ್ಯನಾಗಿದ್ದಾನೆ ಅವನು. ಪ್ರಾಪ್ಯನೂ ಪ್ರಾಪಕನೂ ಅವನೇ ಆಗಿದ್ದಾನೆ. ಪುರುಷಕಾರಭೂತೆಯಾದ ಶ್ರೀದೇವಿಯಲ್ಲಿ ವ್ಯಾಮೋಹಗೊಂಡವನವನು. ಬ್ರಹ್ಮಚಾರಿಯಾಗಿ ವಿನೀತ ವೇಷವನ್ನು ತೋರಿ ಇದೆಲ್ಲವನ್ನೂ ತನ್ನದನ್ನಾಗಿ ಮಾಡಿಕೊಂಡ ಆ ಮಹೋದಾರ. ಅಂಥವನನ್ನು ನಾನು ಶ್ರೀರಂಗದಲ್ಲಿ ಸಾಕ್ಷಾತ್ಕರಿಸಿಕೊಂಡೆ ಎನ್ನುತ್ತಾರೆ ಆಳ್ವಾರ್ರವರು.

**ತುವರಿತ್ತ ಉಡೈಯವರ್ಕ್ಕುಂ ತೂಯರ್ನ್ನೈ**
**ಇಲ್ಲಾಚ್ಚ ಮಣರ್ಕ್ಕುಂ**
**ಅವರ್ಹಳ್ಕ್ಕು ಅರುಳಿಲ್ಲಾ ಅರುಳಾನೈ, ತನ್ನಡೈನ್ದ**
**ಎಮರ್ಹಳ್ಕ್ಕುಂ ಅಡಿಯೋರ್ಕ್ಕುಂ ಎಮ್ಮಾರ್ಕ್ಕುಂ**
**ಎಮ್ ಅನ್ನೈಕ್ಕುಂ**
**ಅಮರರ್ಕ್ಕುಂ ಪಿರಾನಾರೈ ಕಂಡದು ತೆನ್ನರಂಗತ್ತೇ ॥೮॥**

(ತುವರಿತ್ತ ಉಡೈಯುವರ್‌ಕ್ಕುಂ) ಕಾವಿಬಟ್ಟೆ ಧರಿಸಿ ತಿರಿಯುವ ಬೌದ್ಧರಿಗೂ (ತೂಯ್‌ಮೈ ಇಲ್ಲಾ ಶಮಣರ್ಕ್ಕುಂ) ಪರಿಶುದ್ಧಿ ಇಲ್ಲದ ಜೈನರಿಗೂ (ಅವರ್ ಹಳ್ಳು) ಅಂಥ ಅವೈದಿಕರ ವಿಷಯದಲ್ಲಿ (ಅರುಳ್ ಇಲ್ಲಾ) ಕೃಪೆ ಮಾಡದವನೂ (ಅರುಳಾನೈ) ವೈದಿಕರ ಬಗೆಗೆ ಕೃಪೆ ತೋರುವವನೂ (ತನ್‌ಅಡ್ಡೆಂದ) ತನ್ನನ್ನು ಆಶ್ರಯಿಸಿದ (ಎಪುರ್‌ಹಳ್ಕುಂ) ನನಗೆ ಸೇರಿದವರಿಗೂ (ಅಡಿಯೇರ್‌ಕ್ಕುಂ) ನನಗೂ (ಎಮ್ಮಾರ್ಕ್ಕುಂ) ನಮ್ಮ ತಂದೆಯವರಿಗೂ, (ಎವ್ ಅನ್ನೈಕ್ಕುಂ) ನನ್ನ ತಾಯಿಗೂ, (ಅಮರರ್‌ಕ್ಕುಂ) ನಿತ್ಯಸೂರಿಗಳಿಗೂ (ಪಿರಾನಾರೈ) ಸ್ವಾಮಿಯಾದ ಮಹಾಮಹಿಮನನ್ನು (ಕಂಡದು ತೆನ್ ಅರಂಗತ್ತೇ) ನಾನು ಕಂಡುಕೊಂಡುದು ಶ್ರೀರಂಗದಲ್ಲಿ.

ಕಾಷಾಯ ವಸ್ತ್ರಧರಿಸಿದ ಬೌದ್ಧರು, ವೈದಿಕರಲ್ಲದ ಶ್ರಮಣರು ಮೊದಲಾದವರ ಬಗೆಗೆ ಕೃಪೆತೋರನು. 'ನ ತತ್ರ ಮೂಢಾಗಚ್ಛಂತಿ ಪುರುಷಾ ವಿಷಯಾತ್ಮಕಾಃ। ಡಂಭ ಲೋಭಮದಕ್ರೋಧ ದ್ರೋಹಮೋಹೈರಭಿದ್ರುತಾಃ ॥' ಎಂದು ಹೇಳಿದಂತೆ ಪರಮ ಪದಕ್ಕೆ ಸೇರಿಸುವಂತಹ ಕೃಪೆಯನ್ನು ಮಾಡದವನು. ವೇದೋಕ್ತ ಕರ್ಮದಿಂದ ತನ್ನನ್ನು ಆಶ್ರಯಿಸದೆ ಇರುವವರ ಮೇಲೆ ಆ ಕೃಪಾ ಸಮುದ್ರನ ಕೃಪೆ ಹರಿಯುವುದಿಲ್ಲ. ಹಾಲಿನ ಗಿಡವೇ ಆದರೂ ಅಕಾಲದಲ್ಲಿ ಚುಚ್ಚಿದರೆ ಹಾಲು ಬರುವುದಿಲ್ಲವಷ್ಟೇ ? ತನ್ನನ್ನು ಆಶ್ರಯಿಸಿದವರೊಡನೆ ಸಂಬಂಧ ಹೊಂದಿದವರಿಗೂ, ನ್ಯಾಸವಿದ್ಯಾನಿಷ್ಠರಾದ ತಮಗೂ, ಎನಗೆ ತಾಯಿಯೂ ತಂದೆಯೂ ಆದವರಿಗೂ, ನಿತ್ಯಸೂರಿಗಳಿಗೂ ಯಾವ ತಾರತಮ್ಯವೂ ಇಲ್ಲದೆ ಶೇಷಿಯಾದ ಆ ಸ್ವಾಮಿಯನ್ನು ಶ್ರೀ ರಂಗದಲ್ಲಿ ಕಂಡಕೊಂಡೆ.

**ಪಾಯ್‌ವಣ್ಣಂ ಮನತ್ತು ಅಹತ್ತಿ ಪುಲನೈಂದು ಶೆಲವೈತ್ತು**
**ನೆಯ್‌ವಣ್ಣಂ ನಿನ್ನೈಂದವರ್ಕ್ಕು ನೆಯ್ ನಿನ್ರ ವಿತ್ತಹನೈ**
**ನ್ಯೆಯ್‌ವಣ್ಣಂ ಕರುಮುಹಿಲ್ ಪೋಲ್ ತಿಹಟ್‌ವಣ್ಣ ಮರತಕತ್ತಿನ್**
**ಅವ್ವಣ್ಣವಣ್ಣನೈ ಯಾನ್ ಕಂಡದು ತೆನ್ ಅರಂಗತ್ತೇ ॥೯॥**

(ಪಾಯ್‌ವಣ್ಣಂ) ಪ್ರಕೃತಿ ಪ್ರಾಕೃತಗಳನ್ನು (ಮನತ್ತು ಅಹತ್ತಿ) ಮನಸ್ಸಿನಿಂದ ದೂರಮಾಡಿ (ಪುಲನ್ ಐನ್ದುಂ ಶೆಲವೈತ್ತು) ಪಂಚೇಂದ್ರಿಯಗಳನ್ನು ಆ ಕಡೆ

ತಳ್ಳಿ (ಮೆಯ್‌ವಣ್ಣಂ) ನೈಜವಾದ ಪ್ರೇಮದಿಂದ (ನಿನೈತ್ತವರ್ಕ್ಕ್ಕ್) ತನ್ನನ್ನು ಧ್ಯಾನಿಸುವವರಿಗೆ (ಮೇಯ್‌ನಿನ್ರು) ತನ್ನ ಸ್ವರೂಪವು ಇದ್ದುದು ಇದ್ದ ಹಾಗೆ ತೋರಿಸಿಕೊಡುವ (ವಿತ್ತಹನೈ) ಆಶ್ಚರ್ಯಭೂತನೂ, (ಮೈವಣ್ಣಂ) ಅಂಜನದ ಬಣ್ಣವನ್ನು ಹೋಲುವ ಬಣ್ಣವನ್ನೂ (ಕರುಮುಹಿಲ್ ಪೋಲ್ ತಿಹಟ್) ಕಾಳಮೇಘದಂತೆ ಬೆಳಗುವ (ವಣ್ಣಂ ಮರತಕತ್ತಿನ್ ಅವ್ವಣ್ಣಂ ವಣ್ಣನೈ) ಕಾಂತಿಯುನ್ನುಳ್ಳ ಮರತಕಮಣಿಯ ಅಂಥ ಬಣ್ಣವನ್ನೂ ತನ್ನ ವರ್ಣವನ್ನಾಗಿ ಉಳ್ಳ ಪರಮಾತ್ಮನನ್ನು (ಯಾನ್ ಕಂಡದು ತೆನ್ನರಂಗತ್ತೇ) ನಾನು ಸಾಕ್ಷಾತ್ಕರಿಸಿ ಕೊಂಡುದು ಶ್ರೀರಂಗದಲ್ಲಿ.

ಪ್ರಕೃತಿ ಮತ್ತು ಪ್ರಾಕೃತ ಪದಾರ್ಥಗಳು ಸ್ಥಿರವೆಂಬ ಭಾವನೆಯನ್ನು ಬಿಟ್ಟುಬಿಟ್ಟವರೂ, ಬಾಹ್ಯೇಂದ್ರಿಯಗಳು ವಿಷಯಗಳ ಕಡೆ ಹೋಗದಂತೆ ನಿಗ್ರಹಿಸಿದವರೂ ಆಗಿ ಆತ್ಮಯಾಥಾತ್ಮ್ಯಜ್ಞಾನಪೂರ್ವಕವಾಗಿ ತನ್ನಲ್ಲಿ ಭಕ್ತಿಯನ್ನು ಮಾಡುವವರಿಗೆ ತನ್ನ ಸ್ವರೂಪಾದಿಗಳನ್ನು ಇದ್ದುದು ಇದ್ದ ಹಾಗೆ ತೋರಿಸಿಕೊಡುವ ವಿಸ್ಮಯನೀಯನವನು. 'ವಿವೃಣುತೇ ತನೂಂ ಸ್ವಾಂ' ಎಂದು ಶ್ರುತಿ ಹೇಳುವುದಷ್ಟೇ ?

**ಆ ಮರುವಿ ನಿರೈಮೇಯ್‌ತ್ತ ಅಣಿ ಅರಂಗತ್ತಮ್ಮಾನೈ**
**ಕಾಮರು ಶೀರ್ ಕಲಿಕನ್ರಿ ಒಲಿಶೆಯ್‌ದ ಮಲಿ ಪುಹಟ್ ಶೇರ್**
**ನಾ ಮರುವು ತಮಿಟ್ ಮಾಲೈ ನಾಲಿರಂಡೋಡಿರಂಡನೈಯುಂ**
**ತಾಮ್ ಮರುವಿ ವಲ್ಲಾರ್ ಮೇಲ್ ಶಾರಾ ತೀವಿನೈ ತಾನೇ**

**॥೧೦॥**

(ಆ ನಿರೈ) ಪಶುಗಳ ಮಂದೆಗಳನ್ನು (ಮರುವಿ ಮೆಯ್‌ತ್ತ) ಪ್ರೀತಿಯಿಂದ ಮೇಯಿಸಿದವನೂ (ಅಣಿ ಅರಂಗತ್ತು ಅಮ್ಮಾನೈ) ತಿರುವರಂಗದಲ್ಲಿ ಬಿಜಯ ಮಾಡಿರುವವನೂ ಆದ ಸ್ವಾಮಿಯನ್ನು ಕುರಿತು (ಕಾಮರು ಶೀರ್) ಬಯಸಲು ತಕ್ಕದಾದ ಹಿರಿಮೆಯನ್ನುಳ್ಳ (ಕಲಿಕನ್ರಿ ಒಲಿಶೆಯ್‌ದ) ತಿರುಮಂಗೈ ಆಳ್ವಾರ್ರವರು ಅನುಗ್ರಹಿಸಿದುದೂ, (ಮಲಿಪ್ಪುಹಟ್‌ಶೇರ್) ಸಮೃದ್ಧವಾದ ಕೀರ್ತಿಯನ್ನುಳ್ಳುದೂ (ನಾ ಮರುವು) ನಾಲಗೆಯ ಮೇಲೆ ಹೊಂದಿಕೊಂಡು ನೆಲಸ ತಕ್ಕದ್ದೂ ಆದ (ತಮಿಟ್‌ಮಾಲೈನಾಲಿರಂಡೋಡು ಇರಂಡಿನೈಯುಂ) ಈ ಹತ್ತು ತಮಿಳು ಪಾಶುರಗಳನ್ನು (ತಾಮ್ ಮರುವಿ ವಲ್ಲಾರ್ ಮೇಲ್) ತಾವೇ

ಆದರದಿಂದ ಕಲಿಯುವವರ ಬಳಿ (ಶ್ರೀ ವಿಷ್ಣು ಶಾರಾ) ಪಾಪಗಳು ಸುಳಿಯಲಾರವು.

ಸ್ವರಕ್ಷಣಕ್ಕೆ ಯಾವ ಸಾಧನವೂ ಇಲ್ಲದ ಪಶುಗಳನ್ನು ಅವುಗಳ ಬಳಿಯೇ ಇದ್ದುಕೊಂಡು ರಕ್ಷಿಸಿ 'ಅದು ತಾನೇ ಪರಮ ದೆಶೆ' ಎನ್ನುವಂತೆ ಶ್ರೀರಂಗದಲ್ಲಿ ಬಂದು ಶಯನಿಸಿ ಸರ್ವಸ್ವಾಮಿಯಾದವನವನು. ಎಲ್ಲರೂ ಬಯಸತಕ್ಕ ವೈಷ್ಣವ ಶ್ರೀಯನ್ನು ಉಳ್ಳ ಆಳ್ವಾರ್ರವರು ಹಾಡಿದ ದಿವ್ಯ ಪ್ರಬಂಧ ಇದು. ಮನಸ್ಸಿನ ಸಹಕಾರವನ್ನೂ ಬಯಸದೆ ಇದನ್ನು ಒಂದು ಸಲ ನಾಲಗೆಯ ಮೇಲೆ ಇಟ್ಟುಕೊಂಡರೆ ಮುಂದೆಂದೂ ನಾಲಗೆ ಅದನ್ನು ಬಿಡುವುದಕ್ಕಾಗುವುದಿಲ್ಲ. ಮನಸ್ಸಿನೊಡನೆ ಪ್ರೀತಿಯಿಂದ ಇದನ್ನು ಕಲಿತವರ ವಿಷಯದಲ್ಲಿ, ಅವರು 'ಹೋಗಿಸಿಕೊಳ್ಳಬೇಕು'—ಎಂದೂ ನೆನೆಯದ ದುಷ್ಕರ್ಮಗಳೂ ಸಹ 'ಇದು ನಮಗೆ ಜಾಗವಲ್ಲ' ಎಂದು ಅಲ್ಲಿಂದ ಕಾಲ್ತೆಗೆದು ಓಡಿಹೋಗುವುವು.

## ಐದನೆಯ ಪತ್ತು—ಏಳನೆಯ ತಿರುಮೊಟಿ

## 'ಪಣ್ಡೈ'

### ಪ್ರವೇಶ

ಜಗತ್ಕಾರಣನಾದವನೂ, ಬ್ರಹ್ಮಾದಿಗಳಿಗೂ ಆಶ್ರಯಣೀಯನೂ, ಸಕಲ ಚೇತನರ ದುಃಖವನ್ನು ಹೋಗಲಾಡಿಸುವವನೂ, ಆಶ್ರಿತರಿಗೆ ಅಪೇಕ್ಷಿತವಾದ ಸಮಯಗಳಲ್ಲಿ ಬಂದೊದಗುವವನೂ ಆದ ಸರ್ವೇಶ್ವರನು ಅವತಾರಗಳನ್ನು ಮಾಡಿ ಅನುಗ್ರಹಿಸುವ ಕಾಲದಲ್ಲಿ ಅವನ ಅನುಗ್ರಹವನ್ನು ಪಡೆಯಲಾರದವರೂ ತನ್ನನ್ನು ಪಡೆಯುವಂತಾಗಲೆಂದು ಶ್ರೀರಂಗಕ್ಷೇತ್ರದಲ್ಲಿ ನಿತ್ಯವಾಸ ಮಾಡುತ್ತಿರುವುದನ್ನು ಕಂಡು ಅನುಭವಿಸುವ ಭಾಗ್ಯವನ್ನು ನಾನು ಹೊಂದಿದೆ ಎಂದು ಆಳ್ವಾರ್ರವರು ಪ್ರೀತಿ ಪುರಸ್ಸರವಾಗಿ ಈ ತಿರುಮೊಟಿಯಲ್ಲಿ ಹಾಡಿದ್ದಾರೆ.

ಪಂಡ್ಯೆ ನಾನ್ಮ‌ರೈಯುಂ ವೇಳ್ವಿಯುಂ
ಕೇಳ್ವಿಪ್ಪದಂಗಳುಂ ಪದಂಗಳಿನ್ ಪೊರುಳುಂ
ಪಿಂಡಮಾಯ್ ವಿರಿನ್ದ ಪಿರಂಗು ಒಳಿ ಅನಲುಂ
ಪೆರುಹಿಯ ಪುನಲೊಡು ನಿಲನುಮ್
ಕೊಂಡಲ್ ಮಾರುತಮುಂ ಕುರೈ ಕಡಲೇಟುಮ್
ಏಟುಮಾಮಲೈಹಳುಂ ವಿಶುಂಬುಂ
ಅಂಡಮುಂ ತಾನಾಯ್ ನಿನ್ರ ಎಂಬೆರುಮಾನ್
ಅರಂಗಂ ಮಾನಹರ್ ಅಮರ್‌ನ್ದಾ ನೇ ॥೧॥

(ಪಂಡ್ಯೆನಾಲ್‌ಮರೈಯುಂ) ಅನಾದಿಯಾದ ನಾಲ್ಕು ವೇದಗಳು, (ವೇಳ್ವಿಯುಂ) ಯಾಗಗಳೂ (ಕೇಳ್ವಿಪ್ಪದಂಗಳುಂ) ಕೇಳಿ ತಿಳಿಯಬೇಕಾದ ವ್ಯಾಕರಣವೂ (ಪದಂ ಗಳಿನ್ ಪೊರುಳುಂ) ಆಯಾ ಪದಗಳಿಂದ ಅರಿಯಲ್ಪಡುವ ಜೀವ ಸಮಷ್ಟಿಯೂ, (ಪಿಂಡಮಾಯ್‌ವಿರಿಂದ) ಪಿಂಡರೂಪವಾಗಿದ್ದು ಅನಂತರ ವಿಭಾಗವನ್ನು ಹೊಂದಿದವುಗಳಾದ (ಪೆರುಹಿಯ ಪುನಲೊಡು) ದ್ರವರೂಪವಾದ ಜಲವೂ (ನಿಲನುಂ) ಭೂಮಿಯೂ (ಕೊಂಡಲ್) ಮೇಘವೂ (ಮಾರುತಮುಂ) ವಾಯುವೂ (ಕುರೈಕಡಲ್ ಏಟುಂ) ಘೋಷಿಸುವ ಸಪ್ತಸಾಗರಗಳೂ, (ಏಟು ಮಾಮಲೈಹಳುಂ) ಸಪ್ತಕುಲಪರ್ವತಗಳೂ (ವಿಶುಂಬುಂ) ಆಕಾಶವೂ ಆದ ಇವುಗಳೊಡನೆ ಕೂಡಿದ (ಅಂಡಮುಂ) ಬ್ರಹ್ಮಾಂಡವೂ (ತಾನ್ ಆಯ್ ನಿನ್ರ ಎಂಬೆರುಮಾನ್) 'ತಾನು' ಎಂಬುವ ಮಾತಿನಲ್ಲಿ ಅಡಗಿರುವಂತೆ ತನಗೆ ಪ್ರಕಾರ ವನ್ನಾಗಿ ಹೊಂದಿರುವ ನಮ್ಮ ಸ್ವಾಮಿಯು (ಅರಂಗಂ ಮಾನಹರ್ ಅಮರ್ ನ್ದಾನ್) ತಿರುವರಂಗಂ ಎಂಬುವ ದೊಡ್ಡ ಆಲಯದಲ್ಲಿ ಬಂದು ನಿತ್ಯ ವಾಸ ಮಾಡುತ್ತಿದ್ದಾನೆ.

'ಪೂರ್ವೇ ಪೂರ್ವೇಭ್ಯೋ ವಚಏತದೂಚುಃ' ಎಂದಂತೆ ಪೂರ್ವ ಪೂರ್ವೋಚ್ಚಾರಣಕ್ರಮದಿಂದ ಅನಾದಿಕಾಲದಿಂದ ಬಂದ ನಿರ್ದುಷ್ಟವೂ ಪರಮ ಪ್ರಮಾಣವೂ ನಿತ್ಯವೂ ಆದ ವೇದಗಳು, ಆ ವೇದಗಳಲ್ಲಿ ವಿಧಿಸಿರುವ ಯಾಗಾದಿ ಗಳು, ಪದರೂಪದಲ್ಲಿಯೂ ಅಕ್ಷರರೂಪದಲ್ಲಿಯೂ ಶ್ರವಣಮಾಡಿ ತಿಳಿಯ ಬೇಕಾದ ವ್ಯಾಕರಣಶಾಸ್ತ್ರ, ಆಯಾ ಪದಗಳಿಂದ ತಿಳಿಯಲ್ಪಡುವ ಜೀವಸಮಷ್ಟಿ,

ಅಚಿತ್ಸಮಷ್ಟಿಯಿಂದ ವಿಭಾಗಗೊಂಡ ಪೃಥಿವ್ಯಾದಿ ಭೂತಪಂಚಕ, ಮೇಘಗಳು, ಸಮುದ್ರಗಳು, ಪರ್ವತಗಳು ಎಂಬುವ ಇವುಗಳೆಲ್ಲವನ್ನೂ ತನಗೆ ಪ್ರಕಾರ ವನ್ನಾಗಿ ಉಳ್ಳವನು ಆ ಪರಮಾತ್ಮನು. ಅವುಗಳೆಲ್ಲ ಅವನಿಗೆ ಶರೀರವಾಗಿವೆ. 'ತಾನಿ ಸರ್ವಾಣಿ ತದ್ವಪುಃ' ಎಂದಂತೆ, 'ಸದೇವ' ಎಂದು ಹೇಳಿದಂತೆ 'ಎಲ್ಲವೂ ಅವನೇ' ಆಗಿದ್ದಾನೆ. ಸರ್ವ ಶರೀರಿಯಾದವನು ಆ ಭಗವಂತನು. ಅಂಥ ಮಹಾಮಹಿಮನು ಶ್ರೀರಂಗದಲ್ಲಿ ಶಯಿನಿಸಿ ತನ್ನ ದಿವ್ಯವಾದ ದರ್ಶನ ವನ್ನು ಎಲ್ಲರಿಗೂ ಕೊಡುತ್ತಿದ್ದಾನೆ.

**ಇಂದಿರನ್ ಪಿರಮನ್ ಈಶನ್ ಎನ್ರು ಇವರ್‌ಹಳ್**
**ಎಣ್ ಇಲ್ ಪಲ್ ಕುಣಂಗಳೇ ಇಯತ್ತ**
**ತಂದೈಯುಂ ತಾಯುಂ ಮಕ್ಕಳುಂ ಮಿಕ್ಕ**
**ಶುತ್ತಮುಂ ಶುತ್ತನಿನ್ರು ಅಹಲಾ**
**ಪಂದಮುಂ ಪಂದಂ ಅರಪ್ಪದು ಓರ್ ಮರುಂದುಂ**
**ಪಾನ್ಮೈಯುಂ ಪಲ್ ಉಯಿರ್ಕ್ಕೆಲ್ಲಾಂ**
**ಅಂದಮುಂ ವಾಟ್‌ವುಂ ಆಯ ಎಂಬೆರುಮಾನ್**
**ಅರಂಗಂ ಮಾನಹರ್ ಅಮರ್‌ನ್ದಾನೇ** ॥೨॥

(ಇಂದಿರನ್ ಪಿರಮನ್ ಈಶನ್ ಎನ್ರು ಇವರ್‌ಹಳ್) ಇಂದ್ರ, ಬ್ರಹ್ಮ, ರುದ್ರ ಎಂಬುವ ಈ ದೇವತೆಗಳು (ಎಣ್ ಇಲ್) ಗಣನೆ ಮಾಡಲಾಗದ (ಪಲ್ ಕುಣಂ ಗಳೇ ಇಯತ್ತ) ಅನೇಕ ಕಲ್ಯಾಣಗುಣಗಳನ್ನು ಹೇಳುತ್ತಾ ಮಾಡುವ ಸ್ತೋತ್ರಕ್ಕೆ ಪಾತ್ರನಾದವನೂ, (ಪಲ್ ಉಯಿರ್ಕೆಲ್ಲಾಂ) ಜೀವರಾಶಿಗಳಿಗೆಲ್ಲಾ (ತಂದೈಯುಂ ತಾಯುಂ ಮಕ್ಕಳುಂ) ತಂದೆ, ತಾಯಿ, ಮಕ್ಕಳು, (ಮಿಕ್ಕ ಶುತ್ತಮುಂ) ಅಸಂಖ್ಯರಾದ ಜ್ಞಾತಿಗಳು, (ಶುತ್ತನಿನ್ರು ಅಹಲಾ ಪಂದಮುಂ) ಸುತ್ತುವರಿ ದಿರುತ್ತಾ ಬಿಟ್ಟಗಲದ ಬಂಧುವರ್ಗವೂ (ಪದಂ ಅರುಪ್ಪದು ಓರ್ ಮರುಂದುಂ) ಸಂಸಾರ ಬಂಧವನ್ನು ಕತ್ತರಿಸಿ ಹಾಕುವ ದಿವ್ಯೌಷಧವೂ (ಅಂದಮುಂ ವಾಟ್‌ವುಂ ವಿನಾಶವೂ ಬಾಳ್ವೆಯೂ (ಆಯ) ತಾನೇ ಆಗಿರುವವನೂ ಆದ (ಎಂಬೆರುಮಾನ್) ನಮ್ಮ ಸ್ವಾಮಿಯಾದವನು (ಅರಂಗಂ ಮಾನಹರ್ ಅಮರ್‌ನ್ದಾನ್) ಶ್ರೀರಂಗ ಕ್ಷೇತ್ರದಲ್ಲಿ ನೆಲಸಿದ್ದಾನೆ.

ಇಂದ್ರಾದಿ ದೇವತೆಗಳೂ ಸ್ತುತಿಸಿ ಮುಗಿಸುವುದಕ್ಕಾಗದಂತಹ ಅನವಧಿಕವೂ ಅತಿಶಯವೂ ಅಸಂಖ್ಯವೂ ಆದ ಕಲ್ಯಾಣಗುಣಗಳನ್ನುಳ್ಳವನು ಅವನು. ಸರ್ವವಿಧ ಬಂಧುವಾದವನೂ ಅವನೇ. ಸಂಸಾರ ಬಂಧನವನ್ನು ನಿವರ್ತನಗೊಳಿಸುವ ದಿವ್ಯೌಷಧ ಅವನು. ಐಹಿಕಾಮುಷ್ಮಿಕವಾದ ಫಲಗಳೂ ಮೋಕ್ಷಾನಂದವೂ ಲಭಿಸುವುದು ಅವನಿಂದಲೇ. ಸಕಲ ಲೋಕಗಳ ಸೃಷ್ಟಿ ಸ್ಥಿತಿಸಂಹಾರಗಳು ಅವನಿಂದಲೇ ಆಗುವುವು. ಅಂಥ ಪರಾತ್ಪರನು ಸಕಲ ಮನುಜನಯನಗೋಚರನಾಗಿ ಶ್ರೀರಂಗದಲ್ಲಿ ಪವಡಿಸಿದ್ದಾನೆ !

**ಮನ್ನುಮಾನಿಲನುಂ ಮಲೈಹಳುಂ ಕಡಲುಂ**
**ವಾನಮುಂ ತಾನವರ್ ಉಲಹುಂ**
**ತುನ್ನುಮಾ ಇರುಳ್ ಆಯ್ ತುಲಂಗು ಒಳಿಶುರುಂಗಿ**
**ತೊಲ್ಲೈ ನಾನ್ಮರೈಹಳುಂ ಮರೈಯ**
**ಪಿನ್ನುಂ ವಾನವರ್ಕ್ಕುಂ ಮುನಿವರ್ಕ್ಕುಂ**
**ನಲ್‌ಹಿ ಪಿರಂಗು ಇರುಳ್ ನಿರಂ ಕೆಡ, ಒರುನಾಳ್**
**ಅನ್ನಮಾಯ್ ಅನ್ರು ಅಂಗು ಅರುಮರೈ ಪಯನ್ದಾನ್**
**ಅರಂಗಂ ಮಾ ನಹರ್ ಅಮರ್‌ನ್ದಾನೇ ॥೩॥**

(ಮನ್ನುಮಾನಿಲನುಂ) ಸ್ಥಿರವೂ ವಿಶಾಲವೂ ಆದ ಭೂಮಿಯೂ (ಮಲೈಹಳುಂ) ಬೆಟ್ಟಗಳೂ (ಕಡಲುಂ ವಾನಮುಂ) ಸಮುದ್ರಗಳೂ ಮತ್ತು ಆಕಾಶವೂ (ತಾನವರ್ ಉಲಕುಂ) ಅಸುರರ ಲೋಕವೂ ಆದ ಇವುಗಳೆಲ್ಲವೂ (ತುನ್ನುಮಾ ಇರುಳ್ ಆಯ್) ಸಾಂದ್ರವಾದ ತಮಸ್ಸಿನಿಂದ ಆವೃತವಾಗಿ ಹೋಗಿ (ತುಲಂಗು ಒಳಿಶುರುಂಗಿ) ಚೆಲ್ಲುವ ಪ್ರಕಾಶವು ಸಂಕುಚಿತವಾಗಿ ಹೋಗಿರಲು (ತೊಲ್ಲೈ ನಾಲ್‌ಮರೈಹಳುಂ ಮರೈಯ) ಅನಾದಿಯಾದ ನಾಲ್ಕು ವೇದಗಳೂ ಮರೆಯಾಗಿ ಹೋಗಿರಲು (ಪಿನ್ನುಂ ವಾನವರ್‌ಕ್ಕುಂ ಮುನಿವರ್ಕ್ಕುಂ ನಲ್‌ಹಿ) ಮತ್ತೆ ದೇವತೆಗಳಿಗೂ ಋಷಿಗಳಿಗೂ ಕೃಪೆಮಾಡಿ (ಪಿರಂಗು ಇರುಳ್ ನಿರಂ ಕೆಡ) ನಿಬಿಡವಾದ ಕತ್ತಲು ನಾಶ ಹೊಂದುವಂತೆ (ಅನ್ರು ಒರುನಾಳ್ ಅಂಗು) ಹಿಂದೆ ಒಂದಾನೊಂದು ಕಾಲದಲ್ಲಿ (ಅನ್ನಮಾಯ್) ಹಂಸವಾಗಿ (ಅರುಮರೈ ಪಯನ್ದಾನ್) ದಿವ್ಯವಾದ ವೇದಗಳನ್ನು ಪ್ರದಾನ ಮಾಡಿ ಅನುಗ್ರಹಿಸಿದ ಲೋಕ

ನಾಥನು (ಅರಂಗಂ ಮಾ ನಹರ್ ಅಮರ್‌ನ್ದಾನ್) ಶ್ರೀರಂಗದಲ್ಲಿ ನಿತ್ಯವಾಸಿಯಾಗಿದ್ದಾನೆ.

ಬ್ರಹ್ಮಾದಿಗಳಿಗೆ ಆಶ್ರಯನಾಗಿರುವ ಸ್ವಾಮಿಯು ಅವರಿಗೆ ವೇದಗಳನ್ನು ಪ್ರದಾನ ಮಾಡುವುದರ ಮೂಲಕ ಅವರ ದುಃಖವನ್ನು ಹೋಗಲಾಡಿಸಿದ ನೆಂಬುದನ್ನು ಇಲ್ಲಿ ವರ್ಣಿಸಿದೆ. 'ಯೋವೈ ವೇದಾಂಶ್ಚ ಪ್ರಹಿಣೋತಿ' ಎಂದು ಶ್ರುತಿ ಹೇಳುವುದಷ್ಟೇ ? ಒಮ್ಮೆ ವೇದದ ಉಪದೇಶ ಮಾಡಿದ ಮೇಲೆ ಅದನ್ನು ಉಳಿಸಿಕೊಳ್ಳಬೇಕಷ್ಟೇ ? ಹಾಗೆ ಮಾಡದೆ ಅದನ್ನು ಕಳೆದುಕೊಂಡು ದುಃಖಿಸಿದಾಗ, 'ಇನ್ನು ನಾನೇನೂ ಮಾಡುವುದಕ್ಕಾಗುವುದಿಲ್ಲ'—ಎಂದು ಕೈಬಿಟ್ಟು ಬಿಡದೆ ದೇವತೆಗಳ ಮೇಲೆಯೂ ಬ್ರಹ್ಮನ ಮೇಲೆಯೂ ಕೃಪೆಮಾಡಿ, ಮೂಡಿದ್ದ ಕತ್ತಲು ಕಳೆದು ಹೋಗುವ ಹಾಗೆ, ಹಂಸರೂಪಿಯಾಗಿ ವೇದೋಪದೇಶವನ್ನು ಮಾಡಿದ ಪರಮೋಪಕಾರಕನು ಇವನು. ಅಂದು ಪ್ರಮಾಣವನ್ನು ಪ್ರಕಾಶಪಡಿಸಿದ ಆ ದಯಾಮಯ ಇಂದು ಪ್ರಮೇಯ ಭೂತನಾದ ತನ್ನನ್ನೇ ಪ್ರಕಾಶಪಡಿಸಿಕೊಂಡು ಶ್ರೀರಂಗದಲ್ಲಿ ಶಯನಿಸಿದ್ದಾನೆ.

**ಮಾ ಇರು ಕುನ್ರಂ ಒನ್ರು ಮತ್ತು ಆಹ**
**ಮಾಶುಣಂ ಅದನೊಡುಂ ಅಳವಿ**
**ಪಾ ಇರು ಪೌವಂ ಪಹಡು ವಿಂಡು ಅಲರ**
**ಪಡುತಿರೈ ವಿಶುಂಬಿಡೈ ಪಡರ**
**ಶೇ ಇರು ವಿಶುಂಬುಂ ತಿಂಗಳುಂ ಶುಡರುಂ**
**ತೇವರುಂ ತಾಮ್ ಉಡನ್ ತಿಶೈಪ್ಪ**
**ಆಯಿರಂತೋಳಾಲ್ ಅಲೈಕಡಲ್ ಕಡನ್ದಾನ್**
**ಅರಂಗಂ ಮಾನಹರ್ ಅಮರ್‌ನ್ದಾನೇ** ॥೪॥

(ಮಾಂ ಇರು ಕುನ್ರಂ ಒನ್ರು) ವಿಶಾಲವಾಗಿಯೂ ಉನ್ನತವಾಗಿಯೂ ಇರುವ ಮಂದರವೆಂಬುವ ಪರ್ವತವೊಂದನ್ನು (ಮತ್ತು ಆಹ) ಕಡೆಗೋಲಾಗಿ ಮಾಡಿಕೊಂಡು (ಅದನೊಡುಂ) ಆ ಬೆಟ್ಟದೊಡನೆ (ಮಾ ಶುಣಂ ಅಳವಿ) ವಾಸುಕಿ ಎನ್ನುವ ನಾಗವನ್ನು ಸುತ್ತಿ (ಪಾ ಇರು ಪಾವಮ್) ನೀಳವಾಗಿ ಹರಡಿರುವ ಸಮುದ್ರವೂ (ಪಹಡು ವಿಂಡು ಅಲರ) ಆನೆಯು ಘೀಂಕರಿಸುವಂತೆ ಘೋಷಿ

ಸಲು (ಪಡುತಿರೈ ವಿಶುಂಬಿಡೈ ಪಡರ) ಎದ್ದ ಅಲೆಗಳು ಆಕಾಶವನ್ನು ಮುಟ್ಟಿ ವ್ಯಾಪಿಸುವಂತೆಯೂ (ಶೇ ಇರು ವಿಶುಂಬು) ಬಹಳ ಮೇಲಿರುವ ಸ್ವರ್ಗಾದಿ ಲೋಕಗಳೂ (ತಿಂಗಳುಂ ಶುಡರುಂ) ಚಂದ್ರನೂ ಮತ್ತಿತರ ತೇಜಃ ಪದಾರ್ಥ ಗಳೂ (ತೇವರ್ ತಾ ಮುಂ) ದೇವತೆಗಳೂ (ಉಡನ್ ತಿಶೈಪ್ಪ) ಏಕಕಾಲದಲ್ಲಿ ಆಶ್ಚರ್ಯಪಡುವಂತೆಯೂ (ಅಲೈಕಡಲ್) ಹೆದ್ದೆರೆಗಳೇಳುತ್ತಿರುವ ಸಮುದ್ರ ವನ್ನು (ಆಯಿರಂತೋಳಾಲ್) ಅನೇಕಾನೇಕ ಬಾಹುಗಳಿಂದ (ಕಡೈನ್ದಾನ್) ಮಥನಮಾಡಿ ಕರುಣಿಸಿದ ಸ್ವಾಮಿಯು (ಅರಂಗಂ ಮಾನಹರ್ ಅಮರ್ನ್ದಾನ್) ಶ್ರೀರಂಗ ದಿವ್ಯಕ್ಷೇತ್ರದಲ್ಲಿ ನೆಲಸಿದ್ದಾನೆ.

ಅಗಲದಲ್ಲಿಯೂ ಉದ್ದದಲ್ಲಿಯೂ ಕೊರೆ ಇಲ್ಲದ ಮಂದರ ಪರ್ವತವನ್ನು ಕಡೆಗೋಲನ್ನಾಗಿಮಾಡಿ, ಅದನ್ನು ವಾಸುಕಿಯಿಂದ ಸುತ್ತಿ ಸಮುದ್ರವನ್ನು ಮಥಿಸಿದಾಗ ಆ ಸಮುದ್ರ ಘೋರವಾಗಿ ಭೋರ್ಗರೆಯಲು, ಮೇಲೆದ್ದ ಹೆದ್ದೆರೆಗಳು ಆಕಾಶವನ್ನೆಲ್ಲಾ ವ್ಯಾಪಿಸಿದವಂತೆ. ದೂರದಲ್ಲಿರುವ ಸ್ವರ್ಗ ಲೋಕಗಳು, ಚಂದ್ರನೇ ಮೊದಲಾದ ತೇಜಃ ಪದಾರ್ಥಗಳೂ ದೇವತೆಗಳೇ ಮೊದಲಾದವರೂ ವಿಸ್ಮಯಪಡುವಂತೆ ಆಯಿತು. ಆ ಪರಮಾತ್ಮನು ತನ್ನ ಅನೇಕ ಬಾಹುಗಳಿಂದ ಅದನ್ನು ಮಥನಮಾಡಿದಂತೆ ಕಂಡುಬಂದಿತು. ಹೀಗೆ ಅಮೃತಪ್ರದಾನ ಮಾಡಿ ದೇವತೆಗಳ ದುಃಖವನ್ನು ನೀಗಿಸಿದ ಕರುಣಾಕರ ಶ್ರೀರಂಗದಲ್ಲಿ ನಿತ್ಯ ವಾಸಮಾಡಿದ್ದಾನೆ!

**ಎಂಗನೇ ಉಯ್ವರ್ ತಾನವರ್ ನಿನೈಂದಾಲ್**
**ಇರಣಿಯೆನ್ ಇಲಂಗು ಪೂಣ್ ಅಹಲಂ**
**ಪೊಂಗು ವೆವ್ ಕುರುದಿ ಪೊನ್ ಮಲೈ ಪಿಳನ್ದು**
**ಪೊಟ್ಟಿತರುಂ ಅರುವಿ ಒತ್ತು ಇಟ್ಟಿಯು**
**ವೆವ್ ಕಣ್ ವಾಳ್ ಎಯಿರು ಓರ್ ವೆಳ್ಳಿಮಾವಿಲಂಗಲ್**
**ವಿಣ್ ಉರ ಕನಲ್ ವಿಟಿತ್ತು ಎಬುನ್ದದು**
**ಅಂಗನೇಯೊಕ್ಕ ಅರಿ ಉರು ಆನಾನ್**
**ಆರಂಗಂ ಮಾನಹರ್ ಅಮರ್ನ್ದಾನೇ** ॥೫॥

(ತಾನವರ್) ಅಸುರರುಗಳು (ನಿನ್ನೈಂದಾಲ್) ಹಿರಣ್ಯಕಶಿಪು ಪಟ್ಟಪಾಡನ್ನು ನೆನೆಸಿಕೊಂಡರೆ (ಎಂಗನೇ ಉಯಿರ್‌ಪರ್) ಹೇಗೆ ತಾನೇ ಬದುಕಿರಬಲ್ಲರು ? (ಇರಣಿಯನ್) ಹಿರಣ್ಯಕಶಿಪುವಿನ (ಪೂಣ್ ಇಲಂಗು ಅಹಲಂ) ಆಭರಣಗಳಿಂದ ಪ್ರಕಾಶಿಸುತ್ತಿರುವ ವಕ್ಷಃಸ್ಥಲದಿಂದ (ಪೊಂಗುವೆಮ್ ಕುರುತಿ) ಉಕ್ಕಿಹರಿಯುವ ಬಿಸಿರಕ್ತವು (ಪೊನ್‌ಮಲೈಪಿಳನ್ದು ಪೊಟಿತರುಂ) ಮೇರುಪರ್ವತವನ್ನು ಸೀಳಿ ಕೊಂಡು ಪ್ರವಹಿಸುವ ನದಿಯೋಪಾದಿಯಲ್ಲಿ (ಇಟಿಯ) ಪ್ರವಹಿಸುವಂತೆ (ವೆಮ್‌ಕಣ್) ಉಗ್ರವಾದ ಕಣ್ಣುಗಳನ್ನೂ (ವಾಳ್ ಎಯಿರು) ಕತ್ತಿಯಂ ತಿರುವ ಕೋರೆಹಲ್ಲುಗಳನ್ನೂ ಹೊಂದಿ (ಮಾ) ಮಹೋನ್ನತವೂ (ಓರ್‌ವೆಳ್ಳಿ ವಿಲಂಗಲ್)ಅದ್ವಿತೀಯವೂ ಆದ ರಜತಾದ್ರಿಯು (ವಿಣ್‌ಉರ) ಆಕಾಶವನ್ನು ವ್ಯಾಪಿಸಿ (ಕನಲ್‌ವಿಟಿತ್ತು) ಅಗ್ನಿಜ್ವಾಲೆಯನ್ನು ದಿಕ್ಕುಗಳಲ್ಲಿ ಪ್ರಸರಿಸುವಂತೆ (ಎಟುನ್ದದು ಅಂಗನೇ ಒಕ್ಕ) ಎದ್ದುನಿಂತಿದೆಯೋ ಎಂಬಂತೆ ಇರುವುದಾದ (ಅರಿಉರು ಆನಾನ್) ಶ್ರೀನೃಸಿಂಹರೂಪಿಯಾದ ಸರ್ವೇಶ್ವರನು (ಅರಂಗಂಮಾ ನಹರ್ ಅಮರ್‌ನ್ದಾನ್) ಶ್ರೀರಂಗ ಕ್ಷೇತ್ರದಲ್ಲಿ ನೆಲಸಿದ್ದಾನೆ.

ಭಗವಂತನಲ್ಲಿ ಅನುಕೂಲ್ಯಹೊಂದಿ, ಪ್ರಹ್ಲಾದನಂತೆ, 'ಇದು ನಮಗೋಸ್ಕರ ಮಾಡಿದ ಕೆಲಸ' ಎಂದಿರುವವರು ಉಜ್ಜೀವಿಸಬಹುದೇ ವಿನಾ ಶತ್ರುಪಕ್ಷವಾದ ಅಸುರವರ್ಗ ಇದನ್ನು ನೆನೆಸಿಕೊಂಡರೇ ಸಾಕು ಅವರು ಉಜ್ಜೀವಿಸುವುದಕ್ಕಾಗುವುದಿಲ್ಲ. ಮೇರುಪರ್ವತವನ್ನು ಸೀಳಿಕೊಂಡು ಬಂದು ಹರಿಯುವ ಜಲಪ್ರವಾಹದಂತೆ ಎಲ್ಲಿಂದ ಬರುತ್ತಿದೆ ಎಂಬುದು ಕಾಣವಂತೆ, ಘೋಷಿಸುತ್ತಾ ರುಧಿರ ಪ್ರವಾಹ ಆ ಹಿರಣ್ಯನ ದೇಹದಿಂದ ಹರಿಯಿತು. ಉನ್ನತವಾದ ರಜತಾದ್ರಿಯೊಂದು ಆಕಾಶದವರೆಗೂ ವ್ಯಾಪಿಸಿ ಅಗ್ನಿಕಲ್ಪವಾದ ನೇತ್ರಗಳಿಂದ ನೋಡುತ್ತಿರುವುದೋ ಎಂಬಂತೆ ಶ್ರೀನೃಸಿಂಹ ರೂಪವನ್ನು ಕೈಕೊಂಡ ಸ್ವಾಮಿ ಇಲ್ಲಿ ಶ್ರೀರಂಗದಲ್ಲಿ ಸನ್ನಿಹಿತನಾಗಿದ್ದಾನೆ. ಅಂಥ ವಿರೋಧಿ ವರ್ಗ ತಲೆದೋರಿದರೆ ಅದನ್ನು ಹೋಗಲಾಡಿಸಲೆಂದೇ ಹೀಗೆ ಇಲ್ಲಿ ನೆಲಸಿ ದ್ದಾನೆ.

ಆಯಿರಂ ಕುನ್ರಂ ಶೆನ್ರು ತೊಕ್ಕನೈಯ
ಅಡಲ್‌ಪುರೈ ಎಟಿಲ್ ತಿಹಟ್ ತಿರಳ್ ತೋಳ್
ಆಯಿರಂ ತುಣಿಯ ಅಡಲ್ ಮಲುಪತ್ತಿ
ಮತ್ತವನ್ ಅಹಲ್ ವಿಶುಂಬು ಅಣೈಯ
ಆಯಿರಂ ಪೆಯರಾಲ್ ಅಮರರ್ ಶೆನ್ರು ಇರೈಂಜ
ಅರಿದು ತುಯಿಲ್ ಅಲೈಕಡಲ್ ನಡುವೇ
ಆಯಿರಂ ಶುಡರ್ ವಾಯ್ ಅರವು ಅಣೈ ತುಯಿನ್ರಾನ್
ಅರಂಗಂ ಮಾ ನಹರ್ ಅಮರ್‌ನ್ದಾನೇ ॥೬॥

(ಆಯಿರಂ ಕುನ್ರಂ) ಸಾವಿರಪರ್ವತಗಳು (ಶೆನ್ರು ತೊಕ್ಕನೈಯ) ನಿಬಿಡವಾಗಿ ಸೇರಿದ ಹಾಗೆ ಇರುತ್ತಿರುವುವೂ (ಅಡಲ್‌ಪುರೈ) ಯುದ್ಧಾರ್ಹವಾಗಿರುವುವೂ (ತಿರಳ್) ಪುಷ್ಟವಾಗಿರುವುವೂ ಆದ (ತೋಳ್ ಆಯಿರಂ) ಕಾರ್ತವೀರ್ಯಾರ್ಜುನನ ಸಹಸ್ರ ಬಾಹುಗಳೂ (ತುಣಿಯ) ಕತ್ತರಿಸಿ ಬೀಳುವಂತೆ (ಅಡಲ್‌ಮಲು ಪತ್ತಿ) ತೀಕ್ಷ್ಣವಾದ ಪರಶುವನ್ನು ಕೈಯಲ್ಲಿ ಧರಿಸಿ (ಮತ್ತವನ್) ಆ ಕಾರ್ತವೀರ್ಯಾರ್ಜುನನನು (ಅಹಲ್ ವಿಶುಂಬು ಅಣೈಯ) ವಿಶಾಲವಾದ ವೀರಸ್ವರ್ಗವನ್ನು ಸೇರುವಂತೆ ಮಾಡಿ ಅನಂತರ (ಅಮರರ್ ಶೆನ್ರು) ದೇವತೆಗಳು ಸಮೀಪಿಸಿ (ಆಯಿರಂ ಪೆಯರಾಲ್ ಇರೈಂಜ) ಸಹಸ್ರನಾಮಗಳನ್ನು ಹೇಳಿಕೊಂಡು ಸ್ತುತಿಸಲು (ಅಲೈಕಡಲ್‌ನಡುವೇ) ಅಲೆಗಳೇಳುತ್ತಿರುವ ಸಮುದ್ರಮಧ್ಯದಲ್ಲಿ (ಶುಡರ್ ಆಯಿರಂ ವಾಯ್) ಪ್ರಕಾಶಿಸುವ ಸಹಸ್ರ ಮುಖಗಳನ್ನುಳ್ಳ (ಅರವು ಅಣೈ) ಆದಿಶೇಷನ ಶಯನದಲ್ಲಿ (ಅರಿದು ತುಯಿಲ್ ತುಯಿನ್ರಾನ್) ಯೋಗನಿದ್ರೆಯನ್ನು ಮಾಡತಕ್ಕ ಪರಮಾತ್ಮನು (ಅರಂಗಂ ಮಾನಹರ್ ಅಮರ್‌ನ್ದಾನ್) ಶ್ರೀರಂಗಕ್ಷೇತ್ರದಲ್ಲಿ ನೆಲಸಿದ್ದಾನೆ.

ದಿವ್ಯ ಪರಶುವನ್ನು ಕೈಯ್ಯಲ್ಲಿ ಹಿಡಿದು ಸಹಸ್ರ ಬಾಹ್ವರ್ಜುನನನ್ನು ವಧಿಸಿ ವೀರಸ್ವರ್ಗವನ್ನು ಸೇರುವಂತೆ ಮಾಡಿದ ಶ್ರೀ ಪರಶುರಾಮ. ಅವನಿಂದ ಪೀಡಿತರಾದ ದೇವತೆಗಳು ನೆಮ್ಮದಿ ಹೊಂದಿದವರಾಗಿ ಸಹಸ್ರನಾಮಗಳನ್ನು ಹೇಳಿಕೊಂಡು ಬಂದು ಸ್ತುತಿಸುವುದಕ್ಕಾಗುವಂತೆ ಸಮುದ್ರ ಮಧ್ಯದಲ್ಲಿ ಆದಿಶೇಷನ ದಿವ್ಯಶಯನದಲ್ಲಿ ಶಯನಿಸಿ ಯೋಗನಿದ್ರೆಯಲ್ಲಿ ಸೊಗಯಿಸಿದ ಆ

ಸರ್ವೇಶ್ವರ. ಹಾಗೆಯೇ ಲೋಕವೆಲ್ಲಾ ಕಾಣುವುದಕ್ಕಾಗುವಂತೆ ಶ್ರೀರಂಗಪಲ್ಲಿ ಸ್ವಾಮಿ ಆದಿಶೇಷನ ಹಾಸುಗೆಯಲ್ಲಿ ಶಯನಿಸಿದ್ದಾನೆ.

**ಶುರಿಕುಟಿಲ್ ಕನಿವಾಯ್ ತಿರುವಿನ್ನೈ ಪಿರಿತ್ತ**
**ಕೊಡುವೆಯ್ಯಿಲ್ ಕಡುವಿಶೈ ಅರಕ್ಕನ್**
**ಎರಿ ವಿೞಿತ್ತು ಇಲಂಗುಮಣಿಮುಡಿ ಪೊಡಿಶೆಯ್‌ದು**
**ಇಲಂಗೈ ಪಾೞ್ ಪಡುಪ್ಪತರ್ಕ್ಕು ಎಣ್ಣಿ**
**ವರಿ ಶಿಲೈ ವಳೈಯ ಅಡುಶರಂ ತುರನ್ದು**
**ಮರಿಕಡಲ್ ನೆರಿಪಡ, ಮಲೈಯಾಲ್**
**ಅರಿಕುಲಂ ಪಣಿಕೊಣ್ಡು ಅಲೈಕಡಲ್ ಅಡೈತ್ತಾನ್**
**ಅರಂಗಂ ಮಾನಹರ್ ಅಮರ್ನ್ದಾನೇ** ॥೭॥

(ಶುರಿ ಕುಟಿಲ್) ಸುಂದರವಾದ ಕೋಮಲಕುಂತಳಗಳನ್ನು (ಕನಿವಾಯ್) ಬಿಂಬಾಧರವನ್ನೂ ಉಳ್ಳ (ತಿರುವಿನ್ನೈ) ದೇವಿಯನ್ನು (ಪಿರಿತ್ತ) ಅಗಲಿಸಿದ (ಕೊಡುವೆಯ್ಯಿಲ್ ಕಡುವಿಶೈ) ಕ್ರೌರ್ಯದಲ್ಲಿ ತೀಕ್ಷ್ಣವಾದ ವೇಗವನ್ನುಳ್ಳ (ಅರಕ್ಕನ್) ರಾವಣನ (ಎರಿ ವಿೞಿತ್ತು ಇಲಂಗು ಮಣಿಮುಡಿ) ಅಗ್ನಿಯಂತೆ ಪ್ರಕಾಶಿಸುವ ರತ್ನಖಚಿತವಾದ ಕಿರೀಟಗಳನ್ನು (ಪೊಡಿಶೆಯ್‌ದು) ಪುಡಿಪುಡಿ ಮಾಡಿ (ಇಲಂಗೈ) ಲಂಕಾಪಟ್ಟಣವನ್ನು (ಪಾೞ್ ಪಡುಪ್ಪತರ್ಕ್ಕು ಎಣ್ಣಿ) ಹಾಳುಮಾಡಿ ಬಿಡಬೇಕೆಂದು ಸಂಕಲ್ಪಿಸಿ, ಸಮುದ್ರವನ್ನು ದಾಟಲು ಸಮುದ್ರರಾಜನನ್ನು ಉದ್ದೇಶಿಸಿ (ವರಿಶಿಲೈವಳೈಯ) ಸುಂದರವಾದ ಬಿಲ್ಲನ್ನು ಬಗ್ಗಿಸಿ (ಅಡುಶರಂ ತುರನ್ದು) ವಧಿಸುವ ಬಾಣಗಳನ್ನು ಪ್ರಯೋಗಿಸಿದಾಗ (ಮರಿಕಡಲ್ ನೆರಿಪಡ) ಅಲೆಗಳನ್ನುಳ್ಳ ಆ ಸಾಗರ ದಾರಿಗೆ ಬಂದು ದಾರಿ ಕೊಡಲು (ಅರಿಕುಲಂ ಪಣಿಕೊಂಡು) ವಾನರರ ಸಮೂಹವು ಸೇವೆ ಮಾಡಲು (ಅಲೈಕಡಲ್ ಮಲೈಯಾಲ್ ಅಡೈತ್ತಾನ್) ಪ್ರಕ್ಷುಬ್ಧವಾದ ಸಾಗರದಲ್ಲಿ ಬೆಟ್ಟಗಳಿಂದ ಸೇತುವೆಯನ್ನು ಕಟ್ಟಿದ ಪರಮನು (ಅರಂಗಂ ಮಾನಹರ್ ಅಮರ್ನ್ದಾನ್) ಶ್ರೀರಂಗದ ದಿವ್ಯಕ್ಷೇತ್ರದಲ್ಲಿರುತ್ತಿದ್ದಾನೆ.

'ಅನನ್ಯಾ ರಾಘವೇಣಾಹಂ' ಎಂದೂ 'ಅನನ್ಯಾ ಹಿ ಮಯಾ ಸೀತಾ' ಎಂದೂ ಹೇಳುವಂತೆ ಇದ್ದ ಇಬ್ಬರನ್ನೂ ಅಗಲಿಸಿದವನೂ ಕ್ರೌರ್ಯವನ್ನೂ

ವೇಗವನ್ನೂ ಉಳ್ಳವನೂ ಆದ ರಾವಣನನ್ನು ನಿಗ್ರಹಿಸಲು ಸಂಕಲ್ಪಿಸಿದ ಶ್ರೀರಾಮ. ಲಂಕೆಯನ್ನು ಭಸ್ಮ ಮಾಡಿ ಬಿಡಲು ಸಂಕಲ್ಪಿಸಿದ ಆ ಪ್ರಭು, ದರ್ಶನೀಯವಾದ ಬಿಲ್ಲನ್ನು ಬಗ್ಗಿಸಿ ಬಾಣವನ್ನು ಹೂಡಿದಾಗ ಹೆದರಿ ಬಂದು ಶರಣಾದ ಸಮುದ್ರರಾಜನು ಸೇತುಬಂಧನ ಮಾಡಲು ಸೂಚಿಸಿದಾಗ, ವಾನರ ಸಮೂಹ ಬೆಟ್ಟಬೆಟ್ಟಗಳನ್ನೇ ತಂದು ಆ ಸಮುದ್ರದಲ್ಲಿ ಹಾಕುವಂತೆ ಮಾಡಿ ಸೇತುವೆಯನ್ನು ರಚಿಸಿ ತನ್ನ ಪರಾತ್ಪರತ್ವವನ್ನು ತೋರಿದ ಪ್ರಭು ಈ ಶ್ರೀರಂಗ ದಲ್ಲಿ ಪವಡಿಸಿದ್ದಾನೆ.

**ಊೞಿ ಆಯ್ ಓಮತ್ತು ಉಚ್ಚಿ ಆಯ್**
**ಒರುಕಾಲುಡೈಯ ತೇರ್ ಒರುವನಾಯ್ ಉಲಹಿಲ್**
**ಶೂೞಿಮಾಲ್‌ಯಾನೈ ತುಯರ್ ಕೆಡುತ್ತು**
**ಇಲಂಗೈ ಮಲಂಗ ಅನ್ರು ಅಡುಶರಂತುರಂದು**
**ಪಾೞಿಯೊಲ್ ಮಿಕ್ಕ ಪಾರ್ತನುಕ್ಕು ಅರುಳಿ**
**ಪಹಲವನ್ ಒಳಿಕೆಡ ಪಹಲೇ**
**ಆೞಿಯಾಲ್ ಅನ್ರು ಆೞಿಯೈ ಮಱೈತ್ತಾನ್**
**ಅರಂಗಂ ಮಾನಹರ್ ಅಮರ್‌ನ್ದಾನೇ** ॥೮॥

(ಊೞಿಯಾಯ್) ಕಾಲವೇ ಮೊದಲಾದ ಸರ್ವಪದಾರ್ಥಗಳ ನಿರ್ವಾಹಕನಾಗಿ (ಓಮತ್ತು ಉಚ್ಚಿ ಆಯ್) ಯಜ್ಞಗಳಿಗೆ ಪ್ರಧಾನನಾಗಿ (ಒರುಕಾಲ್ ಉಡೈಯ ತೇರ್ ಒರುವನ್ ಆಯ್) ಒಂದೇ ಚಕ್ರವನ್ನುಳ್ಳ ರಥವನ್ನುಳ್ಳ ಸೂರ್ಯನಿಗೆ ಅಂತರಾತ್ಮನಾಗಿ (ಉಲಹಿಲ್ ಶೂೞಿಮಾಲ್ ಯಾನೈ) ಈ ಲೋಕದಲ್ಲಿ ಮುಖ ಪಟವನ್ನುಳ್ಳ ದೊಡ್ಡ ಆನೆಯ (ತುಯರ್ ಕೆಡುತ್ತು) ದುಃಖವನ್ನು ನೀಗಿದವ ನಾಗಿ, (ಮುನ್ನು) ಮತ್ತೊಂದು ಕಾಲದಲ್ಲಿ (ಇಲಂಗೈಮಲಂಗ ಅಡುಶರಂತು ರನ್ದು) ಲಂಕಾಪಟ್ಟಣವು ಭಂಗವಾಗುವಂತೆ ಕೊಲ್ಲುವ ಬಾಣಗಳನ್ನು ಪ್ರಯೋಗಿ ಸಿದವನಾಗಿ, (ಪಾೞಿಯಾಲ್ ಮಿಕ್ಕ ಪಾರ್ತನುಕ್ಕು ಅರುಳಿ) ಮಹಾವೀರನಾದ ಅರ್ಜುನನ ಮೇಲೆ ಅನುಗ್ರಹಮಾಡಿ (ಪಹಲವನ್ ಒಳಿಕೆಡ) ಸೂರ್ಯನ ಪ್ರಕಾಶವು ಮುಳುಗುವಂತೆ (ಪಹಲೇ) ಹಗಲಿನಲ್ಲಿಯೇ (ಆೞಿಯಾಲ್) ತನ್ನ ಚಕ್ರಯುಧದಿಂದ (ಆೞಿಯೈ ಅನ್ರು ಮಱೈತ್ತಾನ್) ಸೂರ್ಯನನ್ನು ಆ

ಕಾಲದಲ್ಲಿ ಮರೆಮಾಡಿದವನಾದ ಮಹಾಮಹಿಮನು (ಅರಂಗಂ ಮಾ ನಹರ್ ಅಮರ್‌ನ್ದಾನ್) ಶ್ರೀರಂಗದಲ್ಲಿ ನೆಲಸಿದ್ದಾನೆ.

ಕಾಲೋಪಲಕ್ಷಿತವಾದ ಸಕಲ ಪದಾರ್ಥಗಳಿಗೂ ಅವನೇ ನಿರ್ವಾಹಕನಾಗಿದ್ದಾನೆ.' ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ', ಎಂದೂ 'ಭೋಕ್ತಾರಂ ಯಜ್ಞ ತಪಸಾಂ' ಎಂದೂ ಹೇಳಿದಂತೆ ಸರ್ವಕರ್ಮಸಮಾರಾಧ್ಯನಾಗಿ ಶ್ರೇಷ್ಠನಾಗಿದ್ದಾನೆ. ಆದಿತ್ಯನಿಗೂ ಅಂತರಾತ್ಮನಾಗಿ ಉಪಾಸ್ಯನಾಗಿದ್ದಾನೆ. ಮುಖಪಟವನ್ನು ಹೊಂದಿ ಮದಮುದಿತವಾಗಿ ಲೋಕದಲ್ಲಿ ಸಂಚರಿಸುತ್ತಿದ್ದ ಗಜೇಂದ್ರನನ್ನು ರಕ್ಷಿಸಿದ ಕರುಣಾಕರ ಅವನು. ಸಹಸ್ರ ಸೂರ್ಯರುಗಳ ತೇಜಸ್ಸನ್ನುಳ್ಳ ಶ್ರೀ ಸುದರ್ಶನ ಚಕ್ರದಿಂದ ಸೂರ್ಯನನ್ನು ಮರೆಮಾಡಿದ ಅದ್ಭುತನವನು. ಆದಿತ್ಯನ ತೇಜಸ್ಸು ಕಣ್ಣಿನಿಂದ ನೋಡುವುದಕ್ಕಾಗುವುದರಿಂದ ಅವನ ಪ್ರಕಾಶ ಹರಡಿ ಕತ್ತಲೆ ಕಳೆಯುವುದು. ಆದರೆ ಶ್ರೀ ಸುದರ್ಶನದ ತೇಜಸ್ಸು ಕಣ್ಣಿನಿಂದ ನೋಡುವುದಕ್ಕಾಗದ ಕಾರಣ ಪ್ರಕಾಶದಿಂದ ಕಣ್ಣನ್ನು ಕೋರೈಸಿ ಕುರುಡಾಗಿ ಮಾಡಿತು. ಹಗಲಿನಲ್ಲಿಯೇ ಸೂರ್ಯನ ಪ್ರಕಾಶ ಮರೆಯಾಗುವಂತೆ ಹೀಗೆ ಆ ಸ್ವಾಮಿ ಮಾಡಿದ. ಶ್ರೀರಂಗದಲ್ಲಿ ತನ್ನ ದಿವ್ಯದರ್ಶನವನ್ನು ನೀಡುತ್ತಾ ನೆಲಸಿರುವನು ಅವನೇ.

**ಪೇಯಿನ್ ಆರ್‌ಮುಲೈ ಊಣ್‌ಪಿಳ್ಳೈ ಆಯ್**
**ಒರುಕಾಲ್ ಪೆರುನಿಲಂ ವಿಟುಂಗಿ ಅದು ಉಮಿೞ್‌ನ್ದ**
**ವಾಯನಾಯ್ ಮಾಲಾಯ್ ಆಲಿಲೈವಳರ್‌ನ್ದು**
**ಮಣಿಮುಡಿ ವಾನವರ್‌ತಮಕ್ಕು**
**ಶೇಯನಾಯ್ ಅಡಿಯೋರ್ಕ್ಕು ಅಣಿಯನ್ ಆಯ್**
**ವಂದು ಎನ್ ಶಿಂದೈಯುಳ್ ವೆನ್ ತುಯರ್ ಅರುಕ್ಕುಂ**
**ಆಯನಾಯ್ ಅನ್ರು ಕುನ್ರಂ ಒನ್ರು ಎಡುತ್ತಾನ್**
**ಅರಂಗಂ ಮಾನಹರ್ ಅಮರ್‌ನ್ದಾನೇ ॥೯॥**

(ಪೇಯಿನ್) ಪೂತನಿ ಎಂಬುವ ರಕ್ಕಸಿಯ (ಆರ್‌ಮುಲೈ) ವಿಷಪೂರ್ಣವಾದ ಸ್ತನವನ್ನು (ಊಣ್) ಉಣ್ಣ (ಪಿಳ್ಳೈ ಆಯ್) ಶಿಶುವಾಗಿ, (ಒರುಕಾಲ್) ಪ್ರಲಯಬಂದ ಒಂದು ಕಾಲದಲ್ಲಿ (ಪೆರುನಿಲಂ ವಿಟುಂಗಿ) ವಿಶಾಲವಾದ ಭೂಮಿ

ರಿಯನ್ನು ನುಂಗಿ (ಅದು ಉಮಿಳ್ನ್ದ) ಮತ್ತೆ ಸೃಷ್ಟಿಕಾಲದಲ್ಲಿ ಅದನ್ನು ಹೊರಗೆ ಹಾಕಿದ (ವಾರ್ಯ ಆಯ್) ಬಾಯಿಯನ್ನುಳ್ಳವನಾಗಿ(ಮಾಲ್, ಆಯ್) ಸರ್ವೇಶ್ವರನಾಗಿ (ಆಲ್ ಇಲೈವಳರ್ನ್ದು) ಆಲದೆಲೆಯ ಮೇಲೆ ಶಯನಿಸಿದವ ನಾಗಿ (ಮಣಿಮುಡಿವಾನವರ್‌ತಮಕ್ಕು) ಮಣಿಕಿರೀಟಗಳನ್ನು ಧರಿಸಿದ ದೇವತೆ ಗಳಿಗೆ (ಶೇಯನ್ ಆಯ್) ಎಟುಕದವನಾಗಿ (ಅಡಿಯೇರ್ಕು) ನನಗೆ (ಅಣಿಯನ್ ಆಯ್‌ವಂದು) ಸುಲಭನಾಗಿ ಹತ್ತಿರ ಬಂದು (ಎನ್ ಶಿಂದೈಯುಳ್) ನನ್ನ ಮನಸ್ಸಿನಲ್ಲಿದ್ದ (ವೆವ್‌ತುಯರ್ ಅರುಕ್ಕುಂ) ತೀವ್ರವಾದ ದುಃಖಗಳನ್ನು ಹೋಗಲಾಡಿಸುವವನಾಗಿ, (ಅನ್ರು ಆಯನ್ ಆಯ್) ಮತ್ತೊಮ್ಮೆ ಗೋಪಾಲ ಕೃಷ್ಣನಾಗಿ ಅವತರಿಸಿ (ಕುನ್ರಂ ಒನ್ರು ಎಡುತ್ತಾನ್) ಗೋವರ್ಧನ ಪರ್ವತ ವನ್ನು ಕೊಡೆಯಂತೆ ಮೇಲೆತ್ತಿ ಹಿಡಿದವನಾದ ಪರಮನು (ಅರಂಗಂ ಮಾನ ಹರ್ ಅಮರ್ನ್ದಾನ್) ಶ್ರೀರಂಗ ಕ್ಷೇತ್ರದಲ್ಲಿ ಬಂದು ನೆಲಸಿದ್ದಾನೆ.

ತಾಯಿಯ ಸ್ತನಕ್ಕೂ ಮತ್ತೊಬ್ಬರ ಸ್ತನಕ್ಕೂ ವ್ಯತ್ಯಾಸವನ್ನು ಅರಿಯ ಲಾರದಂತಹ ಮುಗ್ಧನಾಗಿ ಪೂತನಿಯ ವಿಷಸ್ತನ್ಯವನ್ನು ಪಾನಮಾಡಿದ. ಪ್ರಲಯಕಾಲದಲ್ಲಿ ವಿಶಾಲವಾದ ಭೂಮಿಯನ್ನು ತನ್ನ ಹೊಟ್ಟೆಯಲ್ಲಿಟ್ಟು ಕೊಂಡಿದ್ದರೂ ಅದು ಜೀರ್ಣವಾಗದುದರಿಂದ ಅದನ್ನು ಹೊರಗೆ ಉಗಿದನವನು. ಸರ್ವೇಶ್ವರನೂ, ಸರ್ವಾಧಿಕನೂ ಆದ ದೇವ ಚಿಕ್ಕಶಿಶುವಿನ ರೂಪ ಹೊಂದಿ, ಬೃಹತ್ತಾದ ಲೋಕಗಳನ್ನೆಲ್ಲಾ ತನ್ನ ಹೊಟ್ಟೆಯೊಳಗೆ ಅಡಗಿಸಿಕೊಂಡು, ಎಳೆಯ ಆಲದೆಲೆಯ ಮೇಲೆ ಶಯನಿಸಿದ. ಬ್ರಹ್ಮಾದಿಗಳಿಗೂ ದೂರಸ್ಥನಾದ ಆ ದೇವದೇವ ನನ್ನಂಥವರಿಗೆ ಪರಮ ಸುಲಭನಾಗಿದ್ದಾನೆ. ನನ್ನ ಹೃದಯ ದಲ್ಲಿ ಬಂದು ನೆಲಸಿ ನಾನು ಅಪೇಕ್ಷೆಯನ್ನು ತೋರದಿದ್ದರೂ ನನ್ನ ಮಾನಸ ವ್ಯಸನವನ್ನೆಲ್ಲಾ ನೀಗಿಸಿದ ಪರಮ ಕರುಣಾಕರ. ಗೋವರ್ಧನವನ್ನೆತ್ತಿ ಆ ದೇವ ಮಾಡಿದ ಉಪಕಾರವನ್ನರಿಯದ ಪಶುಗಳನ್ನೂ ಗೋಪರನ್ನೂ ಕಟಾಕ್ಷಿಸಿ ದವನು.

**ಪೊನ್ನು ಮಾಮಣಿಯುಂ ಮುತ್ತಮುಂ ಶುಮನ್ದು**
**ಪೊರು ತಿರೈ ಮಾ ನದಿ ಪುಡೈ ಶೂಳ್ನ್ದು**
**ಅನ್ನಂ ಮಾಡು ಉಲವುಂ ಅಲೈಪುನಲ್ ಶೂಳ್ನ್ದ**
**ಅರಂಗಂ ಮಾನಹರ್ ಅಮರ್ನ್ದಾನ್ಯೈ**

ಮನ್ನು ಮಾಮಾಡ ಮಂಗೈಯರ್ ತಲೈವನ್
ಮಾನವೇಲ್ ಕಲಿಯನ್ ವಾಯೊಲಿಹಳ್
ಪನ್ನಿಯ ಪನುವಲ್ ಪಾಡುವಾರ್ ನಾಳುಂ
ಪಟುವಿನ್ಯೆ ಪತ್ತು ಅರುಪ್ಪಾರೇ                    ॥೧೦॥

(ಪೊನ್ನುಂ ಮಾಮಣಿಯುಂ ಮುತ್ತುಮಉಂ ಶುಮಂನ್ದು) ಚಿನ್ನವನ್ನೂ ಅಮೂಲ್ಯವಾದ ರತ್ನಗಳನ್ನೂ ಮುತ್ತುಗಳನ್ನೂ ಕೊಚ್ಚಿಕೊಂಡು ಬಂದು (ತಿರೈ ಪೊರು) ಅಲೆಗಳನ್ನೆಬ್ಬಿಸಿಕೊಂಡು ಬರುವ (ಮಾನದಿ) ದೊಡ್ಡ ನದಿಯಾದ ಕಾವೇರಿಯಿಂದ (ಪುಡೈಶೂಟ್‌ನ್ದು) ಎರಡು ಕಡೆಯೂ ಸುತ್ತುವರಿಯಲ್ಪಟ್ಟು, (ಮಾಡು ಅನ್ನಂ ಉಲವುಂ) ಪಕ್ಕಗಳಲ್ಲಿ 'ಅನ್ನ' ಪಕ್ಷಿಗಳು ಹಾರಾಡುತ್ತಿರುವಂತಹ (ಅಲೈ ಪುನಲ್ ಶೂಟ್‌ನ್ದ) ಅಲೆಗಳೇಳುತ್ತಿರುವ ತಟಾಕಗಳಿಂದ ಸುತ್ತುವರಿಯಲ್ಪಟ್ಟಿರುವುದಾದ (ಅರಂಗಂ ಮಾನಹರ್) ಶ್ರೀರಂಗವೆನ್ನುವ ಶ್ರೇಷ್ಠತಮವಾದ ಕ್ಷೇತ್ರದಲ್ಲಿ (ಅಮರ್‌ನ್ದಾನೈ) ನಿತ್ಯವಾಸ ಮಾಡುತ್ತಿರುವ ಶ್ರೀರಂಗನಾಥನನ್ನು ಕುರಿತು (ಮನ್ನು ಮಾಮಾಡಂ ಮಂಗೈಯರ್ ತಲೈವನ್) ಶಾಶ್ವತವಾದ ದೊಡ್ಡ ಪ್ರಸಾದಗಳನ್ನುಳ್ಳ ತಿರುಮಂಗೈಯಲ್ಲಿರುವವರಿಗೆ ನಿರ್ವಾಹಕರಾದವರೂ (ಮಾನಂ ವೇಲ್) ಶ್ರೇಷ್ಠವಾದ ವೇಲಾಯುಧವನ್ನು ಧರಿಸಿರುವವರೂ ಆದ (ಕಲಿಯನ್) ಆಳ್ವಾರ್‌ರವರು (ವಾಯ್ ಒಲಿಹಳ್ ಪನ್ನಿಯ) ವಿಸ್ತಾರವಾಗಿ ಹಾಡಿದ (ಪನುವಲ್) ಈ ಪಾಶುರಗಳನ್ನು (ಪಾಡುವಾರ್) ಹಾಡುವವರು (ನಾಳುಂ) ಯಾವಾಗಲೂ (ಪಟುವಿನ್ಯೆ ಪತ್ತು ಅರುಪ್ಪಾರ್) ಪ್ರಾಚೀನವಾದ ಪಾಪಗಳನ್ನು ಅವುಗಳ ವಾಸನೆಯೂ ಉಳಿಯದಂತೆ ಹೋಗಲಾಡಿಸಿಕೊಳ್ಳುತ್ತಾರೆ.

ಮಹಾನದಿಯಾದ ಕಾವೇರಿ ಆ ದಿವ್ಯವಾದ ಶ್ರೀರಂಗ ಕ್ಷೇತ್ರವನ್ನು ಸುತ್ತುವರಿದಿದೆ. ಆ ಶ್ರೀರಂಗಕ್ಷೇತ್ರದಲ್ಲಿ ನದಿಯ ಪಕ್ಕದಲ್ಲಿಯೇ ಹಂಸಪಕ್ಷಿಗಳೇ ಮೊದಲಾದವು ಸಂಚರಿಸುತ್ತಿರುವ ಚಂದ್ರಪುಷ್ಕರಿಣಿಯೇ ಮೊದಲಾದ ತಟಾಕಗಳು ಸಮೃದ್ಧಿಯಾಗಿವೆ. ಇಂಥ ಕ್ಷೇತ್ರದಲ್ಲಿ ಶಯನಿಸಿದ ಸರ್ವೇಶ್ವರನನ್ನು ಶ್ರೀತಿರುಮಂಗೈ ಆಳ್ವಾರ್ ಅವರು ಸ್ತುತಿಸಿದ್ದಾರೆ ಇಲ್ಲಿ, ಪ್ರಲಯದಲ್ಲಿಯೂ ಅಳಿಯಲಾರದಂತಹ ಮಾಡಗಳಿಂದ ಕೂಡಿದ ತಿರುಮಂಗೈ ಕ್ಷೇತ್ರಕ್ಕೆ ನಿರ್ವಾಹಕರಾದ ಆಳ್ವಾರ್ ಅವರು ವೇಲಾಯುಧವನ್ನು ಪರಿಕರವನ್ನಾಗಿ ಹೊಂದಿದ್ದಾರೆ.

ಆವರು ಹಾಡಿದ ಸಕಲಲಕ್ಷಣ ಸಮನ್ವಿತವಾದ ಈ ದಿವ್ಯ ಪ್ರಬಂಧವನ್ನು ಅಭ್ಯಾಸ ಮಾಡುವವರ ಪ್ರಾಕ್ತನ ಕರ್ಮಗಳು ಸವಾಸನವಾಗಿ ನಾಶವಾಗುತ್ತವೆ.

—★—

### ಐದನೆಯ ಪತ್ತು—ಎಂಟನೆಯ ತಿರುಮೊಳಿ

## 'ಏಟ್ರ್ರೈ ಏದಲನ್'

### ಪ್ರವೇಶ

ಭಗವತ್ಪ್ರಸಾದದಿಂದಲೇ ತತ್ತ್ವತ್ರಯದ ಯಥಾರ್ಥವಾದ ಜ್ಞಾನವನ್ನು ಆಳ್ವಾರ್ರವರು ಅರಿತವರು. ಭಗವಂತನ ಸ್ವರೂಪವನ್ನೂ ಜೀವಾತ್ಮನ ಸ್ವರೂಪ ವನ್ನೂ ಭಗವತ್ಪ್ರಾಪ್ತಿಗೆ ಪ್ರತಿಬಂಧಕವಾದ ಪ್ರಕೃತಿಯ ಸ್ವರೂಪವನ್ನೂ ಯಥಾವತ್ತಾಗಿ ಇವರು ಕಂಡರು. ಭಗವಂತನು ಶ್ರಿಯಃಪತಿಯೂ, ಅಖಿಲ ಹೇಯ ಪ್ರತ್ಯನೀಕನೂ, ಸಮಸ್ತಕಲ್ಯಾಣಗುಣಾತ್ಮಕನೂ, ದಿವ್ಯಮಂಗಳ ವಿಗ್ರಹ ವಿಶಿಷ್ಟನೂ, ಉಭಯ ವಿಭೂತಿನಾಥನೂ, ನಿರತಿಶಯ ಭೋಗ್ಯನೂ ಆದವನು. ಜೀವಾತ್ಮನಾದರೋ ಅನನ್ಯಾರ್ಹನೂ, ಅತ್ಯಂತ ಪರ ತಂತ್ರನೂ, ಆ ಪರಮಾತ್ಮನಿಗೆ ಪ್ರಕಾರ ಭೂತನೂ ಆಗಿ ಆ ಪರಮಾತ್ಮನನ್ನೇ ಪ್ರಾಪ್ಯ ಪ್ರಾಪಕಗಳನ್ನಾಗಿ ಉಳ್ಳವನು. ಸ್ವಸ್ವರೂಪ-ಪರಸ್ವರೂಪವನ್ನು ಮರೆಸು ವುದೂ. ತನ್ನಲ್ಲೇ ಭೋಗ್ಯಬುದ್ಧಿಯನ್ನುಂಟುಮಾಡುವುದೂ ಆದ ಪ್ರಕೃತಿ ತತ್ತ್ವ ವಿರೋಧಿತ್ವವನ್ನೇ ಲಕ್ಷಣವನ್ನಾಗಿ ಉಳ್ಳದಾಗಿದೆ.

ಈ ವಿರೋಧಿಯನ್ನು ಹೋಗಲಾಡಿಸಿಕೊಂಡು ಪ್ರಾಪ್ಯವಾದ ಪರಮಾತ್ಮ ನನ್ನು ಹೊಂದಬೇಕಾದರೆ ಒಂದು ಉಪಾಯದ ಪರಿಗ್ರಹ ಆಗಬೇಕಷ್ಟೇ? ಅದಕ್ಕಾಗಿ ಆ ಪರಮಾತ್ಮನನ್ನೇ ಸಾಧನತ್ವೇನ ಆಶ್ರಯಿಸಬೇಕು. ಹಾಗೆ ಆಶ್ರಯಿಸುವುದಕ್ಕೆ ನಮಗೆ ಪರಮಾತ್ಮನ ಪರ, ವ್ಯೂಹ, ವಿಭವ, ಹಾರ್ದ ರೂಪಗಳಿಗಿಂತ ಅರ್ಚಾರೂಪವು ಅತ್ಯಂತೋಪಯುಕ್ತವಾಗಿದೆ. ಭಗವಂತನು

ಅರ್ಚಾವತಾರಿಯಾಗಿ ಆಶ್ರಿತರ ಅಭಿಮತಗಳನ್ನು ಕರುಣಿಸುವುದಕ್ಕೂ ಆಶ್ರಯ ಣೀಯನಾಗಿರುವುದಕ್ಕೂ ಅನೇಕ ದಿವ್ಯಕ್ಷೇತ್ರಗಳಲ್ಲಿ ತನ್ನ ಸಾನ್ನಿಧ್ಯವನ್ನು ಕರು ಣಿಸಿದ್ದಾನೆ. ಅನನ್ಯಭಾವದಿಂದ ಆ ಸರ್ವಶರಣ್ಯನಲ್ಲಿ ಶರಣಾಗತಿಯನ್ನನುಷ್ಠಿ ಸಿದ್ದಾರೆ ಆಳ್ವಾರ್ ಅವರು. 'ನಿನ್ನ ಸೇವೆಯನ್ನು ಮಾಡಲು ತವಕಗೊಂಡು ಬಂದು ನಿನ್ನ ಪಾದಗಳನ್ನು ಸೇರಿದ್ದೇನೆ' ಎಂದು ತಮ್ಮ ಪ್ರಾಪ್ಯತ್ವರೆಯನ್ನು ಸೂಚಿಸಿ ಶ್ರೀರಂಗನಾಥನಲ್ಲಿ ಶರಣು ಹೋಗಿದ್ದಾರೆ. 'ಶ್ರೀರಂಗನಾಥನು ಶರಣ್ಯ. ಶರಣು ಹೋಗುವವರು ಆಳ್ವಾರ್ರವರು. ಪ್ರಾರ್ಥನೆ ಮಾಡಿರುವುದು ಸರ್ವಾಧಿಕಾರವಾದ ದ್ರಾವಿಡ ಭಾಷೆಯಲ್ಲಿ.' ಈ ಪಾಶುರಗಳನ್ನು ಹೇಳಿದರೇ ಸಾಕು ; ಶ್ರೀರಂಗನಾಥನು ಅಂಥ ಆರ್ತಿಯಿಲ್ಲದ ನಮಗೂ ಕರುಣಿಸುವನು. ತಿರುಮಾಲೈಯಲ್ಲಿ ಪ್ರಾಪ್ಯ ಪ್ರಾಪಕಗಳನ್ನು ಹೇಳಿದೆ. 'ಅಮಲನಾದಿಪಿರಾನ್' ನಲ್ಲಿ ಪ್ರಾಪ್ಯವನ್ನು ಹೇಳಿದೆ. ಈ ತಿರುಮೊಟಿಯಲ್ಲಿ ಪ್ರಾಪಕವನ್ನು ಹೇಳಿದೆ

**ಏಟ್ಟೈ ಏದಲನ್ ಕೀೞ್ಮಹನ್ ಎನ್ನಾದು**
**ಇರಂಗಿ ಮತ್ತವಕ್ಕ್ರ್ ಇನ್ನರುಳ್ ಶುರಂದು**
**ಮಾಟ್ಟೈಮಾನ್ ಮಡನೋಕ್ಕಿ ಉನ್‌ತೋೞಿ**
**ಉಂಬಿ ಎಂಬಿ ಎನ್ರು ಒೞಿನ್ದಿಲ್ಲೈ ಉಹನ್ದು**
**ತೋೞನ್ ನೀ ಎನಕ್ಕು ಇಂಗೊೞಿ ಎನ್ರ**
**ಶೊರ್ಕಳ್ ವಂದಡಿಯೇನ್ ಮನತ್ತಿರುಂದಿಡ**
**ಆೞಿವಣ್ಣ ನಿನ್ನಡಿಯಿಣೈ ಅಡೈಂದೇನ್**
**ಅಣಿಪೊೞಿಲ್ ತಿರುವರಂಗತ್ತಮ್ಮಾನೇ** ॥೧॥

(ಆೞಿವಣ್ಣ) ಸಾಗರವರ್ಣನೇ, (ಅಣಿ ಪೊೞಿಲ್ ತಿರು ಅರಂಗತ್ತು ಅಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟಿರುವ ಶ್ರೀರಂಗದಲ್ಲಿ ದಯ ಮಾಡಿರುವ ದೇವನೇ, (ಏಟ್ಟೈ ಏದಲನ್ ಕೀೞ್ಮಹನ್ ಎನ್ನಾದೇ) 'ಇವನು ಅರಿವಿಲ್ಲದವನು, ಕ್ರೂರಕರ್ಮಿ, ನೀಚ ಜಾತಿಯಲ್ಲಿ ಹುಟ್ಟಿದವನು'—ಎಂದು ಗುಹನ ಕೀಳ್ಮೆಯನ್ನೆಣಿಸದೆ (ಇರಂಗಿ) ಅವನ ಮೇಲೆ ಕೃಪೆಮಾಡಿ ಅವನನ್ನು ಪ್ರಾಣಸಖನನ್ನಾಗಿ ಅಂಗೀಕರಿಸಿ, (ಮತ್ತು) ಅದಕ್ಕೂ ಮೇಲೆ (ಅವರ್ಕ್ಕು ಇನ್ ಅರುಳ್‌ಶುರನ್ದು) ಆ ಗುಹನ ವಿಷಯದಲ್ಲಿ ಹಿತಕರನಾಗಿ ಕರುಣೆಯನ್ನು

ವರ್ಷಿಸಿ, (ಮಾಟ್ಚಿಮಾನ್ ಮಡನೋಕ್ಕಿ) ಮುಗ್ಧವಾದ ಜಿಂಕೆಯ ನೋಟ ಗಳನ್ನು ಹೋಲುವ ನಿಷ್ಕಪಟವಾದ ನೋಟಗಳನ್ನು ಬೀರುವ ನನ್ನ ದಯಿತೆ ಯಾದ ಸೀತೆ (ಉನ್‌ತೋಳಿ) ನಿನಗೆ ಸಖಿಯಾದವಳು (ಎಂಬಿ) ನನ್ನ ತಮ್ಮ ನಾದವನು (ಉಂಬಿ) ನಿನ್ನ ತಮ್ಮನು (ಎನ್ರು) ಎಂದು ಹೇಳಿ (ಒಟಿನ್ದಿಲ್ಲೈ) ಅಷ್ಟಕ್ಕೇ ಬಿಡದವನಾಗಿ (ಉಹಂದು) ಸಂತಸಗೊಂಡು (ನೀ ಎನಕ್ಕು ತೋಟಿನ್) ನೀನು ನನಗೆ ಸಖ (ಇಂಗು ಒಟಿ) ಇಲ್ಲೇ ನೀನು ಇರು (ಎನ್ರ) ಎಂದು ಶ್ರೀರಾಮಾವತಾರದಲ್ಲಿ ಹೇಳಿದ (ಶೊರ್ಕಳ್) ಮಾತುಗಳು (ವಂದು) ಕರ್ಣಾ ಕರ್ಣಿಕೆಯಾಗಿ ಬಂದು (ಅಡಿಯೇನ್ ಮನತ್ತು ಇರುನ್ದಿಡ) ನನ್ನ ಮನಸ್ಸಿನಲ್ಲಿ ತಂಗಿರಲಾಗಿ ಅದರಲ್ಲಿ ನಾನು ಪರವಶನಾಗಿ (ನಿನ್ ಅಡಿ ಇಣೈ ಅಡೈಂದೇನ್) ನಿನ್ನ ಪಾದಗಳೆರಡನ್ನೂ ಶರಣು ಹೊಕ್ಕಿದ್ದೇನೆ.

'ಏಟೈ' ಎಂದರೆ ಅಜ್ಞನು ಎಂದರ್ಥ. ವಿಷಯ ಚಾಪಲ್ಯ ಅಜ್ಞಾನದ ಕಾರ್ಯವಷ್ಟೇ ? ಭಗವಂತನು 'ಜ್ಞಾನಸಂಪನ್ನ' ನಾದರೆ ಇವನು ಅದಕ್ಕೆ ನೇರ ವಿರುದ್ಧವಾಗಿದ್ದಾನೆ. 'ಏದಲನ್' ಎಂದರೆ ಶಾತ್ರವವನ್ನು ಸೂಚಿಸುತ್ತೆ. ಭಗವಂತ 'ರಿಪೂಣಾಮಪಿವತ್ಸಲಃ' ಆದರೆ ಇವನು ಅದಕ್ಕೆ ವಿಪರೀತವಾಗಿದ್ದಾನೆ. ಹೀನಜನ್ಮ ಅವನದಾದರೆ ಭಗವಂತನು 'ಇಕ್ಷ್ವಾಕುವಂಶ ಪ್ರಭವಃ' ಎಂಬ ಹಿರಿಮೆ ಉಳ್ಳವನು. ಇವು ಮೂರೂ ಭಗವಂತನ ಸೌಶೀಲ್ಯವನ್ನೆ ತೋರಿಸು ವುವು. ಇವು ಯಾವುದನ್ನೂ ಎಣಿಸದೆ ದಯೆತೋರಿದ ಅವನು. 'ನಾನು ಇಂಥ ಅಜ್ಞಾನಿ' ಎಂದು ಅವನು ಹೇಳಿಕೊಳ್ಳದಿದ್ದರೂ ದಯೆತೋರಿದ. 'ನಧರ್ಮ ನಿಷ್ಠೋಸ್ಮಿ', 'ಅಮರ್ಯಾದಃ', ರಾವಣೋನಾಮದುರ್ವೃತ್ತಃ' ಎಂದು ತಮ್ಮ ನಿಕರ್ಷವನ್ನು ಹೇಳಿಕೊಂಡು ತಾನೇ ಶರಣಾಗುತ್ತಾರೆ.

ಶ್ರೀರಾಮ ಗುಹನ ಮೇಲೆ ದಯೆಯ ವರ್ಷವನ್ನೇ ಸುರಿಸಿದ. ನನ್ನ ದಯಿತೆ ನಿನಗೆ 'ಸ್ವಾಮಿನಿ' ಎಂದು ಹೇಳದೆ ಸಖಿ ಎಂದು ಹೇಳಿದ. ಸೌಶೀಲ್ಯ ದಿಂದ ಕೂಡಿದ ಮಹಾತ್ಮರು ತಮಗೆ ಶೇಷಭೂತರಾದವರನ್ನೂ ಸಹ 'ಅಣ್ಣಾ', ಅಪ್ಪ' ಎಂದೇ ಕರೆಯುವರು. ಪ್ರಾಪ್ತಿಸಮಯದಲ್ಲಿಯೂ 'ನಿರಂಜನಂ ಪರಮಂ ಸಾಮ್ಯಮುಪೈತಿ' ಎಂದು ಗುಣಸಾಮ್ಯವನ್ನೂ, ಭೋಗಸಾಮ್ಯವನ್ನೂ, ರೂಪ ಸಾಮ್ಯವನ್ನೂ, ಭೋಗ್ಯಸಾಮ್ಯವನ್ನೂ ಕೊಡುವರಷ್ಟೇ ?

'ನನ್ನ ತಮ್ಮ ನಿನ್ನ ತಮ್ಮ' ಎಂದು ಹೇಳಿರುವುದು ಲಕ್ಷ್ಮಣನ ದೃಷ್ಟಿಯಿಂದ. ಯಾರನ್ನು ಭಗವಂತನು ವಿಷಯೀಕರಿಸಿರುವನೋ ಅವರನ್ನು ಭಗವಂತನಂತೆಯೇ ಭಕ್ತರು ಕಾಣುತ್ತಾರಷ್ಟೇ?' ಅಡಿಯಾರ್ಕ್ಕೆನ್ನೈ ಆಳ್ಪಡುತ್ತವಿಮಲನ್' ಎಂದು ಹೇಳಿರುವರಷ್ಟೇ ? ಅವನಲ್ಲಿ ಒಲಿದ ಭಗವಂತ 'ನೀನು ಸಖ' ಎನ್ನುತ್ತಾನೆ. ಪ್ರೀತಿಪ್ರಕರ್ಷವುಂಟಾದಾಗ ಅದಕ್ಕೆ ಎಲ್ಲೆ ಇರುವುದೇ ಇಲ್ಲ. 'ಪದ್ಭ್ಯಾಮಭಿಗಮಾಚ್ಚೈವ ಸ್ನೇಹಸಂದರ್ಶನೇನ ಚ' ಎಂದು ಹೇಳಿದಂತೆ ನಾಲ್ಕು ಹೆಜ್ಜೆಗಳನ್ನಿಟ್ಟುಬಂದುದೇ ಪ್ರಪತ್ತಿ ಆಯಿತು. 'ಇಲ್ಲೇ ಇರು' ಎಂದು ಹೇಳಿದುದು ಅವನನ್ನು ಭಗವಂತನು ತನ್ನ ಇಷ್ಟಕ್ಕನುಸಾರ ನಿಯಮಿಸಲು ಅಂಗೀಕರಿಸಿ ನಿರತಿಶಯ ಪುರುಷಾರ್ಥವನ್ನು ನಿಯಮಿಸಿದಂತಾಯಿತು. ಶೇಷಿಯ ಇಷ್ಟಕ್ಕನುಸಾರವಾಗಿ ತಾನೇ ಶೇಷನು ನಡೆದುಕೊಳ್ಳಬೇಕು ? ಭರತನಿಗೆ 'ನಾವು ಹೋದ ದಾರಿ ತೋರಿಸು' ಎಂದು ತನ್ನಿಷ್ಟಕ್ಕನುಸಾರ ನಿರತಿಶಯ ಪುರುಷಾರ್ಥವನ್ನು ಅನುಗ್ರಹಿಸಿದಂತಾಯಿತು. ಕರ್ಣಾಕರ್ಣಿಕೆಯಾಗಿ ಬಂದ ಈ ಮಾತುಗಳು ಆಳ್ವಾರವರ ಮನಸ್ಸಿನಲ್ಲಿ ತಂಗಿವೆ. 'ಸಂಸ್ಮರಾಮ್ಯಸ್ಯವಾಕ್ಯಾನಿ' ಎಂದು ರಾಮ ಹೇಳಿದಂತೆ ಈ ಮಾತುಗಳು ಆಳ್ವಾರ್ರವರ ಮನಸ್ಸಿನಲ್ಲಿ ಬೇರು ಬಿಟ್ಟಿವೆ. ಜನ್ಮವೃತ್ತಗಳಲ್ಲಿ ಕೀಳಾದವನಾದ ಗುಹನ ಮೇಲೆ ಮಾಡಿದ ಆ ಅನುಗ್ರಹವನ್ನು ನನ್ನ ಮೇಲೆಯೂ ಮಾಡಬೇಕೆಂದು ಅವನಲ್ಲಿ ಶರಣಾಗಿದ್ದಾರೆ.

**ವಾತಮಾಮಹನ್ ಮರ್ಕಟಂ ವಿಲಂಗು**
**ಮತ್ತೋರ್ಶಾದಿ ಎನ್ರು ಒಟಿನ್ದಿಲ್ಲೈ, ಉಹಂದು**
**ಕಾದಲಾದರಂ ಕಡಲಿನುಂ ಪೆರುಹಶೆಯ್**
**ತಹವಿನುಕ್ಕು ಇಲ್ಲೈ ಕೈಮ್ಮಾರೆನ್ರು**
**ಕೋದಿಲ್ವಾಯ್ ನ್ಯಯಿನಾಯೊಡುಂ ಉಡನೇ**
**ಉಣ್ಬನ್ ನಾನ್ಎನ್ರ ಒಣ್ಪೊರುಳ್, ಎನಕ್ಕುಂ**
**ಆದಲ್ವೇಂಡುಂ ಎನ್ರು ಅಡಿಯಿಣೈ ಅಡೈಂದೇನ್**
**ಅಣಿಪೊಟಿಲ್ ತಿರುವರಂಗತ್ತಮ್ಮಾನೇ ॥೨॥**

(ಅಣಿಪೊಟಿಲ್ ತಿರುವರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿರುವ ದೇವನೇ, (ವಾತಮಾಮಹನ್) ವಾಯು

ದೇವನ ಹಿರಿಯ ಕುಮಾರನಾದ ಹನುಮಂತನು (ಮತ್ತು ಓರ್ ಶಾದಿ ವಿಲಂಗುಂ ಮರ್ಕಟಂ ಎನ್ರು ಒಟಿನ್ದಿಲೈ) ಬೇರೆ ಜಾತಿಯಲ್ಲಿ ಹುಟ್ಟಿದವನೆಂದೂ ವಿವೇಕ ವಿಲ್ಲದ ಮೃಗವೆಂದೂ ಅನೇಕ ಬಗೆಯ ದೋಷಗಳನ್ನುಳ್ಳವನೆಂದೂ ಅವನನ್ನು ಕೈಬಿಡದವನಾಗಿ (ಉಹಂದು) ಅವನಲ್ಲಿ ಪ್ರೇಮವನ್ನು ತೋರಿ, (ಕಾದಲ್ ಆದರಂ ಕಡಲಿನುಂ ಪೆರುಹ) ಪ್ರೀತಿಯೂ ಆದರವೂ ಸಮುದ್ರಕ್ಕಿಂತ ಹೆಚ್ಚಾಗಿ ವರ್ಧಿಸಲು (ಶೆಯ್‌ತಹವಿನುಕ್ಕು) ನಮಗೆ ಇವನು ಮಾಡಿದ ಉಪಕಾರಗಳಿಗೆ (ಕೈಮ್ಮಾರು ಇಲ್ಲೈ) ಪ್ರತ್ಯುಪಕಾರವಿಲ್ಲ (ಎನ್ರು) ಎಂದು ತಿಳಿದು (ಕೋದು ಇಲ್ ವಾಯ್ಮೈಯಿನಾಯೊಡುಂ) ದೋಷರಹಿತವಾದ ಸತ್ಯವಾಕ್ಕನ್ನುಳ್ಳ ನಿನ್ನೊಡನೆ (ಉಡನೇ ಉಣ್ಬನ್‌ನಾನ್) ನಾನು ಸಹ ಭೋಜನವನ್ನು ಮಾಡು ತ್ತೇನೆ (ಎನ್ರ) ಎಂದು ಹನುಮನಿಗೆ ಹೇಳಿದ (ಒಣ್‌ಪೊರುಳ್) ಶ್ರೇಷ್ಠವಾದ ವಿಷಯವನ್ನು (ಎನಕ್ಕುಂ ಆದಲ್‌ವೇಂಡುಂ ಎನ್ರು) ನನ್ನ ವಿಷಯದಲ್ಲಿಯೂ ಉಂಟುಮಾಡಬೇಕೆಂದು (ಅಡಿ ಇಣೈ ಅಡೈಂದೇನ್) ನಿನ್ನ ಪಾದದ್ವಯದಲ್ಲಿ ಶರಣು ಹೋಗಿದ್ದೇನೆ.

ಹಿಂದಿನ ಪಾಶುರದಲ್ಲಿ ಮನುಷ್ಯ ಸಜಾತೀಯನಾದ ಗುಹನನ್ನು ವಿಷಯೀ ಕರಿಸಿದುದನ್ನು ಹೇಳಿದರು. ಇಲ್ಲಿ ತಿರ್ಯಗ್ಜಾತಿಯಲ್ಲಿ ಹುಟ್ಟಿದವನ ನಿಕರ್ಷ ವನ್ನೆಣಿಸದೆ ಅವನನ್ನು ಅಂತಃಪುರ ಕೈಂಕರ್ಯದಲ್ಲಿ ಅನ್ವಯಿಸಿ ಸೇವೆಯನ್ನು ಸ್ವೀಕರಿಸಿದಂತೆ ನನ್ನಿಂದ ಕೈಂಕರ್ಯವನ್ನು ಮಾಡಿಸಿಕೊಳ್ಳಬೇಕೆಂದು ಬೇಡಿದ್ದಾರೆ. 'ಯಸ್ಮುತಿರ್ಯತ್ವವೃತ್ತಿಃ ಸ್ಯಾತ್ ತಿರ್ಯಗ್ಯೋನಿಸ್ಸಉಚ್ಯತೇ' ಎಂದಂತೆ ಆಹಾರನಿಯಮವಿಲ್ಲದ ಮರ್ಕಟಜಾತಿಯ ಹನುಮನ ಮೇಲೆ ಅನುಗ್ರಹವನ್ನು ವರ್ಷಿಸಿದ ಸ್ವಾಮಿ. 'ವಾಯುಪುತ್ರ' ಎಂಬ ಅಹಂಕಾರವಿದ್ದಂತಹವನು ಅವನು. ಅವನನ್ನು ಕೈಬಿಡದೆ ಇರುವದಷ್ಟೇ ಇರಲಿ. ಶೇಷಭೂತನಾದ ಅವನಿಗೆ ಕೈಂ ಕರ್ಯವನ್ನು ಉಂಟುಮಾಡುವುದೂ ಅವನಿಗೆ ಅದು ಪ್ರಾಪ್ತವೆಂದು ಇರುವುದು ಆಗಬಹುದಾಗಿತ್ತು. ಅವನು ಮಾಡಿದ ಸೇವೆಗೆ ಪ್ರತ್ಯುಪಕಾರವನ್ನು ಹುಡುಕಿ ಹುಡುಕಿ ಕಷ್ಟಪಡಬೇಕಾಗಿತ್ತೇ ? ಇದಕ್ಕೆಲ್ಲಾ ಅವನ ಮೇಲಿದ್ದ ಎಲ್ಲೆಯಿಲ್ಲದ ಪ್ರೀತ್ಯಾದರವೇ ಕಾರಣವಷ್ಟೇ ? ಹನುಮಂತನು ಮಾಡಿದುದು ಧರ್ಮ! ಒಂದು ಪ್ರಯೋಜನವನ್ನೂ ಅಪೇಕ್ಷಿಸದೇ ಮಾಡಿದುದಲ್ಲವೇ ಅದು ? 'ಧರ್ಮತಃ ಪರಿರಕ್ಷಿತಾಃ' ಎಂದು ಸ್ವಾಮಿಯೇ ಹೇಳುತ್ತಾನೆ. ಶೇಷಭೂತನು

ಶೇಷಿಯನ್ನು ಕುರಿತು ಹೇಳಬೇಕಾದ ಮಾತನ್ನು ಶೇಷಿಯೇ ತನ್ನ ಸೌಶೀಲ್ಯದ ಕಾರಣ ಹೇಳುತ್ತಾನಷ್ಟೇ ? 'ಸಂಶ್ರವೇ ಮಧುರಂ ವಾಕ್ಯಂ' ಎಂದು ಸೀತಾ ದೇವಿಯು ಸಮಾಧಾನಮಾಡಿಕೊಳ್ಳುವಂತೆ ಹೇಳಿ, 'ದೃಷ್ಟಾಸೀತಾ' ಎಂದು ಶ್ರೀರಾಮನೂ ಧಾರಣೆಮಾಡಿಕೊಳ್ಳುವಂತೆ ಮಾತಾಡಿದನಷ್ಟೇ ?

'ಏಷಸರ್ವಸ್ವಭೂತಸ್ತು' ಎಂದು ಹೇಳಿರುವುದನ್ನು 'ಉಡನೇ ಉಣ್ಬನ್ ನಾನ್' ಎಂಬುದು ತಿಳಿಸುತ್ತದೆ. 'ಇನ್ನು ನಾವು ಜೊತೆಯಾಗಿ ಜೀವಿಸೋಣ' ಎಂಬ ಅರ್ಥ ಇದಕ್ಕೆ. ಶ್ರೀರಾಮ ಹನುಮನಿಗೆ ಅನುಗ್ರಹಿಸಿದ ಪರಿಷ್ವಂಗ ವಾದರೋ ಸೀತಾದೇವಿಯೂ ಪಡೆಯಲಾಶಿಸುವಂತಹುದೇ ಅಲ್ಲವೇ ? ಒಂದೇ ಎಲೆಯಲ್ಲಿ ಊಟ ಮಾಡುವವರ ಹಾಗೆ ಶೇಷಶೇಷಿಗಳಿಬ್ಬರಿಗೂ ಆ ದಿವ್ಯಮಂಗಳ ವಿಗ್ರಹ ಅನುಭಾವ್ಯವಾದುದಷ್ಟೇ ? ಆ ಶ್ರೀರಾಮನ ಪರಿಷ್ವಂಗವನ್ನು ಪಡೆದು ಕೊಂಡ ಮೈ ಎಂದು ತಾನೇ ಹನುಮ ತನ್ನ ದೇಹವನ್ನು ಬಿಡಲಿಚ್ಛಿಸದೇ ಇರು ವುದು ? ಕೃಪಣರಾದವರು 'ಈ ಹಿರಿಯ ಪ್ರಾಪ್ತಿಗಾಗಿ ಆಶೆಪಡುವುದೇ ?'— ಎಂದು ಕೈತೆಗೆಯುವರಲ್ಲವಷ್ಟೇ ? ಶರಣಾಗತಿಗೆ ಫಲಿಸದೆ ಇರುವುದು ಒಂದೂ ಇಲ್ಲ ಎಂದು ಬೇಡುತ್ತಿದ್ದಾರೆ. ಅವನಿಂದ ಲಭಿಸುವುದಾದುದರಿಂದ ಎಲ್ಲವೂ ಕೈಗೂಡಿಯೇ ತೀರುವುದು ಎಂಬ ಭಾವ.

**ಕಡಿಕೊಳ್ ಪೂಂಪೊಟ್ಟಿಲ್ ಕಾಮುರು ಪೊಯ್ತ್ಹೈ**
**ವೈಹು ತಾಮರೈ ವಾಂಗಿಯ ವೇಟಿವತ್**
**ಮುಡಿಯುಂ ವಣ್ಣಂ ಓರ್ ಮುಟುವಲಿ ಮುದಲ್ಲೈ**
**ಪತ್ತ ಮತ್ತದು ನಿನ್ ಶರಣ್‌ನಿನ್ನೈಪ್ಪ**
**ಕೊಡಿಯವಾಯ್ತ್ ವಿಲಂಗಿನ್ ಉಯಿರ್ ಮಲಂಗ**
**ಕೊಂಡಶೀತ್ತಂ ಒನ್ರು ಉಂಡು ಉಳದು ಅರಿಂದು ಉನ್**
**ಅಡಿಯುನೇನುಂ ವಂದಡಿಯಿಣೈ ಅಡೈಂದೇನ್**
**ಅಣಿಪೊಟ್ಟಿಲ್ ತಿರುವರಂಗತ್ತಮ್ಮಾನೇ** ॥ ೩ ॥

(ಅಣಿಪೊಟ್ಟಿಲ್ ತಿರು ಅರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತು ವರಿಯಲ್ಪಟ್ಟ ಶ್ರೀರಂಗದಲ್ಲಿರುವ ಸ್ವಾಮಿಯೇ, (ಕಡಿಕೊಳ್ ಪೂಪೊಟ್ಟಿಲ್)

ಪರಿಮಳಭರಿತವಾದ ಹೂಗಳಿಂದ ತುಂಬಿರುವ ತೋಪುಗಳಿಂದ ಸುತ್ತುವರಿ ಯಲ್ಪಟ್ಟ (ಕಾಮರು ಪೊಳ್‌ಹೈ) ಸುಂದರವಾದ ಸರೋವರದಲ್ಲಿ (ವೈಹು ತಾಮರೈ ವಾಂಗಿಯ) ಹೊಂದಿಕೊಂಡಿದ್ದ ತಾವರೆಯ ಪುಷ್ಪವನ್ನು ನಿನ್ನ ಅರ್ಚನೆ ಗಾಗಿ ಬಿಡಿಸಿದ (ವೇಟಿಮ್) ಆನೆಯು (ಮುಡಿಯುಂ ವಣ್ಣಂ) ಮುಗಿದೇ ಹೋಗುವಂತೆ (ಓರ್‌ಮುಟುವಲಿ ಮುದಲೈಪತ್ತ) ಅತ್ಯಧಿಕವಾದ ಬಲವನ್ನುಳ್ಳ ಮೊಸಳೆಯು ಹಿಡಿದುಕೊಂಡು ಬಿಡಲು (ಅದು) ಅದರಿಂದ ದುಃಖಿಕ್ಕೊಳಗಾದ ಆ ಆನೆ (ನಿನ್‌ಶರಣ್‌ನಿನೈಪ್ಪ) ತನ್ನ ಬಲದಿಂದ ಬಿಡಿಸಿಕೊಳ್ಳಲಾಗದೆ ನಿನ್ನ ಪಾದಗಳನ್ನು ಧ್ಯಾನಿಸಲು ಆ ಕ್ಷಣವೇ ನೀನು (ಕೊಡಿಯ ವಾಯ್‌ವಿಲಂಗಿನ್ ಉಯಿರ್‌ಮಲಂಗ) ಕ್ರೂರವಾದ ಬಾಯನ್ನುಳ್ಳ ಮೊಸಳೆಯ ಪ್ರಾಣವು ಕಿತ್ತು ಹೋಗುವಂತೆ (ಕೊಂಡಶೀತ್ತಂ ಒನ್ರು) ತಂದುಕೊಂಡ ಒಂದು ಕೋಪವನ್ನು (ಉಂಡು ಉಳದು ಅರಿಂದು) ಹೊಂದಿದವನಾದೆ ಎಂದು ತಿಳಿದುಕೊಂಡು (ಉನ್ ಅಡಿಯನೇನುಂ ವಂದು ಅಡಿ ಇಣೈ ಅಡೈಂದೇನ್) ನಿನ್ನ ದಾಸನಾದ ನಾನೂ ಬಂದು ನಿನ್ನ ಪಾದಗಳಲ್ಲಿ ಶರಣಾಗಿದ್ದೇನೆ.

ಅನಾವೃಷ್ಟಿಯಿಂದ ಜಗತ್ತೆಲ್ಲಾ ಕಷ್ಟಕ್ಕೊಳಗಾದಾಗ ಒಂದು ಜಾಗ ದಲ್ಲಿಯೂ ಒಂದು ಹೂವು ಇಲ್ಲದೆ ಎಲ್ಲೆಲ್ಲೂ ಅಲೆದು ಬಂದಾಗ ಆ ತೋಪು ಕಣ್ಣಿಗೆ ಬಿದ್ದಿತಂತೆ. ಆ ತೋಪಿನಲ್ಲಿ ಚಿಗುರುಗಳೂ ಮೊಳಕೆಗಳೂ ಇರುವು ದನ್ನು ನೋಡಿದಾಗ ಸನಿಹದಲ್ಲಿ ಸರೋವರವಿರುವುದು ಕಂಡುಬಂದಿತು. ತೋಪು ಪರಿಮಳ ಪ್ರಚುರವಾಗಿದ್ದಿತು. 'ಆ ತೋಪನ್ನು ಹೊಕ್ಕು ನೋಡೋಣ'—ಎಂದು ಹೊಕ್ಕಾಗಲೇ ಪರಿಮಳವು ಸೂಸಿ ಅಲ್ಲಿ ಹೂವಿರುವು ದೆಂಬುದು ತೋರಿ ಬಂತು.

ಆ ಸರೋವರ ಆಕರ್ಷಕವಾಗಿತ್ತಂತೆ. ಅಗಾಧವಾಗಿದ್ದುದರಿಂದ 'ದುಷ್ಟ ಸತ್ತ್ವಗಳೂ ಇರಬಹುದೋ' ಎಂದೂ ಯೋಚಿಸದೆ ಅದರೊಳಗೆ ಇಳಿಯುವಂತೆ ಆಯಿತು. ಎಲ್ಲಿಯೂ ಇಲ್ಲದ ತಾವರೆ ಹೂ ಪರ್ವತಾಗ್ರದಲ್ಲಿದ್ದ ಆ ಸರೋವರ ದಲ್ಲಿ ವಿರಾಜಿಸಿತ್ತು. ಇಷ್ಟು ಆದರದಿಂದ ಆನೆಯು ಸರೋವರವನ್ನು ಪ್ರವೇಶಿ ಸುವುದೇ ತಡ, 'ಒಂದು ಆನೆಯ ಪಾದವನ್ನು ಯಾವಾಗ ಕಂಡೇನು !' ಎಂದು ನಿರೀಕ್ಷಿಸುತ್ತಿದ್ದ ಆ ಮೊಸಳೆ ಆನೆಯ ಕಾಲನ್ನು ಹಿಡಿದುಕೊಂಡುಬಿಟ್ಟಿತು. ಆನೆಯನ್ನು ಮುಗಿಸಿಬಿಡಬೇಕೆಂದಲ್ಲ ಅದು ಆನೆಯನ್ನು ಹಿಡಿದದ್ದು, ಆದರೆ

ತನ್ನ ಶಾಪವನ್ನು ಹೋಗಲಾಡಿಸಿಕೊಳ್ಳಬೇಕೆಂದು. ಆನೆಗೆ ಅದು ಸ್ವಸ್ಥಾನವಲ್ಲದ ಕಾರಣ ಬಲ ಕುಂದಿತು. ಆದರೆ ಮೊಸಳೆಗೆ ಬಲ ಹೆಚ್ಚಿತು. 'ಚರಣೌ ಗಾಢಂ ನಿಪೀಡ್ಯ' ಎನ್ನುವಂತೆ ತನ್ನ ಅಭಿಮತವು ಕೈಗೂಡುವುದಕ್ಕಾಗಿ ಆನೆಯ ಕಾಲನ್ನು ಬಹಳ ದೃಢವಾಗಿ ಹಿಡಿದುಬಿಟ್ಟಿತು.

'ಗಜ ಆಕರ್ಷತೇ ತೀರೇ ಗ್ರಾಹ ಆಕರ್ಷತೇ ಜಲೇ' ಎಂದಂತೆ ಅನೇಕ ಕಾಲ ಅವು ಒಂದನ್ನೊಂದು ಎಳೆದಾಡಿದವು. ಅಹಂಕಾರ ತಾನೇ ಬಲಹಾನಿಗೆ ಕಾರಣ. ಅದನ್ನು ಕಿತ್ತು ಹಾಕಿ ಈಶ್ವರನನ್ನು ಆಶ್ರಯಿಸಿದಾಗಲೇ ಬಲವು ಹೆಚ್ಚುವುದಷ್ಟೇ ? 'ಒಂದು ಜಲಚರದಿಂದ ರಕ್ಷಿಸಲು ಸರ್ವೇಶ್ವರನನ್ನು ಕರೆಯ ಬೇಕೇ ?'—ಎಂದು ತನ್ನ ಪ್ರಯತ್ನವನ್ನೇ ಆನೆ ಮಾಡುತ್ತಿತ್ತು. 'ಇವನ ಅಹಂಕಾರ ಸ್ಪರ್ಶ ಅಳಿದ ಮೇಲೆ ಮುಖ ತೋರೋಣ'—ಎಂದು ಸ್ವಾಮಿಯು ಇದ್ದನಷ್ಟೇ ? ತನ್ನ ಬಲ ಕಾರ್ಯಕರವಾಗದಾಗ ಅಹಂಕಾರ ಅಳಿದು 'ಮನಸಾ ಅಚಿಂತಯತ್ ಹರಿಂ'—ನಾರಾಯಣ ಪರಾಯಣನೂ ಪರಮಾಪತ್ತಿಗೊಳಗಾದ ವನೂ ಆದ ಆ ಗಜ 'ನಾರಾಯಣಾ ಓಮಣಿವಣ್ಣಾ'—ಎಂದು ಆಕ್ರಂದಿಸ ತೊಡಗಿತು.

ಮೊಸಳೆ ಹಿಡಿದದ್ದು ಆನೆಯ ಕಾಲನ್ನು. ಆದರೆ ನೋವುಂಟಾದುದು ಪರಮಾತ್ಮನ ಮನಸ್ಸಿಗೆ. 'ಸ ಚ ನಿತ್ಯಂ ಪ್ರಶಾಂತಾತ್ಮಾ' ಎಂದಿದ್ದ ಸ್ವಾಮಿ 'ಕ್ರೋಧಮಾಹಾರಯತ್ ತೀವ್ರಂ' ಎಂಬಂತೆ ಕೋಪವನ್ನು ತಂದುಕೊಂಡ ನಂತೆ. ಆಶ್ರಯವನ್ನು ಪಡೆದವರಲ್ಲಿ ಸೌಶೀಲ್ಯವನ್ನು ತಾನೇ ಅವನು ತೋರು ವನು ! ವಿರೋಧಿ ನಿರಸನಕ್ಕೆ ಕೋಪವು ಅವಶ್ಯಕವಾದ ಪರಿಕರವಷ್ಟೇ ?

ಸ್ವರೂಪ ಜ್ಞಾನವು ಉಂಟಾದ ಕೂಡಲೇ ಸ್ವರೂಪಾನುರೂಪವಾದ ಉಪಾಯವನ್ನು ಪರಿಗ್ರಹಿಸುವರಷ್ಟೇ ?

**ನಂಜು ಶೋರ್ವದು ಓರ್ ವೆವಾ್ ಶಿನಂ ಅರವಂ**
**ವೆರುವಿ ವಂದುನಿನ್ ಶರಣ್ ಎನ ಶರಣಾಯ್**
**ನೆಂಜಿಲ್ ಕೊಂಡುನಿನ್ ಅವಾ್ ಶಿರೈಪರವೈಕ್ಕು**
**ಅಞ್ಜೈಕ್ಕಲಂ ಕೊಡುತ್ತು ಅರುಳ್ ಶೆಯ್ ದದು ಅರಿಂದು**

ನೆವಶ್ ಶೊಲಾಳರ್ ಹಳ್ ನಮನ್ ತಮರ್ ಕಡಿಯರ್
ಕೊಡಿಯ ಶೆಯ್ವನ ಉಳ ಅದಕ್ಕ್ ಅಡಿಯೇನ್
ಅಂಜಿವಂದು ನಿನ್ ಅಡಿಯಿಣೈ ಅಡೈಂದೇನ್
ಅಣಿಪೊಟಿಲ್ ತಿರುವರಂಗತ್ತವ್ಮ್ಮಾನೇ ॥೪॥

(ಅಣಿಪೊಟಿಲ್ ತಿರು ಅರಂಗತ್ತವ್ಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿರುವ ಸ್ವಾಮಿಯೇ, (ನಂಜು ಶೋರ್ವದು) ವಿಷವನ್ನು ಕಕ್ಕುತ್ತಿರುವುದೂ (ವೆಮ್‌ಶಿನಂ) ತೀವ್ರವಾದ ಕೋಪವನ್ನುಳ್ಳದೂ ಆದ (ಓರ್ ಅರವಂ) ಸುಮುಖನೆನ್ನುವ ಒಂದು ಸರ್ಪವು (ವೆರುವಿ) ತನ್ನನ್ನು ಕೊಲ್ಲಲಿರುವ ಗರುಡನಿಗೆ ಹೆದರಿ (ವಂದು) ನಿನ್ನ ಬಳಿ ಬಂದು (ನಿನ್ ಶರಣ್ ಎನ) 'ನಿನ್ನನ್ನೇ ರಕ್ಷಕನನ್ನಾಗಿ ಹೊಂದಿದ್ದೇನೆ' ಎಂದು ಹೇಳಲು (ಶರಣ್ ಆಯ್) ನೀನು ಅದಕ್ಕೆ ರಕ್ಷಕನಾಗಿ ಅವನಿಗೊದಗಿದ್ದ ವಿಪತ್ತನ್ನೂ ಅವನ ಮಾತನ್ನೂ (ನೆಂಜಿಲ್‌ಕೊಂಡು) ನಿನ್ನ ಮನಸ್ಸಿಗೆ ತಂದುಕೊಂಡು (ನಿನ್ ಅವ್ ಶಿರೈ ಪರವೈಕ್ಕು ಅಡೈಕ್ಕಲಂ ಕೊಡುತ್ತು ಅರುಳ್ ಶೆಯ್‌ದದು) ನಿನ್ನ ದಾಸನಾದವನೂ ಸುಂದರವಾದ ಪಕ್ಷಗಳನ್ನುಳ್ಳವನೂ ಆದ ಗರುಡನಿಂದ ಅವನಿಗೆ ರಕ್ಷಣೆಯನ್ನು ಕೊಟ್ಟು ಕಾಪಾಡಿದುದನ್ನು (ಅಡಿಯೇನ್ ಅರಿಂದು) ನಾನು ತಿಳಿದವನಾಗಿ (ವೆಮ್ ಶೊಲಾಳರ್ ಹಳ್) ಕ್ರೂರವಾದ ಮಾತುಗಳನ್ನಾಡುವವರಾದ (ನಮನ್ ತಮರ್) ಯಮದೂತರುಗಳು (ಕಡಿಯರ್) ಭಯಂಕರ ವ್ಯಾಪಾರವುಳ್ಳವರಾಗಿ (ಶೆಯ್‌ವನ ಕೊಡಿಯ ಉಳ) ಮರಣಕಾಲದಲ್ಲಿಯೂ ತದನಂತರವೂ ಮಾಡುವ ಕ್ರೂರ ವ್ಯಾಪಾರಗಳಿವೆಯಲ್ಲಾ ಅದಕ್ಕೆ (ಅದಕ್ಕ್ ಅಡಿಯೇನ್ ಅಂಜಿವಂದು ನಿನ್ ಅಡಿ ಇಣೈ ಅಡೈಂದೇನ್) ಹೆದರಿ ಬಂದು ನಿನ್ನ ಪಾದದ್ವಯದಲ್ಲಿ ಶರಣಾಗಿದ್ದೇನೆ.

ಸುಮುಖನಿಗೆ ಗರುಡನಿಂದ ಬಂದ ಭಯವನ್ನು ಹೋಗಲಾಡಿಸಿ ರಕ್ಷಿಸಿದಂತೆ ನನಗೆ ಯಮವಶ್ಯತೆಯಿಂದ ಬಂದ ಭಯವನ್ನು ಹೋಗಲಾಡಿಸಿ, 'ಪರಿಹರ' ಎಂದಂತೆ ಅನುಗ್ರಹಿಸಬೇಕು ಎಂದು ಬೇಡಿದ್ದಾರೆ. 'ನ ಧರ್ಮನಿಷ್ಠೋಽಸ್ಮಿ' ಎಂದೂ 'ನ ನಿಂದಿತಂ ಕರ್ಮ ತದಸ್ತಿಲೋಕೇ' ಎಂದೂ ಹೇಳಿದಂತೆ ತಮ್ಮ ಆಕಿಂಚನ್ಯವನ್ನೂ ಅನನ್ಯಗತಿತ್ವವನ್ನೂ ಹೇಳಿಕೊಂಡು ಶರಣಾಗುತ್ತಾರೆ.

ಸುಮುಖನ ದೃಷ್ಟಾಂತದಿಂದ ತಿಳಿಯುವುದೇನೆಂದರೆ 'ಶರಣಾಗತಿಗೆ ಅರ್ಹರಾಗದವರಿಲ್ಲ'—ಎಂಬುದು. 'ಸರ್ಪಜಾತಿರಿಯಂ ಕ್ರೂರಾ' ಎಂಬಂತೆ ಆ ಸರ್ಪಜಾತಿಯಲ್ಲಿ ಹುಟ್ಟಿದವನು ಆವನು. ಶರಣಾಗತರನ್ನು ಕೈ ಬಿಡುವವನಲ್ಲ ಅವನು—'ನ ತ್ಯಜೇಯಂ' ಎಂದಂತೆ. ಹಾಗೆಯೇ ಆಶ್ರಿತರ ಬಗೆಗೆ ಅಪರಾಧ ಮಾಡಿದವರನ್ನು 'ನ ಕ್ಷಮಾಮಿ' ಎನ್ನುವನವನು. ತಾನೇ ರಕ್ಷಿಸಲು ಸಮರ್ಥನಾಗಿದ್ದರೂ ಸ್ವಾಮಿ ಗರುಡನಿಗೆ 'ಅವನನ್ನು ರಕ್ಷಿಸು' ಎಂದು ಹೇಳಿ ಅವನಿಂದ ರಕ್ಷಣೆ ಕೊಡಿಸಿದ. ಅದರಿಂದ ಅವರಿಬ್ಬರಿಗೂ ರಕ್ಷ್ಯರಕ್ಷಕ ಸಂಬಂಧ ಉಂಟಾಯಿತಷ್ಟೇ ? ಅವನ ಮುಖಾಂತರ ರಕ್ಷಣೆ ಒದಗಿಸಿದುದು ಶೇಷಿಯ ರಕ್ಷಣಸಂಕಲ್ಪ ನಡೆಯಬೇಕಾದುದರಿಂದಲೇ. ಶೇಷಭೂತರಿಬ್ಬರಿಗೆ ವಿರೋಧ ಬಂದರೆ ಶೇಷಿಯ ಮುಖವು ತಾನೇ ಬಾಡುವುದು ? 'ರಾಮಮೇವಾನುಪಶ್ಯಂತೋ ನಾಭ್ಯಹಿಂಸನ್ ಪರಸ್ಪರಂ' ಎಂದು ಹೇಳಿದರಷ್ಟೇ ? ಆಶ್ರಿತರ ವಿರೋಧಿಗಳನ್ನು ಪರಿಹರಿಸಿ ಆಶ್ರಿತರಿಗೆ ತನ್ನ ಅನುಭವವನ್ನು ಕೊಡುವುದಕ್ಕಾಗಿ ತಾನೇ ಸ್ವಾಮಿ ಶ್ರೀರಂಗದಲ್ಲಿ ಶಯನಿಸಿರುವುದು ?

ಯಮಭಟರು ಪಾಪಾನುರೂಪವಾಗಿ ತಾನೇ ಹಿಂಸಿಸುವರು. ಪಾಪಕ್ಕೆ ಅವಧಿ ಇದ್ದಿದ್ದರೆ ತಾನೇ ಹಿಂಸೆಗೆ ಅವಧಿ ಇರುವುದು ? 'ಭಯಂ ಭಯಾನಾಂ ಅಪಹಾರಿಣಿ ಸ್ಥಿತೇ' ಎಂದಂತೆ ಇರುವವನೂ, ಯಮನೂ ಸಹ ಹೆದರಿ ಬಂದು 'ಪರಿಹರ' ಎಂದು ಬೇಡಿ ಬೀಳುವಂತಹ ನಿನ್ನ ಪಾದ ಪದ್ಮಗಳಲ್ಲಿ ಶರಣಾಗಿದ್ದೇನೆ.

**ಮಾಕಂ ಮಾನಿಲಂ ಮುಟಿಬುದುಂ ವಂದಿರೈಂಜುಂ**
**ಮಲರಡಿ ಕಂಡ ಮಾಮರೈಯಾಳನ್**
**ತೋಹೈ ಮಾಮಯಿಲ್ ಅನ್ನವರ್ ಇನ್ಬಮ್**
**ತುತ್ತಿಲಾಮೈಯಿಲ್ ಅತ್ತ ಇಂಗು ಒಟಿನ್ದು**
**ಪೋಹಂ ನೀ ಎಯ್‌ದಿ ಪಿನ್ನುಂ ನಮ್ಮಿಡೈಕ್ಕೇ**
**ಪೋದುವಾಯ್ ಎನ್ನ ಪೊನ್ನರುಳ್, ಎನಕ್ಕುಂ**
**ಆಹವೇಂಡು ಎನ್ರು ಅಡಿಯಿಣೈ ಅಡೈಂದೇನ್**
**ಅಣಿಪೊಟಿಲ್ ತಿರುವರಂಗತ್ತಮಾನೇ** ॥೫॥

(ಅಣಿಪೊಟಿಲ್ ತಿರುವರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತು ವರಿಯಲ್ಪಟ್ಟಿರುವ ಶ್ರೀರಂಗದಲ್ಲಿ ನೆಲಸಿರುವ ಸ್ವಾಮಿಯೇ, (ಮಾಕವ್ ಮಾ ನಿಲವ್) ಪರಮಾಕಾಶವೆನ್ನುವ ಪರಮ ಪದದಲ್ಲಿರುವವರೂ ವಿಶಾಲವಾದ ಭೂಮಂಡಲದಲ್ಲಿರುವವರೂ (ಮುಟಿುದುಂ) ಮತ್ತೆಲ್ಲ ಚರಾಚರಗಳೂ (ವಂದು ಇರೈಂಜುಂ) ಬಂದು ನಮಿಸುವಂತಹ (ಮಲರ್ ಅಡಿ) ನಿನ್ನ ಪಾದಕಮಲಗಳನ್ನು (ಕಂಡ) ಸಾಕ್ಷಾತ್ಕರಿಸಿದ (ಮಾ ಮರೈಯಾಳನ್) ಮಹಾವೈದಿಕ ಬ್ರಾಹ್ಮಣನಾದ ಗೋವಿಂದಸ್ವಾಮಿ ಎಂಬುವನನ್ನು ಕುರಿತು, (ಅತ್ತ) ಅಪ್ಪಾ, (ನೀ) ನೀನು (ತೋಕೈಮಾಮಯಿಲ್ ಅನ್ನವರ್ ಇನ್ಬವ್ ತುತ್ತಿಲಾಮೈಯಿಲ್) ಸ್ತ್ರೀಯ ರಿಂದುಂಟಾಗುವ ವಿಷಯ ಭೋಗಸುಖಗಳನ್ನು ಅನುಭವಿಸದೆಯೇ ಇರುವುದ ರಿಂದ (ಇಂಗು ಒಟಿನ್ದು) ಸ್ವಲ್ಪಕಾಲ ಈ ವಿಭೂತಿಯಲ್ಲಿದ್ದು (ಪೋಹಂ ಎಯ್‌ದಿ) ಭೋಗಗಳನ್ನನುಭವಿಸಿ (ಪಿನ್ನುಂ) ಅದರ ನಂತರ (ನಮ್ಮಿಡೈಕ್ಕೇ ಪೋದುವಾಯ್) ನಮ್ಮ ಬಳಿಗೇ ಬಂದು ಸೇರುವವನಾಗು (ಎನ್ರು) ಎಂದು ಅನುಗ್ರಹಿಸಿದ (ಪೊನ್ ಅರುಳ್) ಪರಮ ಕೃಪೆಯು (ಎನಕ್ಕುಂ ಆಹವೇಂಡುಂ ಎನ್ರು ಅಡಿಇಣೈ ಅಡೈಂದೇನ್) ನನಗೂ ಆಗಬೇಕೆಂದು ನಿನ್ನ ಪದಕಮಲಗಳಲ್ಲಿ ಶರಣು ಹೋಗಿದ್ದೇನೆ.

ಗೋವಿಂದಸ್ವಾಮಿ ಎಂಬ ಬ್ರಾಹ್ಮಣನೊಬ್ಬನು ಇತಿಹಾಸ ಪುರಾಣ ಗಳನ್ನು ಕೇಳಿ, ಕೃಷ್ಣನ ಬಾಲಚೇಷ್ಟಿತಗಳನ್ನೂ ರಾಸಕ್ರೀಡೆಯನ್ನೂ ಸಾಕ್ಷಾತ್ಕರಿಸಲಿಚ್ಛಿಸಿ ಸಕಾಮನಾಗಿ, ಶರೀರವನ್ನು ಒಣಗಿಸಿ ತಪಸ್ಸನ್ನು ಮಾಡಿದನು. ಅವನ ಆಶೆಗನುಗುಣವಾಗಿ ಕೃಷ್ಣಾವತಾರದ ಲೀಲಾಚೇಷ್ಟಿತ ಗಳನ್ನು ಅವನಿಗೆ ತೋರಿಸಿ 'ನಿನಗೆ ಬೇಕಾದುದೇನು ?' ಎಂದು ಕೇಳಿದಾಗ ಆ ಗೋವಿಂದಸ್ವಾಮಿಯು 'ಜೊತೆಯಲ್ಲಿದ್ದು ಹೀಗೆಯೇ ನಿನ್ನನ್ನು ಅನುಭವಿಸ ಬೇಕು' ಎಂದನಂತೆ, 'ನೀನು ತಪಸ್ಸು ಮಾಡುವಾಗ ವಿಷಯಗಳನ್ನು ತೊರೆದವ ನಾಗಿ, ಅನ್ನಪಾನಾದಿಗಳನ್ನೂ ತೊರೆದು ಮೈಯ್ಯನ್ನು ಕೃಶಗೊಳಿಸಿದೆ. ಆದರಿಂದ ಇಲ್ಲಿ ಸ್ವಲ್ಪಕಾಲ ಇದ್ದು ಆ ಭೋಗಗಳನ್ನು ಅನುಭವಿಸಿ ಆಶೆಯನ್ನು ಕಳೆದು ನನ್ನ ಬಳಿ ಬಾ' ಎಂದು ಸ್ವಾಮಿ ಅನುಗ್ರಹ ಮಾಡಿದನಂತೆ. ಕೇವಲ ಕೃಷ್ಣಚೇಷ್ಟಿತಗಳನ್ನು ಕಾಣಬೇಕೆಂದು ಅವನು ತಪಸ್ಸು ಮಾಡಿದ. ವಿಷಯ ರುಚಿ ಇನ್ನು ಇರುತ್ತಿದ್ದುದರಿಂದ ಹೀಗೆ ಹೇಳಿದನಂತೆ.

ಕೃಷ್ಣಾವತಾರದಲ್ಲಿ ಸ್ವಾಮಿಯನ್ನು ಉಭಯವಿಭೂತಿಯಲ್ಲಿರುವವರೂ ಹೇಗೆ ಸೇವಿಸಿದರೆಂಬುದನ್ನು ಇಲ್ಲಿ ನಿರೂಪಿಸಿದೆ. 'ಆಚ್ಛಾದ್ಯಾನುಯಯೌ ಶೇಷಃ ಫಣೈರಾನಕ ದುಂದುಭಿಂ' ಎಂದಂತೆ ನಿತ್ಯಸೂರಿಗಳು ಆಶ್ರಯಿಸಿದರು. ದಿವ್ಯಾಯುಧಗಳೂ ಸಹ ಅವನನ್ನು ಸೇವಿಸಿದವಷ್ಟೇ ಆಗಲೂ ? ಗೋಪಾಲರು, ಪಶುಗಳು, ಕರುಗಳು, ಭೀಷ್ಮರೇ ಮೊದಲಾದ ಜ್ಞಾನಿಗಳು—ಎಲ್ಲರೂ ಅವನನ್ನಾಶ್ರಯಿಸಿದರು. ಬ್ರಹ್ಮೇಂದ್ರಾದಿ ದೇವತೆಗಳೂ ಸಹ ಶ್ರೀ ಕೃಷ್ಣನನ್ನು ಬಂದು ಆಶ್ರಯಿಸಿದರು. ಇವನ್ನೆಲ್ಲಾ ಆ ವೈದಿಕಾಗ್ರೇಸರನು ಶಾಸ್ತ್ರದಿಂದ ಲಾಗಲೀ ಉಪದೇಶದಿಂದಾಗಲೀ ಅಲ್ಲದೆ ನೇರವಾಗಿ ತನ್ನ ಕಣ್ಣುಗಳಿಂದಲೇ ಕಂಡು ಕೊಂಡ.

ಅವನಿಗೆ ಹೀಗೇಕೆ ಸ್ವಾಮಿ ಹೇಳಿದ ? ಅವನು ತಪಸ್ಸನ್ನು ಮಾಡುವಾಗ ಇತರ ವಿಷಯಗಳಲ್ಲಿ ಸಂಗವಿರುತ್ತಿದ್ದರೂ ಸಹ ಅವುಗಳನ್ನು ಅನುಭವಿಸದೆ ತಪಸ್ಸನ್ನಾಚರಿಸಿದ. 'ಜೊತೆಯಲ್ಲಿರೋಣ' ಎಂದವನು ಹೇಳಿದನೇ ವಿನಾ 'ಇವುಗಳಿಂದ ಬಿಡಿಸಿಕರೆದುಕೋ' ಎನ್ನಲಿಲ್ಲ. ಅವನಲ್ಲಿ ಅತಿಪ್ರಾವಣ್ಯ ಹೊಂದಿ ದವನು 'ವಿಷಯ ಪ್ರವಣವಾಗಿಸುವ ಸಂಸಾರದಲ್ಲಿ' ಇರಲಿಚ್ಛಿಸುವುದೇ ಇಲ್ಲ. ಈಶ್ವರನು ಸಂಕಲ್ಪಿಸಿದರೆ ವಿಷಯಪ್ರವಣರಾದವರ ವಾಸನೆಯನ್ನು ಹೋಗ ಲಾಡಿಸಿ ತನ್ನಲ್ಲಿಗೆ ಕರೆದೊಯ್ಯಬಲ್ಲ. ಮಾಲಾಕಾರ ಮೊದಲಾದವರು ಇದಕ್ಕೆ ಉದಾಹರಣೆ. ಎಷ್ಟೇ ಭಗವತ್ಪ್ರವಣರಾಗಿರುವವರನ್ನೂ ದೇಹ ಸಂಬಂಧದ ದಾರಿಯಲ್ಲಿಯೇ ಹೋಗುವಂತೆ ಮಾಡಿ ವಿನಾಶವು ಫಲಿಸುವಂತೆಯೂ ಮಾಡ ಬಲ್ಲ ಅವನು. ಶ್ರೀಪ್ರಹ್ಲಾದನು ಭಗವಂತನ ಮೇಲೆಯೇ ಬಾಣಪ್ರಯೋಗ ಮಾಡಿದನಷ್ಟೇ ? ವಿಷಯ ಸಂಬಂಧ ಭಗವತ್ಪ್ರವಣರನ್ನೂ ಸೆಳೆದು ಬಿಡುವು ದಷ್ಟೇ ? ಸೌಭರಿ ಮತ್ಸ್ಯದರ್ಶನದಿಂದ ಸಂಸಾರಕ್ಕಿಳಿದು ಅನೇಕ ಕಾಲದ ಮೇಲೆ ಅದರಲ್ಲಿ ಜುಗುಪ್ಸೆ ಹೊಂದಿ ಮತ್ತೆ ತಪಸ್ಸಿಗೆ ಹಿಂದಿರುಗಿದನಷ್ಟೆ ?

**'ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಸ್ತ್ರಿಯಃ ।**
**ಏಕಸ್ಯಾಪಿ ನ ಪರ್ಯಾಪ್ತಂ ಇತಿಮತ್ವಾ ಶಮಂ ವ್ರಜೇತ್' ॥**

ಕರ್ಮವಾಸನೆ ವಿಷಯಗಳ ಕಡೆ ತೊಡಗಿಸುವುದು. ಜ್ಞಾನ ಅವುಗಳಲ್ಲಿ ಜುಗುಪ್ಸೆಯನ್ನುಂಟುಮಾಡಿ ಹಿಂತಿರುಗಿಸುವುದು. ತಾನು ಹೇಳಿದಂತೆ ಅವನು ಮಾಡುವುದಕ್ಕಾಗಿ ಸ್ವಾಮಿ ಅವನನ್ನು 'ಅತ್ತ' ಎನ್ನುತ್ತಾನೆ. 'ನೀನು ತಪಸ್ಸು

ಮಾಡುವಾಗ ಬಿಟ್ಟ ವಿಷಯಗಳು ಈಗ ನಿನಗೆ ಪ್ರತಿಬಂಧಕಗಳಾಗಿವೆ. ಅವು ಗಳನ್ನು ಅನುಭವಿಸಿ ಕೊನೆಯಲ್ಲಿ ನನ್ನನ್ನು ಸೇರು'—ಎಂದು ಸ್ವಾಮಿ ಅವನ ಅಭಿಪ್ರಾಯವನ್ನರಿತು ಕಾರ್ಯಕರನಾದ.

ಆಶ್ರಿತಾನರೂಪವಾದ ಅಪೇಕ್ಷಿತಗಳನ್ನು ನಡೆಸಿಕೊಡುವುದಕ್ಕಾಗಿ ತಾನೇ ನೀನಿಲ್ಲಿ ಬಂದು ಶಯನಿಸಿರುವುದು ? ಐಶ್ವರ್ಯ ಬೇಕೆನ್ನುವವರಿಗೆ ಅದನ್ನೇ ಕೊಡು. ದೇಹಸಂಬಂಧವನ್ನು ಹೋಗಲಾಡಿಸಬೇಕೆಂದು ಬೇಡುವವರಿಗೆ ಅದನ್ನೇ ನಡೆಸಿಕೊಡಬೇಕು. 'ನನ್ನ ಅಭಿಮತವನ್ನು ಅರಿತವನಾಗಿ, ಸಂಸಾರ ಭಯವನ್ನು ಪರಿಹರಿಸಿ ನಿನ್ನ ಪಾದಗಳನ್ನು ಎಂದೆಂದೂ ಅಗಲದಂತೆ ನಾನು ಸೇರುವಂತೆ ಅನುಗ್ರಹಿಸು'—ಎಂದು ಬೇಡುತ್ತಾರೆ.

ಮನ್ನು ನಾನ್ಮರೈ ಮಾಮುನಿ ಪೆತ್ತ
　　ಮೈಂದನೈ ಮದಿಯಾದ ವೆವ್ ಕೂತ್ತವನ್
ತನ್ನೈ ಅಂಜಿ ನಿನ್ ಶರಣ್ ಎನ ಶರಣಾಯ್
　　ತಹವಿಲ್ ಕಾಲನೈ ಉಹಮುನಿಂದು, ಒಟಿಯಾ
ಪಿನ್ನೈ ಎನ್ನುಂ ನಿನ್ ತಿರುವಡಿ ಪಿರಿಯಾವಣ್ಣಂ
　　ಎಣ್ಣಿಯ ಪೇರರುಳ್ ಎನಕ್ಕುಂ
ಅನ್ನದು ಆಹುಂ ಎನ್ರು ಅಡಿಇಣೈ ಅಡೈಂದೇನ್
　　ಅಣಿಪೊಟಿಲ್ ತಿರುವರಂಗತ್ತಮ್ಮಾನೇ ॥೩॥

(ಅಣಿಪೊಟಿಲ್ ತಿರುವರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿರುವ ದೇವನೇ, (ಮನ್ನುನಾನ್ಮರೈ ಮಾಮುನಿ) ದೃಢವಾದ ನಾಲ್ಕು ವೇದಗಳನ್ನು ಅಧಿಕರಿಸಿದ ಮಹಾಮುನಿ ಮೃಕಂಡು (ಪೆತ್ತಮೈಂದನೈ) ಪಡೆದ ಕುಮಾರನಾದ ಮಾರ್ಕಂಡೇಯನು (ಮದಿಯಾದ ವೆವ್‌ಕೂತ್ತಂ ತನ್ನೈ ಅಂಜಿ) ಯಾರನ್ನೂ ಲಕ್ಷ್ಯಮಾಡದ ಕ್ರೂರಿಯಾದ ಯಮನಿಗೆ ಹೆದರಿ (ನಿನ್‌ಶರಣ್ ಎನ) 'ನಿನಗೆ ನಾನು ಶರಣಾಗಿ ದ್ದೇನೆ' ಎಂದು ಹೇಳಿ ನಿನಗೆ ಶರಣು ಹೋದಾಗ (ಶರಣ್‌ಆಯ್) ಅವನಿಗೆ ನೀನು ರಕ್ಷಕನಾಗಿ (ತಹವು ಇಲ್ ಕಾಲನೈ ಉಹ ಮುನಿಂದ) ದಯೆಯಿಲ್ಲದ ಯಮನ ಬಲವು ಅಡಗುವಂತೆ ಅವನ ಮೇಲೆ ಕೋಪಿಸಿ (ಒಟಿಯಾ) ಅಷ್ಟಕ್ಕೇ

ಬಿಡದೆ (ಪಿನ್ನೈ) ಅದಕ್ಕೂ ಮೇಲೆ (ಎನ್ರುಂ ನಿನ್ ತಿರು ಅಡಿ ಪಿರಿಯಾವಣ್ಣಂ ಎಣ್ಣಿಯ) ಎಂದೆಂದೂ ಆ ಮುನಿಕುಮಾರನು ನಿನ್ನಪಾದಗಳನ್ನು ಬಿಟ್ಟಗಲದಂತೆ ಸಂಕಲ್ಪಿಸಿದ (ಪೇರ್ ಅರುಳ್) ನಿನ್ನ ಅಪಾರವಾದ ದಯೆಯು (ಎನಕ್ಕುಂ ಅನ್ನದು ಆಹುಂ) ನನ್ನ ವಿಷಯದಲ್ಲಿಯೂ ಅದೇ ರೀತಿಯಾಗಿ ಉಂಟಾಗ ಬೇಕೆಂದು (ಎನ್ರು) ನೆನೆದು (ಅಡಿಇಣೈ ಅಡೈಂದೇನ್) ನಿನ್ನ ಪಾದದ್ವಯವನ್ನು ಮರೆಹೊಕ್ಕಿದ್ದೇನೆ.

ನಿತ್ಯವಾದ ವೇದಗಳನ್ನು ಅಧ್ಯಯನ ಮಾಡಿ. 'ವೇದೈಶ್ಚ ಸರ್ವೈರಹ ಮೇವವೇದ್ಯಃ' ಎಂಬುವ ರೀತಿ ಉಪಾಸ್ಯನು ನೀನೇ ಎಂದರಿತು ನಿನ್ನನ್ನು ಉಪಾಸನೆ ಮಾಡಿದ ಮಹಿಮಾನ್ವಿತನಾದವನು ಮೃಕಂಡು ಮುನಿ. 'ಸ್ವಾಧ್ಯಾಯಾದ್ಯೋಗಮಾಸೀತ ಯೋಗಾತ್ ಸ್ವಾಧ್ಯಾಯಮಾವಸೇತ್ । ಸ್ವಾಧ್ಯಾಯ ಯೋಗ ಸಂಪತ್ತ್ಯಾ ಪರಮಾತ್ಮಾ ಪ್ರಕಾಶತೇ ॥' ಎಂದಂತೆ ವೇದ ವಿಹಿತವಾದ ರೀತಿಯಲ್ಲಿ ಯೋಗಾರೂಢನಾಗಿ ಜ್ಞಾನವಿಪಾಕದಶೆಯನ್ನು ಹೊಂದಿದ ಮೃಕಂಡು ಮುನಿಯ ಪುತ್ರ ಮಾರ್ಕಂಡೇಯ. ಹಾಗಿದ್ದರೂ ಇದನ್ನು ಲೆಕ್ಕಿಸದೆ ಯಮ ಮಾರ್ಕಂಡೇಯನನ್ನೊಯ್ಯಲು ಬಂದನಷ್ಟೇ ?

ಮೃತ್ಯುಭಯಭೀತನಾದ ಕುಮಾರ ಭಗವಂತನಲ್ಲಿ ಶರಣಾದನು; ಭಗವಂತನು ಅವನನ್ನು ದಯೆಯಿಂದ ರಕ್ಷಿಸಿ ಯಮನ ಮೇಲೆ ಕೋಪಿಸಿ, 'ವೈಷ್ಣವ ಪರಿಕರವನ್ನುಳ್ಳವರನ್ನು ನೀನು ಸಮೀಪಿಸಬಾರದು' ಎಂದು ನಿಯಮಿಸಿ ಯಮನಿಂದ ಬಂದ ಭಯವನ್ನು ಪರಿಹರಿಸಿದನು. 'ಅವ್ಯಾಹತಾನಿ ಕೃಷ್ಣಸ್ಯ ಚಕ್ರಾದೀನ್ಯಾಯುಧಾನಿ ತಂ । ರಕ್ಷಂತಿ ಸಕಲಾಪದ್ಭ್ಯೋ ಯೇನ ವಿಷ್ಣುರುಪಾಸಿತಃ ॥ ಎಂದಂತೆ ಭಗವಂತನಿಗೆ ಅಂಜಿ ಯಮ ಹಿಂತಿರುಗಿದ.

ಇಷ್ಟೇ ಅಲ್ಲ, ಆ ಮಾರ್ಕಂಡೇಯನು ಸಂಸಾರ ಸಂಬಂಧವನ್ನು ಕಳೆದು ಕೊಂಡು ಯಾವತ್ತೂ ಅಗಲದಂತೆ ನಿನ್ನ ಪಾದಗಳನ್ನು ಸೇರುವಂತೆ ಅನು ಗ್ರಹಿಸಿದೆ. 'ನನಗೂ ಹಾಗೆಯೇ ಆ ಪರಮ ಫಲವನ್ನು ಅನುಗ್ರಹಿಸಿ ರಕ್ಷಿಸ ಬೇಕು' ಎಂದು ಬೇಡಿದ್ದಾರೆ.

**ಓದು ನಾಯೆನ್ವೈಯುಮ್ ಉಪನಿಯಪ್ಪಿರಪ್ಪುಮ್**
**ಉನಕ್ಕು ಮುನ್‌ತಂದ ಅಂದಣನ್ ಒರುವನ್**

ಕಾದಲೆನ್‌ಮುಹನ್ ಪುಹಲ್‌ಇಡಮ್‌ಕಾಣೇನ್
ಕಂಡು ನೀ ತರುವಾಯ್ ಎನಕ್ಕೆನ್ರು
ಕೋದಿಲ್ ವಾಯ್‌ಮ್ಯೆಯಿನಾನ್ ಉನ್ನೈವೇಂಡಿಯ
ಕುರೈಮುಡಿತ್ತವನ್‌ಶಿರುವನ್ನೈ ಕೊಡುತ್ತಾಯ್
ಆದಲಾಲ್ ವಂದುಉನ್ ಅಡಿಯಿಣೈ ಅಡೈಂದೇನ್
ಅಣಿಪೊಳಿಲ್ ತಿರುವರಂಗತ್ತಮ್ಮಾನೇ ॥೭॥

(ಅಣಿಪೊಳಿಲ್ ತಿರುವರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತು ವರಿಯಲ್ಪಟ್ಟ ಶ್ರೀರಂಗದಲ್ಲಿರುವ ನಾಥನೇ. (ಓದು ವಾಯ್‌ಮ್ಯೆಯುಂ) ಅಧ್ಯಯನ ಮಾಡುವುದಕ್ಕೆ ತಕ್ಕುದಾದ ಸತ್ಯವಚನವಾದ ವೇದವನ್ನೂ (ಉಪ ನಿಯುಪ್ಪಿರಪ್ಪುಂ) ಅದನ್ನು ಅಧ್ಯಯನವಾಡುವುದಕ್ಕೆ ಅಧಿಕಾರವುಂಟಾಗುವಂತೆ ಉಪನಯನವನ್ನು ಮಾಡುವುದರಿಂದ ಬರುವ ಎರಡನೆಯ ಜನ್ಮವನ್ನು (ಮುನ್ ಉನಕ್ಕುತಂದ) ಮೊದಲು ನಿನಗೆ ತಂದುಕೊಟ್ಟವನೂ, (ಕೋದು ಇಲ್ ವಾಯ್‌ಮ್ಯೆಯಿನಾನ್) ದೋಷರಹಿತವಾದ ಸತ್ಯವಾಕ್ಕನ್ನುಳ್ಳವನೂ ಆದ (ಅಂದಣನ್ ಒರುವನ್) ಸಾಂದೀಪಿನಿ ಎಂಬ ಬ್ರಾಹ್ಮಣನು (ಕಾದಲ್ ಎನ್ ಮಹನ್ ಪುಹಲ್ ಇಡಂ ಕಾಣೇನ್) ನನ್ನ ಪ್ರೀತಿಪಾತ್ರನಾದ ಪುತ್ರನು ಹೋದ ಜಾಗವನ್ನು ನಾನರಿಯೆನು (ಕಂಡು ನೀ ಎನಕ್ಕುತರುವಾಯ್ ಎನ್ರು) ನೀನು ಅವನಿರುವ ಜಾಗವನ್ನು ಹುಡುಕಿ ಅವನನ್ನು ನನಗೆ ತಂದುಕೊಡಬೇಕು ಎಂದು (ಉನ್ನೈವೇಂಡಿಯ) ನಿನ್ನನ್ನು ಪ್ರಾರ್ಥಿಸಲು (ಕುರೈಮುಡಿತ್ತು) ಅವನ ಕೊರೆ ಯನ್ನು ಹೋಗಲಾಡಿಸಿ (ಅವನ್ ಶಿರುವನ್ನೈ ಕೊಡುತ್ತಾಯ್)ಅವನ ಮಗನನ್ನು ಅವನಿಗೆ ತಂದು ಕೊಟ್ಟು ಅನುಗ್ರಹಿಸಿದೆ. (ಆದಲಾಲ್) ಅಸಾಧ್ಯವಾದುದನ್ನು ಮಾಡಿ ಭಕ್ತರು ಬಯಸಿದುದನ್ನು ನೀನು ತಂದು ಕೊಡುವವನಾದುದರಿಂದ (ವಂದು ಉನ್ ಅಡಿ ಇಣೈ ಅಡೈಂದೇನ್) ಬಂದು ನಿನ್ನ ಪಾದಕಮಲಗಳಲ್ಲಿ ಶರಣು ಹೊಂದಿದ್ದೇನೆ.

'ಪೂರ್ವೇ ಪೂರ್ವೇಭ್ಯೋ ವಚ ಏತದೂಚುಃ' ಎಂದೂ 'ಶುಡರ್‌ಮಿಹಂ ಶುರುದಿಯುಳ್' ಎಂದೂ ಹೇಳುವಂತೆ ಆಚಾರ್ಯೋಚ್ಚಾರಣಾನಂತರ ಅನೂ ಚ್ಚಾರಣರೂಪದಲ್ಲಿ ಗುರುಶಿಷ್ಯಪರಂಪರೆಯಿಂದ ಶ್ರವಣದ ಮೂಲಕ ಅಧಿಕರಿಸು

ವಂತಹ ವೇದವನ್ನು ಸಾಂದೀಪಿನಿಗಳು ಶ್ರೀಕೃಷ್ಣನಿಗೆ ಉಪನಯನಾದಿಗಳನ್ನು ಮಾಡಿ, ಉಪದೇಶಿಸಿದರು. 'ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂದು ಹೇಳಿದಂತೆ ಬ್ರಹ್ಮದೇವನಿಗೆ ವೇದವನ್ನು ಕೊಟ್ಟ ನಿನಗೆ ಅವನು ಉಪದೇಶಿಸದನಷ್ಟೇ ? ಆ ಗುರು 'ನನ್ನ ಮಗ ಸಮುದ್ರದಲ್ಲಿ ಹೋಗಿ ಬಿಟ್ಟ. ಎಲ್ಲಿ ಹೋದನೋ ಕಾಣೆ. ಅವನನ್ನು ತಂದು ಕೊಡಬೇಕು'–ಎಂದು ಗುರುದಕ್ಷಿಣೆ ಕೇಳಿದಾಗ ಸ್ವಾಮಿ ಯಮಪುರಕ್ಕೆ ಹೋಗಿ ಯಮನಿಂದ ಸತ್ಕಾರ ಪೂರ್ವಕವಾಗಿ ಒಪ್ಪಿಸಲ್ಪಟ್ಟ ಆ ಪುತ್ರನನ್ನು ಗುರುವಿಗೆ ಒಪ್ಪಿಸಿದ.

ಕಡಲು ಕೊಂಡು ಹೋದ ವಸ್ತುವನ್ನು ಮತ್ತೆ ತಂದು ಕೊಟ್ಟ ಹಾಗೆ ಸಂಸಾರಾರ್ಣವವು ಕೊಂಡು ಹೋಗಿರುವ ನನ್ನನ್ನೂ ನಿನ್ನ ಕೈಂಕರ್ಯಕ್ಕೆ ಸಲ್ಲುವಂತೆ ತಿರುಗಿಸಿಕೊಳ್ಳುವುದಕ್ಕೆ ತಾನೇ ನೀನು ಶ್ರೀರಂಗದಲ್ಲಿ ಬಂದು ಶಯನಿಸಿರುವುದು ?

ನಿನ್ನ ಜ್ಞಾನ ಶಕ್ತಿ ಕಾರ್ಯಗಳು ಅಪ್ರತಿಹತವಾದವು. ಪ್ರಾಪ್ಯತ್ವರೆಯನ್ನುಳ್ಳ ನನ್ನ ಮನೋರಥವನ್ನೂ ನೀನು ಪೂರ್ಣಗೊಳಿಸಬೇಕು–ಎಂದು ಬೇಡುತ್ತಾರೆ.

**ವೇದವಾಯ್‌ಮೊೞಿ ಅಂದಣನ್ ಒರುವನ್**
**ಎಂದೈ ನಿನ್ ಶರಣ್ ಎನ್ನುಡೈ ಮನೈವಿ**
**ಕಾದಲ್ ಮಕ್ಕಳೈ ಪಯತ್ತಲುಂ ಕಾಣಾಳ್ ಕಡಿಯದು**
**ಓರ್‌ತೆಯ್‌ವಮ್ ಕೊಂಡೊೞಿಕ್ಕುಂ ಎನ್ಱು ಅೞೈಪ್ಪ**
**ಏದಲಾರ್ ಮುನ್ನೇ ಇನ್ನರುಳ್ ಅವರ್ಕ್ಕುಶೆಯ್‌ದು**
**ಉನ್ ಮಕ್ಕಳ್ ಮತ್ತಿವರ್ ಎನ್ಱು ಕೊಡುತ್ತಾಯ್**
**ಆದಲಾಲ್ ವಂದು ಉನ್ನಡಿಯಿಣೈ ಅಡೈಂದೇನ್**
**ಅಣಿಪೊೞಿಲ್ ತಿರುವರಂಗತ್ತಮ್ಮಾನೇ** ॥೮॥

(ಅಣಿ ಪೊೞಿಲ್ ತಿರುವರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತುವರಿದ ಶ್ರೀರಂಗದಲ್ಲಿರುವ ಸ್ವಾಮಿಯೇ, (ವೇದವಾಯ್ ಮೊೞಿ) ವೇದಗಳನ್ನು ವಾಚೋವಿಧೇಯವಾಗಿ ಅಧಿಕರಿಸಿದವನಾದ (ಅಂದಣನ್ ಒರುವನ್)

ವೈದಿಕಬ್ರಾಹ್ಮಣನೊಬ್ಬನು ನಿನ್ನನ್ನು ಸಮೀಪಿಸಿ (ಎಂದ್ರೈ ನಿನ್ ಶರಣ್) ನಮಗೆ ನಿರ್ವಾಹಕನಾದವನೇ, ನಾನು ನಿನಗೆ ರಕ್ಷ್ಯನಾಗಿದ್ದೇನೆ. (ಎನ್ನುಡೈ ಮನೈವಿ) ನನ್ನ ಪತ್ನಿಯಾದವಳು (ಕಾದಲ್ ಮಕ್ಕಳೈ) ತಾನು ಆಶೆಯಿಂದ ಪಡೆದುಕೊಂಡ ಮಕ್ಕಳನ್ನು (ಪಯತ್ತಲುಂ ಕಾಣಾಳ್) ಪ್ರಸವಿಸಿದ ಕೂಡಲೇ ಕಾಣುತ್ತಿಲ್ಲ. (ಕಡಿಯದು ಓರ್‌ತೆಯ್ವಂ) ಕ್ರೂರ ಸ್ವಭಾವದ ಒಂದು ದೈವವು (ಕೊಂಡು ಒಳಿಕ್ಕುಂ) ಆ ಮಕ್ಕಳನ್ನು ತೆಗೆದುಕೊಂಡು ಹೋಗಿ ಮರೆಸುವುದು (ಎನ್ರು) ಎಂದು ತನ್ನ ದುಃಖವನ್ನು (ಅಟ್ರೈಪ್ಪ) ತೋಡಿಕೊಂಡು ಅದನ್ನು ಪರಿಹರಿಸಲು ನಿನ್ನನ್ನು ಆಹ್ವಾನಿಸಲು (ಏದಲಾರ್ ಮುನ್ನೇ) ಆ ಶತ್ರುಗಳ ಮುಂದೆಯೇ (ಅವರ್ಕ್ಕ್ ಇನ್ ಅರುಳ್ ಶೆಯ್‌ದು) ಆ ವೈದಿಕನಿಗೆ ಪ್ರಿಯವಾಗು ವಂತೆ ದಯೆತೋರಿ (ಇವರ್ ಉನ್ ಮಕ್ಕಳ್ ಎನ್ರು ಕೊಡುತ್ತಾಯ್) 'ನಾನು ಕರೆದುಕೊಂಡು ಬಂದಿರುವ ಇವರು ನಿನ್ನ ಮಕ್ಕಳು' ಎಂದು ಹೇಳಿ ಅವರನ್ನು ತಂದುಕೊಟ್ಟು ಕೃಪೆಮಾಡಿದೆ. (ಆದಲಾಲ್) ಶರಣಾಗತ ರಕ್ಷಣವನ್ನು ನೀನು ಮಾಡುವವನಾದುದರಿಂದ (ವಂದು ಉನ್ ಅಡಿ ಇಣೈ ಅಡೈಂದೇನ್) ಬಂದು ನಿನ್ನ ಪಾದಗಳಲ್ಲಿ ಶರಣು ಹೊಕ್ಕಿದ್ದೇನೆ.

'ವೇದವಾಯ್ ಮೊಳಿ' ಎಂದು ಬ್ರಾಹ್ಮಣನಿಗೆ ಹೇಳಿರುವುದು ಸಾಭಿ ಪ್ರಾಯವಾಗಿದೆ. ವೇದತಾತ್ಪರ್ಯಾರ್ಥವನ್ನು ನಿರ್ಣಯಿಸಿ ಅದಕ್ಕೆ ವಾಚಕ ವಾದ ವೇದದ ಪಾರಾಯಣ ಮಾಡುವವನು. 'ನಹಿ ಜ್ಞಾನೇನ ಸದೃಶಂ' ಎಂಬಂತೆ ಜ್ಞಾನ ಶುದ್ಧಿಯನ್ನುಳ್ಳವನು. ವೇದ ತಾತ್ಪರ್ಯವನ್ನರಿತ ವೈದಿಕ ಅವನು. 'ಎಂದ್ರೈ' ಎಂದರೆ ಉತ್ಪಾದಕ. 'ಅವ್ಯಯಃ ಪಿತಾ' ಎಂಬಂತೆ ಸೃಜಿಸಿ ಸ್ವರೂಪಜ್ಞಾನವನ್ನೂ ಉಂಟುಮಾಡಿದ ಉಪಕಾರಕ ಎಂಬ ಭಾವ. ಆ ಬ್ರಾಹ್ಮಣನ ಪತ್ನಿ ಹತ್ತುತಿಂಗಳು ಹೊತ್ತು ಬೆಳೆಸಿದ ಮಕ್ಕಳು ಹೆತ್ತ ಕೂಡಲೇ ಕಣ್ಮರೆಯಾಗುತ್ತಿದ್ದರು. ಯಮನೂ ಸಹ ದೇಹ ಅಲ್ಲೇ ಬಿದ್ದಿರಲು ಆತ್ಮವನ್ನು ತಾನೇ ಕೊಂಡೊಯ್ಯುವನು? ಈ ದೇವತೆ ದೇಹದೊಡನೆ ತೆಗೆದುಕೊಂಡು ಹೋಗಿ ಎಲ್ಲಿಯೋ ಮರೆಸಿಡುತ್ತದೆ. ಆ ಬ್ರಾಹ್ಮಣ ತನ್ನ ಕೊರೆಯನ್ನು ಬಂದು ವಿಜ್ಞಾಪಿಸಿದ. ಕೃಷ್ಣ ಯಾಗವಿಶೇಷದಲ್ಲಿ ದೀಕ್ಷಿತನಾಗಿದ್ದಾಗ ಅರ್ಜುನ ತಾನು ಹೋಗಿ ಆ ಬ್ರಾಹ್ಮಣನ ಮಗುವನ್ನು ರಕ್ಷಿಸುವುದಾಗಿ ಹೇಳಿದ. ಗರ್ಭಗೃಹದ ಸುತ್ತ ಶರಪಂಜರವನ್ನೇ ಹೆಣೆದ. ಆಬಾರಿ ಮಗುವಿನ ದೇಹವೂ ಕಾಣಬರಲಿಲ್ಲ

ಮಗು ಮಾಯವಾಯಿತು. ಬ್ರಾಹ್ಮಣ ಅರ್ಜುನನನ್ನು ಅಧಿಕ್ಷೇಪಮಾಡಿದ. ಆ ಸಮಯದಲ್ಲಿ ಕೃಷ್ಣ ಅರ್ಜುನನನ್ನು ಕರೆದುಕೊಂಡು ಹೋಗಿ ಪರಮ ಪದವನ್ನು ಸೇರಿ, ಆ ಬ್ರಾಹ್ಮಣನ ನಾಲ್ಕು ಮಕ್ಕಳನ್ನೂ ಅಲ್ಲಿಂದ ಕರೆತಂದು ಬ್ರಾಹ್ಮಣನಿಗೆ ಒಪ್ಪಿಸಿದನು. 'ನಿನ್ನ ಈ ಅತಿಶಯಿತ ಶಕ್ತಿಯನ್ನು ಅನುಸಂಧಾನ ಮಾಡಿ ನಿನ್ನಲ್ಲಿ ಶರಣಾಗಿದ್ದೇನೆ'—ಎಂದು ಆಳ್ವಾರ್ ಹೇಳುತ್ತಾರೆ.

**ತುಳಂಗು ನೀಳ್‌ಮುಡಿ ಅರಶರ್‌ತಮರ್ ಕುರಿಶಿಲ್**
**ತೊಂಡೈ ಮನ್ನವನ್ ತಿಣ್‌ತಿರಲ್ ಒರುವರ್ಕ್ಕು**
**ಉಳಂಕೊಳ್ ಅನ್ಬಿನೋಡು ಇನ್ನರುಳ್ ಶುರನ್ದು**
**ಅಂಗು ಓಡು ನಾಟಿಹೈ ಏಟುಡನ್ ಇರುಪ್ಪ**
**ವಳಂಕೊಳ್ ಮಂದಿರಂ ಮತ್ತು ಅವರ್ಕ್ಕರುಳಿ**
**ಶೆಯ್‌ದ ಆರು ಅಡಿಯೇನರಿಂದು ಉಲಹಂ**
**ಅಳಂದ ಪೊನ್ನಡಿಯೇ ಅಡೈಂದು ಉಯ್‌ನ್ದೇನ್**
**ಅಣಿಪೊಟಿಲ್ ತಿರುವರಂಗತ್ತಮ್ಮಾನೇ** ॥೯॥

(ಅಣಿಪೊಟಿಲ್ ತಿರು ಅರಂಗತ್ತಮ್ಮಾನೇ) ಸುಂದರವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿರುವ ಸರ್ವೇಶ್ವರನೇ. (ತುಳಂಗು) ಪ್ರಕಾಶಿಸುತ್ತಿರುವ (ನೀಳ್‌ಮುಡಿ) ನೀಳವಾದ ಕಿರೀಟವನ್ನುಳ್ಳ (ಅರಶರ್ ತಮರ್ ಕುರಿಶಿಲ್) ಅರಸರುಗಳಿಗೆ ಅರಸನಾದವನೂ (ತಿಣ್‌ತಿರಲ್) ಅತ್ಯಧಿಕವಾದ ಬಲವನ್ನುಳ್ಳವನೂ ಆದ (ತೊಂಡೈಮನ್ನವನ್ ಒರುವರ್ಕ್ಕು) ತೊಂಡ ನಾಡಿನ ರಾಜನೊಬ್ಬನಿಗೆ (ಉಳವರ್‌ಕೊಳ್ ಅನ್ಬಿನೊಡು ಇನ್ ಅರುಳ್ ಶುರಂದು) ನಿನ್ನ ಮನದಲ್ಲುಂಟಾದ ಪ್ರೀತಿಯೊಡನೆ ಹೃದ್ಯವಾದ ಕರುಣೆಯನ್ನು ವರ್ಷಿಸಿ (ಅಂಗು ಓಡು ನಾಟಿಹೈ ಏಟುಡನ್ ಇರುಪ್ಪ) ಅರಸೊತ್ತಿಗೆಯ ಸಿರಿಯಲ್ಲಿ ಕಳೆದು ಹೋಗುವ ಘಳಿಗೆಗಳು ಹಾಗೆ ವ್ಯರ್ಥವಾಗದೆ ಏಳು ತತ್ತ್ವಗಳೊಡನೆ ಕೂಡಿ ಇರುವಂತೆ (ವಳಂ ಕೊಳ್ ಮಂದಿರಂ) ಶ್ರೇಷ್ಠವಾದ ತಿರುಮಂತ್ರವನ್ನೂ (ಮತ್ತು) ಮತ್ತು ಅದರ ದಿವ್ಯಾರ್ಥಗಳನ್ನೂ (ಅವರ್ಕ್ಕು ಅರುಳಿಶೆಯ್‌ದ ಆರು) ಆ ತೊಂಡಮಾನ್ ಚಕ್ರವರ್ತಿಗೆ ಉಪದೇಶಿಸಿ ಅನುಗ್ರಹಿಸಿದ ಬಗೆಯನ್ನು (ಅಡಿಯೇನ್ ಅರಿಂದು) ನಾನು ತಿಳಿದುಕೊಂಡವನಾಗಿ

(ಉಲಹಂ ಅಳಂದ ಪೊನ್ ಅಡಿಯೇ ಅಡೈಂದು ಉಯ್‍ನ್ದೇನ್) ಲೋಕವನ್ನಳೆದ ಪೊನ್ನಡಿಯನ್ನೇ ಸೇರಿ ಉಜ್ಜೀವಿಸಿದೆನು.

ತೊಂಡಮಾನ್ ಚಕ್ರವರ್ತಿ ಪರಸ್ಪರ ವಿರೋಧ ಬಾರದಂತೆ ರಾಜ್ಯವನ್ನಾಳಿದ ತೇಜಸ್ಸನ್ನು ಇಲ್ಲಿ 'ತುಳಂಗು' ಎಂದು ಹೇಳಿದೆ. 'ನೀಳ್‌ಮುಡಿ' ಎನ್ನುವುದು ರಾಜ್ಯದಷ್ಟಕ್ಕೂ ಹರಡಿದ ತೇಜಸ್ಸನ್ನು ಸೂಚಿಸುತ್ತದೆ. ರಾಜರುಗಳಿಗೆ ರಾಜನಾದವನವನು. 'ವೀರಭೋಗ್ಯಾವಸುಂಧರಾ' ಎಂಬಂತೆ ತನ್ನ ವೀರ್ಯದಿಂದ ಎಲ್ಲೆಲ್ಲೂ ಜ್ವಲಿಸಿದವನು ಅವನು. ಈ ವಿಶೇಷಣಗಳೆಲ್ಲಾ ಸ್ವರೂಪ ಜ್ಞಾನವುಳ್ಳವನೊಬ್ಬನಿಗೆ ಅನುಕೂಲರಕ್ಷಣಕ್ಕೂ ಪ್ರತಿಕೂಲ ನಿರಸನಕ್ಕೂ ಅತ್ಯಂತ ಉಪಯುಕ್ತವಾದವುಗಳೇ ಆಗುತ್ತವೆ. ಸ್ವಾಮಿ ತೋರಿದ ಪ್ರೀತಿ ಆ ರಾಜನ ಹಿತೋಪದೇಶಕ್ಕಾಗಿ ಆಯಿತು. ಅವನಿಗೆ ಏಳು ಅರ್ಥಗಳು ಅವನು ರಾಜ್ಯಭಾರವನ್ನು ವಹಿಸಿದ ಕಾಲದಲ್ಲಿಯೂ ಇರುವಂತೆ ಅನುಗ್ರಹಿಸಿ ಅವನ ಕಾಲ ವ್ಯರ್ಥವಾಗದಂತೆ ಮಾಡಿದ ಸ್ವಾಮಿ. ದೇಹಾತ್ಮಾಭಿಮಾನ ನಿವೃತ್ತಿ, ಸ್ವಾತಂತ್ರ್ಯನಿವೃತ್ತಿ, ಅನ್ಯಶೇಷತ್ವನಿವೃತ್ತಿ, ಸ್ವಯತ್ನನಿವೃತ್ತಿ, ಅಬಂಧುಗಳಲ್ಲಿ ಬಂಧುಪ್ರತಿಪತ್ತಿಯ ನಿವೃತ್ತಿ, ವಿಷಯನಿವೃತ್ತಿ ಮತ್ತು ಭಾಗವತ ಶೇಷತ್ವ ಪ್ರತಿಪತ್ತಿ—ಈ ಏಳು ಅರ್ಥಗಳನ್ನು ಅವನು ಹೊಂದುವಂತೆ ಮಾಡಿದ ಸ್ವಾಮಿ

> 'ದೇಹಾಸಕ್ತಾತ್ಮಬುದ್ಧಿರ್ಯದಿ ಭವತಿಪದಂ ಸಾಧು ವಿದ್ಯಾತ್‌ತೃತೀಯಂ
> ಸ್ವಾತಂತ್ರ್ಯಾಂಧೋ ಯದಿಸ್ಯಾತ್ಪ್ರಥಮಂ ಇತರ ಶೇಷತ್ವಧೀಶ್ಚೇತ್
> ದ್ವಿತೀಯಂ ।
> ಆತ್ಮತ್ರಾಣೋನ್ಮುಖಶ್ಚೇತ್ ನಮ ಇತಿಚಪದಂ ಬಾಂಧವಾಭಾಸಲೋಲಃ
> ಶಬ್ದಂ ನಾರಾಯಣಾಖ್ಯಂ ವಿಷಯಚಪಲಧೀಶ್ಚೇಚ್ಚತುರ್ಥೀಂ
> ಪ್ರಪನ್ನಃ ॥'

ಎಂದು ಶ್ರೀ ಭಟ್ಟರು ಹೇಳಿರುವುದನ್ನು ಅನುಸಂಧಾನ ಮಾಡಬೇಕು. ಪ್ರಪನ್ನನಿಗೆ ಸ್ವರೂಪಜ್ಞಾನವನ್ನುಂಟುಮಾಡಿ ಸಂಸಾರದಿಂದ ಪಾರುಮಾಡುವ ತಿರುಮಂತ್ರವನ್ನು ಸ್ವಾಮಿ ಉಪದೇಶಿಸಿದ ಆ ಚಕ್ರವರ್ತಿಗೆ. ತೊಂಡಮಾನ್ ಚಕ್ರವರ್ತಿಯ ಜೊತೆಗೆ ತಿರುವೇಂಗಡನಾಯಕನು ಏಳು ಘಳಿಗೆಗಳ ಕಾಲ ಇದ್ದನೆಂಬುದು ಪ್ರಸಿದ್ಧವಷ್ಟೇ ? 'ಸರ್ವಂ ಅಷ್ಟಾಕ್ಷರಸ್ಥಂ' ಎಂದು ಹೇಳುವ

ಹಿರಿಮೆಯನ್ನುಳ್ಳ ದಿವ್ಯಮಂತ್ರವನ್ನು ಅವನಿಗೆ ಸ್ವಾಮಿ ಉಪದೇಶಿಸಿದ. ವಿಮುಖರ ತಲೆಯ ಮೇಲೆಯೂ ಇಟ್ಟಂಥ ಆ ಸ್ಪೃಹಣೀಯವಾದ ಪಾದ ಲೋಕದ ಸರ್ವರಿಗೂ ಉಚ್ಚನೀಚತಾರತಮ್ಯವಿಲ್ಲದೆ ಪ್ರಾಪ್ಯವೇ ಆಗಿದೆ. ತಿರುವೇಂಗಡಮುಡೈಯಾನ್ ಮಾಡಿದ ಅನುಗ್ರಹವನ್ನು ಹೇಳಿ ತಿರುವರಂಗನಲ್ಲಿ ಶರಣಾಗಿದ್ದಾರೆ. ಅವನಿಗೆ ಒಂದು ಉದ್ಯೋಗ ತಿರುಮಲೆಯಲ್ಲಿ ಉಂಟೆಂದು ತೋರುತ್ತದೆ. ಆದರೆ ಅವನು ಅನಂತರ ಬಂದು ಶಯನಿಸಿದ ಕ್ಷೇತ್ರ ಶ್ರೀರಂಗವಷ್ಟೇ ?

**ಮಾಡಮಾಳಿಕೈಶೂಟ್ ತಿರುಮಂಗೈಮನ್ನನ್**
**ಒನ್ನಲರ್ ತಂಗಳೈ ವೆಲ್ಲುಂ**
**ಅಡಲ್‌ಮಾ ವಲವನ್ ಕಲಿಕನ್ರಿ**
**ಅಣಿಪೊಟಿಲ್ ವಲವನ್ ತಿರುವರಂಗತ್ತಮ್ಮಾನೈ**
**ನೀಡು ತೊಲ್‌ಪುಹಟ್ ಆಟಿವಲ್ಲಾನೈ**
**ಎಂದೈಯೈ ನೆಡುಮಾಲೈ ನಿನ್ಯೆಂದ**
**ಪಾಡಲ್ ಪತ್ತಿವೈ ಪಾಡುಮಿನ್ ತೊಂಡೀರ್**
**ಪಾಡ ನುಮ್ಮಿಡೈ ಪಾವಂ ನಿಲ್ಲಾವೇ ॥೧೦॥**

(ಮಾಡಂಮಾಳಿಹೈಶೂಟ್) ಉಪ್ಪರಿಗೆಗಳನ್ನುಳ್ಳ ಪ್ರಾಸಾದಗಳಿಂದ ಸುತ್ತು ವರಿಯಲ್ಪಟ್ಟ (ತಿರುಮಂಗೈ) ತಿರುಮಂಗೈನಾಡಿಗೆ (ಮನ್ನನ್)ಅರಸರಾದವರೂ, (ಒನ್ನಲರ್ ತಂಗಳೈವೆಲ್ಲುಂ) ಶತ್ರುಗಳನ್ನು ಜಯಿಸುಲು ತಕ್ಕುದಾದ (ಅಡಲ್ ಮಾವಲವನ್) ಬಲಯುತವಾದ ಅಶ್ವವನ್ನು ಲೀಲೆಯಿಂದ ಏರಿ ಅಡಗಿಸ ಬಲ್ಲವರೂ ಆದ (ಕಲಿಕನ್ರಿ) ತಿರುಮಂಗೈ ಆಳ್ವಾರವರು (ಅಣಿ ಪೊಟಿಲ್ ತಿರುವರಂಗತ್ತಮ್ಮಾನೈ) ಸುಂದರವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿ ಶಯನಿಸಿರುವ ಸ್ವಾಮಿಯೂ, (ತೊಲ್ ನೀಡುಪುಹಟ್) ಅತಿಶಯ ವಾದ ಕೀರ್ತಿಯನ್ನುಳ್ಳ (ಆಟಿ) ಶ್ರೀಸುದರ್ಶನ ಚಕ್ರವನ್ನು ಪ್ರಯೋಗಿಸುವು ದನ್ನು (ವಲ್ಲಾನೈ) ಬಲ್ಲವನೂ (ಎಂದೈಯೈ) ನಮಗೆ ನಾಯಕನೂ ನಿರ್ವಾಹಕನೂ ಆದ (ನೆಡುಮಾಲೈ) ಶ್ರೀಮನ್ನಾರಾಯಣನನ್ನು (ನಿನ್ಯೆಂದ

ಇವೈಪತ್ತು ಪಾಡಲ್) ಮನಸ್ಸಿನಲ್ಲಿ ಅನುಭವಿಸಿ ಹಾಡಿದ ಈ ಹತ್ತುಪಾಶುರಗಳನ್ನು (ತೊಂಡೀರ್ ಪಾಡುಮಿನ್) ಭಕ್ತರೇ, ಪಾಡುವವರಾಗಿ. (ಪಾಡನುಮ್ಮಿಡೈ ಪಾವಮನಿಲ್ಲಾ) ನೀವು ಹಾಡಿದರೆ ನಿಮ್ಮ ಪಾಪವೆಲ್ಲಾ ನಾಶವಾಗುತ್ತದೆ.

ತಮಗೆ ಬಂದ ಹಿರಿಮೆಯೆಲ್ಲಾ ಆ ತಿರುಮಂಗೈ ಕ್ಷೇತ್ರದಲ್ಲಿ ಜನಿಸಿದುದರಿಂದ ಬಂದದ್ದು ಎಂದು ಹೇಳುತ್ತಾರೆ ಆಳ್ವಾರ್ ಅವರು. ಜನ್ಮಸ್ಥಲದ ಹಿರಿಮೆಯನ್ನು ಹೇಳಿದಂತಾಯಿತು. ಲೋಕಪರಿಗ್ರಹಕ್ಕೆ 'ಆಪ್ತನು ಹೇಳಿದುದು-' ಎಂದಾಗ ಬೇಕಷ್ಟೇ ? 'ವಾಲ್ಮೀಕಿ ರ್ಭಗವಾನ್‌ಋಷಿಃ', 'ಸಹೋವಾಚ ವ್ಯಾಸಃ ಪಾರಾಶರ್ಯ:', 'ಕುರುಹೂರ್ ಶಡಹೋಪನ್ ಶೊನ್ನ'—ಎಂದು ಹೇಳಿದ ಹಾಗೆಯೇ ಇದೂ ಸಹ. ಪ್ರಮಾಣದೂಷಕರೂ, ಪ್ರಮೇಯದೂಷಕರೂ ಆದ ಬಾಹ್ಯಕುದೃಷ್ಟಿಗಳೇ ಇವರ ಶತ್ರುಗಳು. ಪಾಪ ಪ್ರತಿಭಟರಾದ ಇವರು ಭಗವತ್ಸ್ವಭಾವವನ್ನು ಮನನ ಮಾಡಿ ಹೇಳಿದ ಪಾಶುರಗಳಿವು. ಸುದರ್ಶನವನ್ನು ತನಗೆ ವಶವನ್ನಾಗಿ ಮಾಡಿಕೊಂಡು ಕೆಲಸವನ್ನು ಮಾಡಿಸಿಕೊಳ್ಳುತ್ತಾನೆ ಸ್ವಾಮಿ; ಪರಿಕರವನ್ನು ಹೊಂದಿದವನು ಇತರರ ಕಾರ್ಯಮಾಡಬೇಕಾದುದಿಲ್ಲವಲ್ಲ! ಅದಕ್ಕಾಗಿ ಹೇಳುತ್ತಾರೆ 'ಎಂದೈ' ಎಂದು, ಕಾರ್ಯಮಾಡಲು ತಕ್ಕಪ್ರಾಪ್ತಿ ಉಂಟೆಂದು ಹೇಳಿದ್ದಾರೆ ಇದರಿಂದ, ಅವನು ಕಾರ್ಯಮಾಡಲು ಪ್ರಾಪ್ತಿ ಇದ್ದರೂ ಸಹ ಅವನು ವ್ಯಾಮುಗ್ಧನಾಗದಿದ್ದರೆ ಪ್ರಯೋಜನವಾಗದು. ಅದಕ್ಕಾಗಿ 'ನೆಡುಮಾಲ್ಡೆ' ಎಂದರು. ಇವೆಲ್ಲಾ ಆಶ್ರಯಣಕ್ಕೆ ಏಕಾಂತವಾದ ಅವನ ಸ್ವಭಾವವನ್ನು ತಿಳಿಸುವುವು, 'ಭಗವದ್ವಿಷಯದಲ್ಲಿ ಆತುರರಾದವರೇ, ಹರ್ಷಪ್ರಕರ್ಷದಿಂದ ಇವನ್ನು ಹಾಡಿ' ಎನ್ನುತ್ತಾರೆ. ಭಗವತ್ಪ್ರಾಪ್ತಿಗೆ ಅಡ್ಡಿಯಾಗಿರುವ ಪ್ರತಿಬಂಧಕಗಳೆಲ್ಲ ಇದನ್ನು ಹಾಡುವುದರಿಂದ ಹೋಗುತ್ತವೆ.

# 'ಕೈಯಿಲಂಗು'

## ಪ್ರವೇಶ

ಶ್ರೀರಂಗನಾಥನ ಪಾದಾರವಿಂದಗಳಲ್ಲಿ ಆಳ್ವಾರ್ ಅವರು ಶರಣಾಗತಿ ಮಾಡಿದರು. ಪ್ರಪತ್ತಿಗೆ ಫಲವು ತಪ್ಪದೇ ಬರಬೇಕಷ್ಟೇ ? ಆದರೂ ಈಶ್ವರನಿಗೆ ಸ್ವಾತಂತ್ರ್ಯವೆಂಬುದೂ ಒಂದುಂಟಷ್ಟೇ ? ಗೋವಿಂದಸ್ವಾಮಿಗೆ ಭಗವತ್ಪ್ರಾವಣ್ಯ ಉಂಟಾಗಿದ್ದರೂ 'ಕ್ಷುದ್ರವಿಷಯಗಳನ್ನನುಭವಿಸಿ ಅನಂತರ ನನ್ನಲ್ಲಿಗೆ ಬಾ'—ಎಂದು ಹೇಳಿಬಿಟ್ಟನಷ್ಟೇ ? ಹಾಗೆಯೇ ಆಳ್ವಾರವರಿಗೆ ಭಗವಂತನು ಒಲಿದು ನೆಲಸಿರುವ ದಿವ್ಯದೇಶಗಳಲ್ಲಿ ಅವನನ್ನು ಅನುಭವಿಸಬೇಕೆಂಬ ಅಭಿನಿವೇಶ ಉಂಟಾಯಿತು. 'ನಿಮ್ಮ ಅಭಿನಿವೇಶಕ್ಕನುಸಾರ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರವೇಶಿಸಿ ಅನುಭವಿಸಿ ನಂತರ ಬನ್ನಿ'—ಎಂದು ಸ್ವಾಮಿ ಹೇಳಲು ತಿರುಪ್ಪೇರ್ ಕ್ಷೇತ್ರಕ್ಕೆ ಹೋಗಿ ಆ ಕ್ಷೇತ್ರನಾಥನನ್ನು ಅನುಭವಿಸಿ ಮೈಮರೆತವರಾಗಿ ಅವನನ್ನು ಕೊಂಡಾಡುತ್ತಾರೆ.

> ಕೈ ಇಲಂಗು ಆಟಿಶಂಗನ್ ಕರುಮುಹಿಲ್ ತಿರುನಿರತ್ತನ್
> ಪೊಯ್ಯಿಲನ್ ಮೆಯ್ಯನ್ ತನ್ ತಾಳ್ ಅಡೈವರೇಲ್
> ಅಡಿಮೈಯೊಕ್ಕುಂ
> ಶೆಯ್ಯಲರ್ ಕಮಲಂ ಓಂಗು ಶೆರಿಪೊಟಿಲ್ ತನ್ ತಿರುಪ್ಪೇರ್
> ಪೈ ಅರವಣೈಯಾನ್ ನಾಮಂ ಪರವಿ ನಾನ್
> ಉಯ್ನ್ದವಾರೇ ‖೧‖

(ಕೈಇಲಂಗು ಆಟಿಶಂಗನ್) ಶ್ರೀಹಸ್ತವನ್ನು ಜಾಜಲ್ಯಗೊಳಿಸುವ ಶಂಖ ಚಕ್ರಗಳನ್ನುಳ್ಳವನೂ, (ಕರುಮುಹಿಲ್ ತಿರುನಿರತ್ತನ್) ಕಾಳಮೇಘದಂತೆ ಶ್ಯಾಮಲವರ್ಣನೂ, (ಪೊಯ್‌ಇಲನ್) ಸುಳ್ಳಾಗದವನೂ (ಮೆಯ್ಯನ್) ದಾಸ ಸತ್ಯನೂ (ತನ್‌ತಾಳ್ ಅಡೈವರೇಲ್ ಅಡಿಮೈಯಾಕ್ಕುವವ್) ತನ್ನ ಪಾದಗಳನ್ನು

ಆಶ್ರಯಿಸಿದವರನ್ನು ನಿತ್ಯಕಿಂಕರರನ್ನಾಗಿ ಮಾಡಿಕೊಳ್ಳುವವನೂ, (ಅಲರ್ ಕಮಲಂ ಓಂಗು ಶೆಯ್) ಅರಳಿದ ಕಮಲಗಳು ಸಮೃದ್ಧವಾಗಿರುವ ಗದ್ದೆಗಳೂ (ಶೆರಿ ಪೊಟಿಲ್) ನಿಬಿಡವಾದ ತೋಪುಗಳೂ ಇರುಪಂತಹ (ತೇನ್ ತಿರುಪ್ಪೇರ್) ತಿರುಪ್ಪೇರ್ ನಗರದಲ್ಲಿ (ಪೈ ಅರವು ಅಣೈಯಾನ್) ಶೇಷಶಯನನಾದವನೂ ಆದ ಪರಮಾತ್ಮನ (ನಾಮಂ) ಶ್ರೀನಾಮಗಳನ್ನು (ನಾನ್‌ಪರವಿ ಉಯ್‌ನ್ದ ಆರೇ) ನಾನು ಸಂಕೀರ್ತನಮಾಡಿ ಬದುಕಿ ಹೋದ ಬಗೆ ಎಂಥದೋ !

ಮೇಘದಲ್ಲಿ ಮಿಂಚು ಹೊಳೆದಂತೆ ಆಗಿತ್ತು ದಿವ್ಯಾಯುಧಗಳೊಡನೆ ಸೇರಿದ ದೇಹಕಾಂತಿ. ಮಹಾವಿಶ್ವಾಸ ಪೂರ್ವಕವಾಗಿ ಶರಣಾದವರ ಬಗೆಗೆ, 'ತಸ್ಯೈಷ ಆತ್ಮಾ ವಿವೃಣುತೇ', 'ರಸಂ ಹ್ಯೇವಾಯಂ ಲಬ್ಧ್ವಾ ಆನಂದೀಭವತಿ' ಎಂದು ಹೇಳುವ ಪ್ರಮಾಣಗಳನುಸಾರ ಎಂದೂ ಸುಲ್ಭಾಗದವನು—'ಕ ಇತ್ಥಾ ವೇದ ಯತ್ರ ಸಃ' ಎಂದು ಹೇಳಲ್ಪಟ್ಟ ಸರ್ವಸ್ವಾತ್ಮಪರನು ಪರಮಸುಲಭನೂ, ಸುಶೀಲನೂ, ವತ್ಸಲನೂ ಆಗುವನೇ'—ಎಂದು ಶಂಕಿಸದಂತೆ ತನ್ನ ಆ ಗುಣಗಳೆಲ್ಲ ನಿಜವೆಂಬುವಂತೆ ತೋರಿಕೊಡತಕ್ಕವನವನು. ಬೇರೆ ಯಾವ ಪ್ರಯೋಜನದ ಅಪೇಕ್ಷೆಯೂ ಇಲ್ಲದೆ ತನನ್ನು ಆಶ್ರಯಿಸುವ ಭಕ್ತರುಗಳಿಗೆ ತನ್ನ ನಿತ್ಯಕೈಂಕರ್ಯವನ್ನು ಅನುಗ್ರಹಿಸುವ ಉದಾರನವನು. ನಿರಂತರವಾದ ಭಗವದನುಭವದಿಂದ ಉಂಟಾದ ಹರ್ಷದಿಂದ ವಿಕಸಿತವಾದ ಹೆಡೆಗಳನ್ನುಳ್ಳ ಆದಿಶೇಷನನ್ನು ಶಯನವನ್ನಾಗಿ ಹೊಂದಿರುವ ಆ ಸರ್ವೇಶ್ವರನ ಶ್ರೀನಾಮಗಳನ್ನು ಎಲ್ಲರೂ ಕೇಳುವಂತೆ ಕೀರ್ತಿಸಿಕೊಂಡೇ ಪಡೆದವಲ್ಲವೋ ನಾನು ಉಜ್ಜೀವಿಸಿದ ಪ್ರಕಾರಗಳು !

**ವಂಗಂ ಆರ್‌ಕಡಲ್‌ಹಳ್ ಏಟುಮ್ ಮಲೈಯುಂ**
**ವಾನಹಮುಂ ಮತ್ತುಂ**
**ಅಮ್‌ಕಣ್ ಮಾ ಞಾಲಮೆಲ್ಲಾಂ ಅಮುದು ಶೆಯ್‌ದು**
**ಉಮಿಟ್‌ನ್ದ ಎಂದೈ**
**ತಿಂಗಳ್ ಮಾಮುಹಿಲ್ ಅಣವು ಶೆರಿಪೊಟಿಲ್ ತೇನ್**
**ತಿರುಪ್ಪೇರ್**
**ಎಂಗಳ್‌ಮಾಲ್ ಇಕೈವನ್ ನಾಮಂ ಏತ್ತಿ ನಾನ್ ಉಯ್‌ನ್ದ**
**ವಾರೇ ॥೨॥**

(ವಂಗಂ ಆರ್‌ಕಡಲ್‌ಹಳ್‌ಏಟುವರ್) ಹಡಗುಗಳಿಂದ ತುಂಬಿದ್ದ ಸಪ್ತಸಮುದ್ರ
ಗಳನ್ನೂ (ಮಲೈಯುಂ) ಕುಲಪರ್ವತಗಳನ್ನೂ (ವಾನಹಮುಂ) ಆಕಾಶವನ್ನೂ
(ಮತ್ತುಂ) ಅದಕ್ಕೂ ಮೇಲೆ (ಅಮ್‌ಕಣ್ ಮಾ ಞಾಲಂ ಎಲ್ಲಾಂ) ವಿಶಾಲ
ವಾದ ಭೂಮಂಡಲವಾಗಿರುವ ಸಕಲವನ್ನೂ (ಅಮುದು ಶೆಯ್‌ದು) ಪ್ರಲಯ
ಕಾಲದಲ್ಲಿ ಭುಜಿಸಿ (ಉಮಿಟ್‌ನ್ದ ಎಂದೈ) ಮತ್ತು ಸೃಷ್ಟಿಕಾಲದಲ್ಲಿ ಹೊರಗೆ
ಹಾಕಿದ ನಮ್ಮ ಸ್ವಾಮಿಯಾದವನೂ, (ತಿಂಗಳ್ ಮಾಮುಹಿಲ್ ಅಣವು) ಚಂದ್ರ
ಮಂಡಲವನ್ನೂ ಮೇಘಮಂಡಲವನ್ನೂ ಮುಟ್ಟುವಂತಹ (ಶೆರಿಪೊಟಿಲ್)
ಉನ್ನತವಾದ ತೋಪುಗಳನ್ನುಳ್ಳ (ತೆನ್ ತಿರುಪ್ಪೇರ್) ತಿರುಪ್ಪೇರ್‌ನಗರದಲ್ಲಿ
ನೆಲಸಿರುವವನೂ ಆದ (ಎಂಗಳ್‌ಮಾಲ್ ಇರೈವನ್) ನಮ್ಮ ಪರಮಾತ್ಮನ
(ನಾಮಂ ಏತ್ತಿ ನಾನ್ ಉಯ್‌ನ್ದ ವಾರೇ) ಶ್ರೀನಾಮಗಳನ್ನು ಸ್ತುತಿಸಿ ನಾನು
ಉಜ್ಜೀವಿಸಿ ಹೋದ ಬಗೆ ಆಶ್ಚರ್ಯವಾದದ್ದು !

ಪ್ರಲಯಕಾಲ ಬಂದಾಗ ಲೋಕವನ್ನೆಲ್ಲಾ ರಕ್ಷಿಸಿಡಲು ಸಪ್ತಸಮುದ್ರವೇ
ಮೊದಲಾದವನ್ನೂ ಮಹಾಪೃಥಿವಿಯನ್ನೂ ಮತ್ತೆಲ್ಲವನ್ನೂ ತನ್ನ ಹೊಟ್ಟೆ
ಯೊಳಗಿಟ್ಟುಕೊಂಡ ಕರುಣಾಕರ ಅವನು. ಪ್ರಲಯವು ಹೋದ ಮೇಲೆ ಅದನ್ನು
ಮತ್ತೆ ಹೊರಕ್ಕೆ ತಂದ ಸ್ವಾಮಿ ಅವನು. ಇವನು ಯಾರು ಎಂದರೆ ತಿರುಪ್ಪೇರ್
ನಗರದಲ್ಲಿ ನೆಲಸಿರುವ ಪರಮಾತ್ಮನೇ. ನಮ್ಮಂಥ ಆಶ್ರಿತರ ಬಗೆಗೆ ಅಪಾರವಾದ
ವ್ಯಾಮೋಹವನ್ನುಳ್ಳವನು. ನಮ್ಮಲ್ಲಿ ಅವನು ಮುಗ್ಧನಾಗದಿದ್ದರೂ ನಾವು
ಬಿಡುವದಕ್ಕಾಗದು ಅವನನ್ನು. ಅವನು ಅಂಥ ದಿವ್ಯಮಂಗಳ ಸ್ವರೂಪಿಯಾಗಿ
ದ್ದಾನೆ. 'ನೀವು ಏನನ್ನು ಮಾಡಿ ಏನನ್ನು ಪಡೆದುಕೊಂಡಿರಿ ?' —ಎಂದರೆ
ಆಳ್ವಾರ್ ಹೇಳುತ್ತಾರೆ 'ಅವನ ಶ್ರೀನಾಮಗಳನ್ನು ಕೀರ್ತಿಸಿ, ಸ್ತುತಿಸಿದೆ. ಹೀಗೆ
ಉಜ್ಜೀವಿಸಿ ಹೋದೆ. 'ಅಸನ್ನೇವ' ಎಂಬಂತೆ ಅಸತ್ಕಲ್ಪನಾಗಿದ್ದ ನಾನು ಬದುಕಿ
ಹೋದೆ !' ಎಂದು.

**ಒರುವನ್ನೈ ಉಂದಿಪ್ಪೂವಿನೋಲ್ ಓಂಗುವಿತ್ತು ಆಹಂತನ್ನಾಲ್**
**ಒರುವನ್ನೈ ಶಾಪಂನೀಕ್ಕಿ ಉಂಬರ್ ಆಳ್ ಎನ್ರುವಿಟ್ಟಾನ್**
**ಪೆರುವರೈ ಮದಿಲ್‌ಹಳ್ ಶೂಟ್‌ನ್ದ ಪೇರುನಗರ್ ಅರವಣೈ ಮೇಲ್**
**ಕರುವರೈವಣ್ಣನ್ ತನ್‌ಪೇರ್ ಕರುದಿ ನಾವರ್ ಉಯ್‌ನ್ದವಾರೇ**
**॥೩॥**

(ಒರುವನ್ನೈ ಉಂದಿಪ್ಪೂಮೇಲ್ ಓಂಗುವಿತ್ತು) ಚತುರ್ಮುಖನನ್ನು ನಾಭೀ ಕಮಲದಲ್ಲಿ ಉಂಟುಮಾಡಿದವನೂ (ಒರುವನ್ನೈ) ರುದ್ರನನ್ನು (ಆಹಂ ತನ್ನಾಲ್ ಶಾಪಂನೀಕ್ಕಿ) ತನ್ನ ವಕ್ಷಃಸ್ಥಲದಲ್ಲುಂಟಾದ ಸ್ವೇದಜಲದಿಂದ ಬ್ರಹ್ಮಹತ್ಯಾ ಶಾಪದಿಂದ ಬಿಡಿಸಿ (ಉಂಬರ್ ಆಳ್ ಎನ್ರು ವಿಟ್ಟಾನ್) ನೀವು ಮೊದಲಿನಂತೆ ದೇವತೆಗಳನ್ನಾಳುವವರಾಗಿ ಎಂದು ಬಿಟ್ಟುಕೊಟ್ಟವನೂ (ಪೆರುವರೈ ಮದಿಲ್ ಹಳ್ ಶೂಟ್‌ನ್ದ) ದೊಡ್ಡ ಬೆಟ್ಟಗಳನ್ನು ಹೋಲುವ ಪ್ರಾಕಾರಗಳಿಂದ ಸುತ್ತು ವರಿಯಲ್ಪಟ್ಟ (ಪೇರುನಗರ್ ಅರವು ಅಣೈಮೇಲ್) ತಿರುಪ್ಪೇರ್ ನಗರದಲ್ಲಿ ಶೇಷಶಯನದಲ್ಲಿ (ಕರುವರೈ ವಣ್ಣನ್ ತನ್‌ಪೇರ್) ನೀಲ ಪರ್ವತವು ಒರಗಿರು ವಂತೆ ಹೋಲುತ್ತಿರುವವನೂ ಆದ ಪರಮಾತ್ಮನ ಶ್ರೀನಾಮಗಳನ್ನು (ಕರುದಿ) ಚಿಂತಿಸಿ (ನಾನ್ ಉಯ್‌ನ್ದ ಆರೇ) ನಾನು ಉಜ್ಜೀವಿಸಿದ ರೀತಿ ಆಶ್ಚರ್ಯಕರ ವಾದುದು !

ಹಿಂದಿನ ಪಾಶುರದಲ್ಲಿ ಆಪತ್ಕಾಲದಲ್ಲಿ ಲೋಕಕ್ಕೆಲ್ಲಾ ಉಪಕಾರಕನೆಂದರು. 'ಈಶ್ವರೋಽಹಂ' ಎಂದಿರುವವರಿಗೂ ಉಪಕಾರ ಮಾಡುವವನು ಎಂದು ಇಲ್ಲಿ ಹೇಳುತ್ತಾರೆ. ತನ್ನನ್ನು ಒಮ್ಮೆ ನೆನೆದರೆ ಮತ್ತಾರನ್ನೂ ನೆನೆಯದಿರುವಂತೆ ಇರುವವನೂ, ಚತುರ್ದಶಭುವನಗಳಿಗೂ ನಿರ್ವಾಹಕನಾದವನೂ ಆದ ಬ್ರಹ್ಮ ದೇವನನ್ನು ತನ್ನ ನಾಭೀಕಮಲದಲ್ಲಿ ಉಂಟುಮಾಡಿದ ಸರ್ವೇಶ್ವರನಿವನು. ರುದ್ರದೇವನಿಗೆ ಬಂದಿದ್ದ ಶಾಪವನ್ನು ಹೋಗಲಾಡಿಸಿದವನು ಇವನು. ದೇವ ಜಾತಿಗಳಿಗೆಲ್ಲಾ ನಿಯಾಮಕನಾಗಿರುವ ಹಿರಿಮೆಯಲ್ಲಿ ಎಳ್ಳಷ್ಟೂ ಕುಂದಿಲ್ಲದಂತೆ ಮೊದಲಿನಂತೆಯೇ ಮೇಲಿನ ಲೋಕಗಳನ್ನು ಆಳಿರಿ—ಎಂದು ಅವರನ್ನು ಬೀಳ್ಕೊಟ್ಟವನವನು. ತಿರುಪ್ಪೇರ್‌ನಹರಿಯು ಶ್ರೀವೈಕುಂಠ ಸಮಾನವಾದ ಹಿರಿಮೆ ಹೊಂದಿದೆಯಂತೆ. ಅಲ್ಲಿ ಶಯನಿಸಿರುವ ಭುವನಸುಂದರನ ವಾಚಕವಾದ ಶ್ರೀನಾಮಗಳನ್ನು ಹೇಳಿಕೊಂಡು ಉಜ್ಜೀವನ ಹೊಂದಿಬಿಟ್ಟೆ !

**ಊನಮುರ್ ತಲೈ ಒನ್ರುವಾದಿ ಉಲಹು ಎಲ್ಲಾಂ ತಿರಿಯುಂ ಈಶನ್**

**ಊನಮುರ್ ಶಾಪಂ ನೀಕ್ಕಾಯ್ ಎನ್ನ ಒಣ್ ಪುನಲೈ ಯೀನ್ದಾನ್**

**ತೇನ್‌ಅಮರ್ ಪೊಟಿಲ್ ಹಳ್‌ಶೂಟ್ನ್ದ ಶೆರಿವಯಲ್**
**ತೆನ್‌ತಿರುಪ್ಪೇರ್**
**ವಾನವರ್ ತಲೈವನ್‌ನಾಮಂ ವಾಟ್ತ್ತಿನಾನ್‌ಉಯ್ಯನ್ದವಾರೇ**
**॥೪॥**

(ಊನ್ ಆಮರ್‌ತಲೈಒನ್ರು) ಮಾಂಸವು ತಂಗಿದ್ದ ಬ್ರಹ್ಮಕಪಾಲವೊಂದನ್ನು (ಏಂದಿ ಉಲಹುಎಲ್ಲಾಂ ತಿರಿಯುಂ) ಕೈಯಲ್ಲಿ ಹಿಡಿದುಕೊಂಡು ಎಲ್ಲ ಲೋಕ ಗಳಲ್ಲಿಯೂ ಭಿಕ್ಷೆ ಎತ್ತಿ ತಿರಿದುಕೊಂಡಿದ್ದ (ಈಶನ್) ರುದ್ರನು(ಈನ್ ಆಮರ್ ಶಾಪಂ ನೀಕ್ಕಾಯ್ ಎನ್ನ) 'ಹೀನತೆಯನ್ನುಂಟು ಮಾಡುವ ಶಾಪವನ್ನು ಹೋಗ ಲಾಡಿಸಿ ದಯೆತೋರು' ಎಂದು ಬೇಡಲು (ಒಣ್‌ಪುನಲೈ ಈನ್ದಾನ್) ಸುಂದರ ವಾದ ಸ್ವೇದ ಜಲವನ್ನು ಹರಿಸಿ ಶಾಪವನ್ನು ಹೋಗಲಾಡಿಸಿದವನೂ, (ತೇನ್ ಅಮರ್‌ಪೊಟಿಲ್ ಹಳ್‌ಶೂಟ್ನ್ದ) ದುಂಬಿಗಳು ನೆರೆದಿರುವ ತೋಪುಗಳಿಂದ ಸುತ್ತುವರಿಯಲ್ಪಟ್ಟುದೂ (ಶೆರಿವಯಲ್) ನಿಬಿಡವಾದ ಗದ್ದೆಗಳನ್ನುಳ್ಳದೂ ಆದ (ತೆನ್‌ತಿರುಪ್ಪೇರ್) ತೆನ್‌ತಿರುಪ್ಪೇರ್ ನಗರದಲ್ಲಿ ನಿತ್ಯವಾಸಮಾಡಿರುವ (ವಾನವರ್ ತಲೈವನ್) ದೇವಾಧಿದೇವನಾದ ಸರ್ವೇಶ್ವರನ (ನಾಮಂ ನಾನ್ ವಾಟ್ತ್ತಿ ಉಯ್ನ್ದ ಆರುಪು) ಶ್ರೀನಾಮಗಳನ್ನು ನಾನು ಅನುಸಂಧಾನಮಾಡಿ ಸ್ತುತಿಸಿ ಬದುಕಿಹೋದ ರೀತಿ ಎಂಥದೋ !

ರುದ್ರನ ಶಾಪವನ್ನು ಹೋಗಲಾಡಿಸಿದುದನ್ನು ಸಪ್ರಕಾರವಾಗಿ ನಿರೂಪಿ ಸಿದ್ದಾರೆ ಇಲ್ಲಿ. ರುದ್ರನು ತನ್ನ ಕೈಗೆ ಅಂಟಿಕೊಂಡಿದ್ದ ಬ್ರಹ್ಮಕಪಾಲದಿಂದ ವಿಮೋಚನೆಯನ್ನು ಹೊಂದಲು ಪರಮಾತ್ಮನನ್ನು 'ಅವದ್ಯಾವಹವಾದುದೂ, ಹೀನತೆಯನ್ನುಂಟುಮಾಡುತ್ತಿರುವುದೂ ಆದ ಈ ಶಾಪವನ್ನು ಹೋಗಲಾಡಿಸಿ ಸಲಹಬೇಕು'—ಎಂದು ಬೇಡಲು ಸ್ವಾಮಿ ಅವನಿಗೆ ಶಾಪವಿಮೋಚನೆಯನ್ನು ಅನುಗ್ರಹಿಸಿದ. ಅಂಥ ಪರಮಾತ್ಮನ ಶ್ರೀನಾಮಗಳ ಮಹಿಮೆಯನ್ನು ಏನೆಂದು ಹೇಳಬಹುದು ! ವಿನಾಶವು ಸಂಭವಿಸದಂತೆ ರಕ್ಷಿಸುತ್ತವೆ ಆ ಶ್ರೀನಾಮಗಳು.

**ವಕ್ಕರನ್‌ವಾಯ್ ಮುನ್‌ಕೀಂಡ ಮಾಯನೇ ಎನ್ರುವಾನೋರ್**
**ಪುಕ್ಕು ಅರಣ್‌ತಂದರುಳಾಯ್ ಎನ್ನ ಪೊನ್ ಆಹತ್ತಾನೈ**
**ನಕ್ಕು ಅರಿಉರುವುಮಾಹಿ ನಖಂ ಕಿಳರ್‌ನ್ದು ಇಡನ್ದುಉಹಂದ**
**ಶಕ್ಕರಚ್ಚೆಲ್ವನ್ ತೆನ್‌ಪೇರ್‌ತಲೈವನ್ ತಾಳ್ ಅಡೈನ್ದು**
**ಉಯ್ನ್ದೇನೇ ॥೫॥**

(ಮುನ್) ಹಿಂದೊಂದು ಕಾಲದಲ್ಲಿ (ವಾನೋರ್) ದೇವತೆಗಳು (ವಕ್ಕರನ್ ವಾಯ್‌ಕೀಂಡ ಪೂಮಾಬುನೇ ಎನ್ರು) 'ದಂತವಕ್ರನ ಬಾಯನ್ನು ಸೀಳಿ ಹಾಕಿದ ಮಾಯನೇ' ಎಂದು ಸ್ತುತಿಸಿಕೊಂಡು (ಪುಕ್ಕು) ಬಂದು ಸೇರಿ (ಅರಣ್‌ತನ್ದು ಅರುಳಾಯ್ ಎನ್ನ) ನಮಗೆ ರಕ್ಷಣೆ ಕೊಟ್ಟು ಕಾಪಾಡಬೇಕು ಎಂದು ಪ್ರಾರ್ಥಿಸಲು (ಪೊನ್ ಆಹತ್ತಾನೈ) ಹಿರಣ್ಯಾಸುರನನ್ನು (ಅರಿಉರುವಂ ಆಹಿ) ನರಸಿಂಹ ರೂಪಿಯಾಗಿ (ನಕ್ಕು) ಅಟ್ಟಹಾಸದಿಂದ ನಕ್ಕು (ಕಿಳರ್‌ನ್ದು) ಬೆಳೆದ (ನಕಂ ಇಡಂದು ಉಹಂದ) ನಖಗಳಿಂದ ಸೀಳಿಹಾಕಿ ನಲಿದವನೂ (ಶಕ್ಕರಮ್ ಶೆಲ್ವನ್) ಶ್ರೀಸುದರ್ಶನದಿಂದ ಚೆಲುವಾಂತವನೂ (ತೆನ್‌ಪೇರ್ ತಲೈವನ್) ತೆನ್‌ತಿರುಪ್ಪೇರ್ ನಗರದಲ್ಲಿ ವಿರಾಜಮಾನನಾಗಿರುವವನೂ ಆದ ದೇವಾಧಿ ದೇವನ (ತಾಳ್‌ಅಡೈನ್ದು ಉಯ್‌ನ್ದೇನ್) ಶ್ರೀಪಾದಗಳನ್ನು ಆಶ್ರಯಿಸಿ ನಾನು ಉಜ್ಜೀವಿಸಿದೆನು.

ಸರ್ವೇಶ್ವರೇಶ್ವರನು ದೇವತೆಗಳಿಗೆ ಉಪಕಾರಮಾಡಿದ್ದನ್ನೂ ಒಬ್ಬ ಹಸುಳೆಗೆ ಒದಗಿ ಬಂದದ್ದನ್ನೂ ಇಲ್ಲಿ ಅನುಸಂಧಾನ ಮಾಡಿದ್ದಾರೆ. ದಂತವಕ್ರನೆಂಬ ಅಸುರನೊಬ್ಬನು ದೇವತೆಗಳನ್ನೆಲ್ಲಾ ಬಡಿದು ಹಿಂಸಿಸಿ ತಿರಿಯುತ್ತಿದ್ದನಂತೆ. ಅವನ ಬಾಯನ್ನು ಅನಾಯಾಸವಾಗಿ ಹರಿದುಹಾಕಿದ ಆಶ್ಚರ್ಯಚೇಷ್ಟಿತನು ಇವನು. ಹಿರಣ್ಯಕಶಿಪುವಿನ ಉಪಟಳದಿಂದ ನೊಂದ ದೇವತೆಗಳು, 'ನಮಗೆ ರಕ್ಷಣೆ ಈಯಬೇಕು' ಎಂದು ಪರಮಾತ್ಮನಲ್ಲಿ ಶರಣು ಹೋದರು. ಆಗ ಶ್ರೀನೃಸಿಂಹನಾಗಿ ಸ್ವಾಮಿ ವಿಜೃಂಭಿಸಿ ನಖಗಳಿಂದ ಅಸುರನನ್ನು ಸೀಳಿಹಾಕಿ ನಲಿದು ಅಟ್ಟಹಾಸಮಾಡಿದನಂತೆ. ಅವನು ಹಿಡಿದಿರುವ ಸುದರ್ಶನ ಚೆಲುವಿಗೂ ಆಗುವುದು. ಆಯುಧಕ್ಕೂ ಆಗುವುದು. ಅಂಥ ಸರ್ವಾಧಿಕನಾದ ಸರ್ವೇಶ್ವರನನ್ನು ಆಶ್ರಯಿಸಿ ನಾನು ಉಜ್ಜೀವಿಸಿ ಹೋದೆ !

**ವಿಲಂಗಲಾಲ್ ಕಡಲ್‌ಅಡೈತ್ತು ವಿಳಂಗು ಇಟ್ಟೈಪೊರುಟ್ಟು,**
**ವಿಲ್ಲಾಲ್**
**ಇಲಂಗೈ ಮಾನಹರ್‌ಕ್ಕು ಇರೈವನ್ ಇರುಪದು ಪುಯಂ**
**ತುಣಿತ್ತಾನ್**
**ನಲಂಗೊಳ್ ನಾಲ್ಮರೈವಲ್ಲಾರ್‌ಹಳ್ ಓತ್ತೊಲಿ ಏತ್ತ ಕೇಟ್ಟು**
**ಮಲಂಗು ಪಾಯ್ ವಯಲ್ ತಿರುಪ್ಪೇರ್ ಮರುವಿನಾನ್**
**ವಾಟ್‌ನ್ದವಾರೇ ॥೬॥**

(ವಿಳಂಗು ಇಟ್ಟಿಪ್ಪೊರುಟ್ಟು) ಬೆಳಗುವ ಭೂಷಣಗಳನ್ನು ತೊಡಲು ತಕ್ಕವ್ವ ಳಾದ ದೇವಿಗಾಗಿ (ವಿಲಂಗಲಾಲ್) ಬೆಟ್ಟಗಳಿಂದ (ಕಡಲ್ ಅಡೈತ್ತು) ದಕ್ಷಿಣ ಸಮುದ್ರಕ್ಕೆ ಸೇತುಬಂಧನಮಾಡಿ, ಲಂಕಯನ್ನು ಪ್ರವೇಶಿಸಿ, (ಇಲಂಗೈಮಾ ನಹರ್‌ಇರೈವನ್) ವಿಶಾಲವಾದ ಲಂಕಾಪುರಿಗೆ ಅಧೀಶ್ವರನಾದ ರಾವಣನ (ಇರುಪದುಪುಯಂ) ಇಪ್ಪತ್ತು ತೋಳುಗಳನ್ನು (ವಿಲ್ಲಾಲ್) ತನ್ನ ಧನುಸ್ಸಿ ನಿಂದ (ತುಣಿತ್ತಾನ್) ಕತ್ತರಿಸಿ ಚೆಲ್ಲಿದ ಸ್ವಾಮಿಯು ಒಲಿದು ಬಂದು ಇರು ವಂಥದೂ, (ನಲಂಕೊಳ್) ನಲ್ಮೆಗಳಿಗೆ ವಾಸಸ್ಥಾನರಾಗಿ (ನಾಲ್‌ಮರೈವಲ್ಲಾರ್ ಹಳ್) ಚತುರ್ವೇದಗಳನ್ನು ಅಧ್ಯಯನಮಾಡಿದವರಾದ ಬ್ರಾಹ್ಮಣರು (ಓತ್ತು ಒಲಿಪಿತ್ತ) ವೇದಘೋಷಗಳನ್ನು ಮಾಡಿಕೊಂಡಿರಲಾಗಿ (ಕೇಟ್ಟು) ಆ ಘೋಷ ವನ್ನು ಕೇಳಿ (ಪುಲಂಗು) ಮೀನುಗಳು (ಪಾಯ್‌ವಯಲ್) ಹೆದರಿ ಚಿಮ್ಮು ವಂತಹ ಗದ್ದೆಗಳನ್ನುಳ್ಳುದೂ ಆದ (ತಿರುಪ್ಪೇರ್) ತಿರುಪ್ಪೇರ್ ನಗರಿಯನ್ನು (ಪುರುವಿ) ಸೇರಿ (ನಾನ್‌ವಾಟ್ಟ್ನ ಆರುವಿ) ನಾನು ಬಾಳ್ವೆಯನ್ನು ಹೊಂದಿದ ಬಗೆ ಎಂಥವೋ !

ಸೀತಾದೇವಿಗಾಗಿ ಅಘಟಿತಘಟನಾಶಕ್ತಿಯನ್ನು ಸ್ವಾಮಿ ತೋರಿದುದನ್ನು ಇಲ್ಲಿ ವರ್ಣಿಸಿದ್ದಾರೆ. ನೀರಲ್ಲಿ ಮುಳುಗಿ ಹೋಗುವ ಬೆಟ್ಟಗಳಿಂದ ಅವನು ಸೇತುವೆಯನ್ನು ಕಟ್ಟಿದುದು. 'ಬ್ರಹ್ಮಾಸ್ತ್ರಕ್ಕೂ ಅಳಿಯದ ಲಂಕೆಯಲ್ಲವೋ ಇದು ?' ನಾನಿದಕ್ಕೆ ನಿರ್ವಾಹಕನಲ್ಲವೋ ?'' —ಎಂದು ಅಭಿಮಾನಿಸಿದ್ದ ರಾವಣ. ಆ ನಗರವನ್ನೆಲ್ಲಾ ವ್ಯಾಪಿಸುವಂತಿದ್ದ ಅವನ ಇಪ್ಪತ್ತುಭುಜಗಳನ್ನೂ ಸ್ವಾಮಿ ಚಿಂದಿಚಿಂದಿಯಾಗಿ ಕತ್ತರಿಸಿ ಹಾಕಿದ. ಅವನು ಇರುವ ದಿವ್ಯಕ್ಷೇತ್ರ ಇದು. ನಿರ್ದೋಷವಾದವೂ ನಾಲ್ಕು ಬಗೆಯವೂ ಆದ ವೇದಗಳನ್ನು ಅಧಿಕರಿಸಿದವರೂ ಆಚಾರ ಸಂಪನ್ನರೂ ಆದ ಬ್ರಾಹ್ಮಣರು ವೇದ ಘೋಷ ಮಾಡುತ್ತಿರುವಂತಹ ಈ ತಿರುಪ್ಪೇರ್ ನಗರಿಯನ್ನು ಸೇರಿ ನಾನು ಬಾಳಿ ಹೋದೆ ಎನ್ನುತ್ತಾರೆ ಆಳ್ವಾರ್ ಅವರು.

**ವೆಣ್ಣೆಯರ್ ತಾನ್ ಅಮುದುಶೆಯ್ಯ ವೆಹುಂಡು ಮತ್ತು**
**ಆಯ್‌ಚ್ಚಿ ಓಚ್ಚಿ**
**ಕಣ್ಣಿಯಾರ್ ಕುರುಂಕಯಿತ್ತಾಲ್ ಕಟ್ಟ ವೆಟ್ಟೆನ್ರಿರುಂದಾನ್**

**ತಿಣ್ಣಮಾಮದಿಳ್‌ಹಳ್ ಶೂಟ್‌ನ್ದ ತೆನ್‌ತಿರುಪ್ಪೇರುಳ್ ವೇಲೈ**
**ವಣ್ಣನಾರ್ ನಾಮಂ ನಾಳುಂ ವಾಯ್‌ ಮೊಟಿನ್ದು**
**ಉಯ್‌ನ್ದವಾರೇ ‖೭‖**

(ತಾನ್‌ವೆಣ್ಣೆಯ್ ಅಮುದುಶೆಯ್ಯ) ಯಶೋದೆ ವ್ರತವನ್ನನುಷ್ಠಿಸಿ ಪಡೆದು ಕೊಂಡ ಮಗನಾದ ಅವನು (ವೆಣ್ಣೆಯ್ ಅಮುದುಶೆಯ್ಯ) ಬೆಣ್ಣೆಯನ್ನು ಮಿತಿ ಇಲ್ಲದಂತೆ ಕದ್ದುತಿಂದ ಸಮಯದಲ್ಲಿ (ಆಯ್‌ಚ್ಚಿ) ಯಶೋದೆಯು (ವೆಹುಂಡು) ಕೋಪಗೊಂಡು (ಮತ್ತು ಓಚ್ಚಿ) ಮೊಸರನ್ನು ಕಡೆಯುವ ಕಡೆ ಗೋಲಿನಿಂದ ಹೊಡೆಯಲು ಹೋಗಿ (ಕಣ್ಣಿಆರ್ ಕುರುಕಯಿತ್ತಾಲ್‌ಕಟ್ಟ) ಗಂಟುಗಳಿಂದ ಕೂಡಿದ ಚಿಕ್ಕಹಗ್ಗದಿಂದ ಕಟ್ಟಿಹಾಕಲು (ವೆಟ್ಟೆನ್ರಿರುಂದಾನ್) ಒಪ್ಪಿಕೊಂಡಿದ್ದವನೂ, (ತಿಣ್ಣಂ ಮಾಮದಿಳ್‌ಹಳ್‌ಶೂಟ್‌ನ್ದ) ದೃಢವಾದ ದೊಡ್ಡಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟ (ತೆನ್‌ತಿರುಪ್ಪೇರುಳ್) ತೆನ್ ತಿರುಪ್ಪೇರ್‌ನಗರದಲ್ಲಿ ಇರುವವನೂ ಆದ (ವೇಲೈವಣ್ಣನಾರ್) ಸಾಗರವರ್ಣ ನಾದ ಪರಮಾತ್ಮನ (ನಾಮಂನಾಳುಂ ವಾಯ್‌ಮೊಟಿನ್ದು) ಶ್ರೀನಾಮಗಳನ್ನು ದಿನದಿನವೂ ಹೇಳಿ (ಉಯ್‌ನ್ದಆರುಖಿ)ನಾನು ಉಜ್ಜೀವಿಸಿದ ರೀತಿ ಎಂಥದೋ!

'ಬೆಣ್ಣೆ ವ್ಯರ್ಥವಾಗಬಾರದು. ಇದನ್ನು ಭುಜಿಸಲು ಒಂದು ಮಗು ಬೇಕು'—ಎಂದು ಯಶೋದೆ ವ್ರತವನ್ನನುಷ್ಠಿಸಿ ಪಡೆದ ಮಗ ಅವನು. ಆದರೂ ಅರಗಿಸಿಕೊಳ್ಳುವುದಕ್ಕಾಗದಂತೆ ಭುಜಿಸುವುದಕ್ಕೆ ತೊಡಗಿದರೆ ಅದಕ್ಕೆ ಒಪ್ಪುವುದಿಲ್ಲವಷ್ಟೇ ? ಅವರು ಅದಕ್ಕಾಗಿ ಮುಚ್ಚಿಟ್ಟಂತೆಲ್ಲಾ ಇವನಿಗೆ ಅದರಲ್ಲಿ ಆದರವು ಹೆಚ್ಚಾಗುವುದಷ್ಟೇ ? ತನಗೆ ಧಾರಕವಾದುದನ್ನು ಅವನು ಬಿಡನಷ್ಟೇ ? ಮೈನೋಯಿಸಿಕೊಂಡು ಅವರು ಕಡೆದು ತೆಗೆದ ಬೆಣ್ಣೆಯನ್ನು ನೆಲುವಿನಲ್ಲಿ ಮುಚ್ಚಿಟ್ಟಿದ್ದರೆ ಅದನ್ನು ಹುಡುಕಿ ಇವನು ಭುಜಿಸುವುದೇ ? ಕುಪಿತಳಾದ ಯಶೋದೆ ಗಂಟುಗಂಟಾದ ಹಗ್ಗದಿಂದ ಅವನ ಮೈಯ್ಯನ್ನು ಕಟ್ಟಲು ಅದಕ್ಕೆ ಒಪ್ಪಿಕೊಂಡು ಕಟ್ಟಿಸಿಕೊಂಡ ಅವನು. ತಪ್ಪನ್ನು ಒಪ್ಪಿಕೊಂಡು ಶಿಕ್ಷೆಗೆ ಒಳ ಪಡುವವನಂತೆ ಇದ್ದನಂತೆ. ಅವನೇ ತಿರುಪ್ಪೇರ್ ನಗರಿಯಲ್ಲಿ ಇರುವವನು ! ಸಾಗರದಂತೆ ಶ್ರಮಹರವಾದ ದಿವ್ಯರೂಪವನ್ನುಳ್ಳ ಅವನನ್ನು ಸ್ತುತಿಸಿ ನಾನು ಉಜ್ಜೀವಿಸಿದೆ !

**ಅವರ್‌ಪೊನ್ ಆರ್ ಉಲಹಂ ಏಟುಂ ಅರಿಯ ಆಯರ್‌ಪ್ಪಾಡಿ ತನ್ನುಳ್**
**ಕೊಂಬನಾರ್ ಪಿನ್ನೈಕೋಲಂ ಕೂಡುತಱ್ಕ್ ಏರು ಕೊನ್ರಾನ್**
**ಶೆವರ್‌ಪೊನ್ ಆರ್‌ಮದಿಳ್‌ಹಳ್ ಶೂಟ್‌ನ್ದ ತೆನ್ ತಿರುಪ್ಪೇರುಳ್‌ಮೇವುಂ**
**ಎಂಬಿರಾನ್ ನಾಮಂ ನಾಳುಂ ಏತ್ತಿನಾನ್ ಉಯರ್‌ನ್ದವಾರೇ ॥೮॥**

(ಅವರ್‌ಪೊನ್ ಆರ್‌ಉಲಹಂ ಏ ಟುಂ ಅರಿಯ) ಸುಂದರವಾದ ಸ್ವರ್ಣದಂತೆ ಶ್ರೇಷ್ಠವಾದ ಏಳು ಲೋಕಗಳೂ ಅರಿಯುವಂತೆ (ಆಯರ್‌ಪ್ಪಾಡಿ ತನ್ನುಳ್) ಗೊಲ್ಲರ ಹಟ್ಟಿಯಲ್ಲಿ (ಕೊಂಬು ಅನ್ನಾರ್ ಪಿನ್ನೈ) ವಂಜಿಕ್ಕೊಂಬನ್ನು ಹೋಲುವ ನಪ್ಪಿನ್ನೈದೇವಿಯ (ಕೋಲಂ ಕೂಡುದಱ್ಕ್) ದಿವ್ಯಮಂಗಳ ವಿಗ್ರಹದೊಡನೆ ಕೂಡುವುದಕ್ಕಾಗಿ (ಏರು) ಸಪ್ತವೃಷಭಗಳನ್ನು (ಕೊನ್ರಾನ್) ಕೊಂದು ಹಾಕಿದವನೂ, (ಶೆವರ್‌ಪೊನ್ ಆರ್‌ಮದಿಳ್‌ಹಳ್ ಶೂಟ್‌ನ್ದ) ಹೊಳೆಯುವ ಚಿನ್ನದಂತೆ ಸುಂದರವಾದ ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟ (ತೆನ್ ತಿರುಪ್ಪೇರುಳ್ ಮೇವುಂ) ತೆನ್‌ತಿರುಪ್ಪೇರ್ ನಗರದಲ್ಲಿ ಹೊಂದಿ ಬಾಳುವವನೂ ಆದ (ಎಂಬಿರಾನ್ ನಾಮಂ) ನಮ್ಮ ಸ್ವಾಮಿಯ ದಿವ್ಯನಾಮಗಳನ್ನು (ನಾಳುಂ ಏತ್ತಿ) ದಿನದಿನವೂ ಸಂಕೀರ್ತನಮಾಡಿ (ನಾನ್ ಉಯರ್‌ನ್ದ ಆರು ಏ) ನಾನು ಉಜ್ಜೀವಿಸಿದ ಬಗೆ ಆಶ್ಚರ್ಯಕರವಾದುದು !

ಶ್ರೀಕೃಷ್ಣನು ಮಾಡಿದ ಲೀಲಾಚೇಷ್ಟಿತಗಳನ್ನು ಅಂದು ಕಣ್ಣಾರೆಯ ಕಂಡವರ ಸುಕೃತವು ಸುಂದರವೂ ಸ್ಪೃಹಣೀಯವೂ ಆದುದೆಂದು ಕೊಂಡಾಡುತ್ತಾರೆ. ಎಲ್ಲ ಲೋಕಗಳವರೂ ಅರಿಯುವಂತೆ ಸ್ವಾಮಿ ತನ್ನ ಲೀಲೆಯನ್ನು ಅವರಿಗೆ ತೋರಿಸಿಕೊಟ್ಟು, ನಪ್ಪಿನ್ನೈದೇವಿಯನ್ನು ಹೊಂದುವುದಕ್ಕಾಗಿ ಸಪ್ತವೃಷಭಗಳನ್ನು ನಿರಸನಮಾಡಿದ, ಅಂಥಸ್ವಾಮಿ ಸರ್ವಸುಲಭನಾಗಿ ತೆನ್‌ತಿರುಪ್ಪೇರಿನಲ್ಲಿ ಸಾನ್ನಿಧ್ಯವನ್ನು ನೀಡಿದ್ದಾನೆ. ಅವನ ದಿವ್ಯನಾಮಗಳನ್ನು ಸಂಕೀರ್ತಿಸಿ ನಾನು ಹೀಗೆ ಉಜ್ಜೀವಿಸಿದೆ.

**ನಾಲ್‌ವಹೈವೇದಂ ಐನ್ದುವೇಳ್ವಿ ಆರುಅಂಗಂ ವಲ್ಲಾರ್**
**ಮೇಲ್ಶೈ ವಾನವರಿಲ್ ಮಿಕ್ಕ ವೇದಿಯರ್ ಆದಿಕಾಲಂ**
**ಶೇಲ್‌ಉಹಳ್ ವಯಲ್ ತಿರುಪ್ಪೇರ್ ಶೆಂಗಣ್ ಮಾಲೋಡುಂ**
**ವಾಟ್‌ವಾರ್**
**ಶೀಲ ಮಾ ತವತ್ತರ್ ಶಿಂದೈ ಆಳಿ ಎನ್ ಶಿಂದೈಯಾನೇ ॥೯॥**

(ನಾಲ್‌ವಹೈವೇದಂ) ನಾಲ್ಕುವೇದಗಳಲ್ಲಿಯೂ (ಆರು ಅಂಗಂ) ಆರು ವೇದಾಂಗಗಳಲ್ಲಿಯೂ (ಐನ್ದುವೇಳ್ವಿ) ಪಂಚಮಹಾಯಜ್ಞಗಳಲ್ಲಿಯೂ (ವಲ್ಲಾರ್) ಸಮರ್ಥರಾಗಿ (ಮೇಲ್ಶೈವಾನವರಿಲ್) ಮೇಲಿನ ಲೋಕದಲ್ಲಿರುವ ದೇವತೆಗಳಿಗಿಂತಲೂ (ಮಿಕ್ಕವೇದಿಯರ್) ಹೆಚ್ಚಿನ ಹಿರಿಮೆಯುಳ್ಳ ಬ್ರಾಹ್ಮಣೋತ್ತಮರು (ಆದಿಕಾಲಂ) ಅನಾದಿ ಕಾಲದಿಂದ (ಶೇಲ್‌ಉಹಳ್ ವಯಲ್ ತಿರುಪ್ಪೇರ್) ಮೀನುಗಳು ಚಿಮ್ಮಿ ನಲಿಯುವ ಗದ್ದೆಗಳುಳ್ಳ ತಿರುಪ್ಪೇರ್ ನಗರದಲ್ಲಿ (ಶೆಮ್‌ಕಣ್ ಮಾಲೋಡುಂ) ಕೆಂದಾವರೆಯಂತೆ ಸುಂದರವಾದ ನೇತ್ರಗಳನ್ನುಳ್ಳ ಸರ್ವೇಶ್ವರನೊಡನೆ (ವಾಟ್ವಾರ್) ನಿತ್ಯವಾಸ ಮಾಡುವವರಾಗಿರಲು, (ಶೀಲಂ ಮಾ ತವತ್ತರ್) ಸದ್ಗುಣಗಳನ್ನೂ ಸದಾಚಾರವನ್ನೂ ಹೊಂದಿರುವ ಬ್ರಾಹ್ಮಣರ (ಶಿಂದೈಆಳಿ) ಹೃದಯವನ್ನು ಸೂರೆಗೊಂಡು ಆಳುವವನಾದ ಸರ್ವೇಶ್ವರನು (ಎನ್ ಶಿಂದೈಯಾನ್) ನನ್ನ ಹೃದಯದಲ್ಲಿ ನಿತ್ಯವಾಸ ಮಾಡುವವನಾಗಿದ್ದಾನೆ.

ನಪ್ಪಿನ್ನೈಯಲ್ಲಿ ಆಶೆಯನ್ನು ಹೊಂದಿದ್ದ ಆ ಸ್ವಾಮಿಯು ಸಕಲವಿದ್ಯೆಗಳಿಂದ ಅಧಿಕರಾದವರಿಗೆ ಉಪಾಸ್ಯನಾಗಿದ್ದಾನೆಂದು ಇಲ್ಲಿ ವರ್ಣಿಸಿದ್ದಾರೆ. ಶೀಲಗುಣ ಪ್ರಚುರರೂ ಅತ್ಯಧಿಕವಾದ ತಪಸ್ಸನ್ನು ಆಚರಿಸಿದವರೂ, ಸಕಲ ವಿದ್ಯೆಗಳನ್ನೂ ಅಧಿಕರಿಸಿ ಬ್ರಹ್ಮಾದಿಗಳಿಗಿಂತ ಮಿಗಿಲೆನಿಸಿದವರೂ ಆದ ಬ್ರಾಹ್ಮಣಶ್ರೇಷ್ಠರ ಹೃದಯವನ್ನು ತನ್ನ ಮನೆಯನ್ನಾಗಿ ಮಾಡಿಕೊಂಡಿರುವ ಆ ಸರ್ವೇಶ್ವರನು ನನ್ನ ಹೃದಯವನ್ನೂ ಸೇರಿ ನೆಲಸಿದನು ಎಂದು ಆಳ್ವಾರ್ ಅನುಭವಿಸುತ್ತಾರೆ.

**ವಂಡರೈ ಪೊಟಿಲ್ ತಿರುಪ್ಪೇರ್ ವರಿ ಅರವಣೈಯಿಲ್, ಪಳ್ಳಿ**
**ಕೊಂಡುರೈಹಿನ್ರ ಮಾಲೈ ಕೊಡಿಮದಿಳ್ ಮಾಡಮಂಗೈ**

**ತಿಣ್ ತಿರಲ್ ತೋಳ್ ಕಲಿಯನ್ ಶೆವ್ ಶೊಲಾಲ್**
**ಮೊಟ್ಟಿನ್ದಮಾಲೈ**
**ಕೊಂಡಿವೈ ಪಾಡಿಯಾಡ ಕೂಡುವರ್ ನೀಳ್ ವಿಶುಂಬೇ ॥೧೧॥**

ವಂಡರೈ ಪೊಟ್ಟಿಲ್) ದುಂಬಿಗಳು ಮೊರೆಯುತ್ತಿರುವಂತಹ ತೋಪುಗಳನ್ನುಳ್ಳ (ತಿರುಪ್ಪೇರ್) ತಿರುಪ್ಪೇರ್ ನಗರದಲ್ಲಿ (ವರಿ ಅರವು ಅಣೈಯಿಲ್) ಗೆರೆಗಳನ್ನುಳ್ಳ ಆದಿಶೇಷನೆಂಬುವ ಹಾಸುಗೆಯಲ್ಲಿ (ಪಳ್ಳಿಕೊಂಡು ಉರೈಹಿನ್ರಮಾಲೈ) ಶಯನಿಸಿ ಕೊಂಡು ನಿತ್ಯವಾಸ ಮಾಡುತ್ತಿರುವ ಸರ್ವೇಶ್ವರನನ್ನು ಕುರಿತು (ಕೊಡಿಮದಿಳ್ ಮಾಡಂ ಮಂಗೈ) ಧ್ವಜಗಳನ್ನುಳ್ಳ ಪ್ರಾಕಾರಗಳನ್ನೂ ಮಾಳಿಗೆಮನೆಗಳನ್ನೂ ಹೊಂದಿರುವ ತಿರುಮಂಗೈಯಲ್ಲಿ ಅವತರಿಸಿದವರಾಗಿ (ತಿಣ್ ತಿರಲ್ ತೋಳ್ ಕಲಿಯನ್) ಅಧಿಕವಾದ ಬಲವನ್ನುಳ್ಳ ತೋಳುಗಳನ್ನುಳ್ಳ ಆಳ್ವಾರವರು (ಶೆವ್ ಶೊಲಾಲ್ ಮೊಟ್ಟಿನ್ದ) ಸುಂದರವಾದ ಮಾತುಗಳಿಂದ ಹಾಡಿದ (ಮಾಲೈ ಇವೈ) ಈ ನುಡಿಮಾಲೆಯನ್ನು (ಕೊಂಡು ಪಾಡಿ ಆಡ) ಅಧಿಕರಿಸಿ ಹಾಡುವವರೂ ಆಡುವವರೂ (ನೀಳ್ ವಿಶುಂಬು ಕೂಡುವರ್) ಪರಮಪದವನ್ನು ಹೋಗಿ ಸೇರುವರು.

ತಿರುಪ್ಪೇರ್‌ನಗರದ ಸುತ್ತಲೂ ಇರುವ ತೋಪುಗಳಲ್ಲಿ ದುಂಬಿಗಳು ಮಧುಪಾನಮತ್ತರಾಗಿ ಆನಂದದಿಂದ ಝೇಂಕಾರ ಮಾಡುತ್ತಿರುತ್ತವೆಯಂತೆ ನಿತ್ಯ ಸೂರಿಗಳ ಹಾಗೆ. ಅಲ್ಲಿ ಆದಿಶೇಷನ ಮೇಲೆ ಶಯನಿಸಿರುವ ಲೋಕನಾಥನನ್ನು ಆಳ್ವಾರ್ ಅವರು ಸುಂದರವಾದ ಪದಸಂದರ್ಭಗಳಿಂದ ಸುತ್ತಿಸಿದ್ದಾರೆ. ಅಧಿಕಾರವುಳ್ಳವರು ಮಾತ್ರ ಅಧಿಕರಿಸಬಹುದಾದ ವೇದಾರ್ಥಗಳನ್ನು ಸರ್ವಾಧಿಕಾರವಾದ ಭಾಷೆಯಲ್ಲಿ ಅನುಗ್ರಹಿಸಿದ್ದಾರೆ. ಇದನ್ನು ಹಾಡುವುದು, ಆಡುವುದೇ ಒಂದು ದಿವ್ಯಾನುಭವ. ಅದಕ್ಕೂ ಮಿಗಿಲಾಗಿ ಅಂಥವರು ಪರಮಪದವನ್ನು ಸೇರಿ ಭಗವಂತನ ನಿತ್ಯಾನುಭವವನ್ನೂ ಹೊಂದುತ್ತಾರೆ.

ಐದನೆಯ ಪತ್ತು—ಹತ್ತನೆಯ ತಿರುವೊಳಿ

# 'ತೀತರು'

## ಪ್ರವೇಶ

ತಮ್ಮ ಮನಸ್ಸು ಬಯಸಿದ ದಿವ್ಯಕ್ಷೇತ್ರಗಳಲ್ಲಿ ನೆಲಸಿರುವ ಪರಮಾತ್ಮನನ್ನು ಅನನ್ಯಭಾವದಿಂದ ಆಳ್ವಾರ್ ಅವರು ಸುತ್ತಿಸುತ್ತಾರೆ. ಸರ್ವಾಂತರಾತ್ಮನೂ, ಸರ್ವವಿಧವಾದ ಆಪತ್ತುಗಳನ್ನೂ ಹೋಗಲಾಡಿಸಿ ಉಪಕರಿಸುವವನೂ, ಆಶ್ರಿತರಿಗೆ ಸಂಸಾರದಿಂದ ಮೋಕ್ಷವನ್ನು ಕೊಡುವ ಸ್ವಭಾವದವನೂ ಆದ ಸರ್ವೇಶ್ವರನು ತಿರುನಂದಿಪುರವಿಣ್ಣಹರದಲ್ಲಿ ಸನ್ನಿಹಿತನಾಗಿದ್ದಾನೆ. ಅಲ್ಲಿ ಹೋಗಿ ಅವನನ್ನು ಅನುಭವಿಸೋಣ ಎಂದು ತಮ್ಮ ಮನಸ್ಸಿಗೆ ಇಲ್ಲಿ ತಿಳಿಯ ಹೇಳುತ್ತಾರೆ. ಇತರ ವಿಷಯಗಳಲ್ಲಿ ಪ್ರವಣವಾಗಿ ಹೋದ ಮನಸ್ಸು ಭಗವಂತನು ಒಲಿದು ನೆಲಸಿರುವ ದಿವ್ಯಕ್ಷೇತ್ರಗಳನ್ನು ಅನುಸಂಧಾನ ಮಾಡುವುದಾದರೆ ಅದು ಇವನ ಉಜ್ಜೀವನಕ್ಕೆ ಸಾಧಕವಾಗುವುದಷ್ಟೇ ? ಆಳ್ವಾರ್ ಅವರು ತಮ್ಮ ಮನಸ್ಸಿಗೆ ಹೇಳುವ ಉಪದೇಶ ಲೋಕದ ಜನರೂ ಹಾಗೆಯೇ ವರ್ತಿಸುವಂತಾಗಲಿ ಎಂಬ ಉದ್ದೇಶದಿಂದ ಬಂದುದಾಗಿದೆ.

**ತೀದುಅರು ನಿಲತ್ತೊಡು ಎರಿ ಕಾಲಿನೊಡು**
**ನೀರ್ ಕೆಟುನಿಶುಂಬುಂ ಅನ್ನೆಯೊನಾಯ್**
**ಮಾಶು ಅರು ಮನತ್ತಿನೊಡು ಉರಕ್ಕನೊಡು**
**ಇರಕ್ಕೈ ಅನ್ನೆಯೊನಾಯ ಪೆರುಮಾನ್**
**ತಾಯ್ ಶೆರ ಉಳ್ಳೆನ್ದು ತಯಿರುಂಡು**
**ಕುಡಮಾಡು ತಡವ್ ಮಾರ್ವರ್ ತಪ್ಪೈಶೇರ್**
**ನಾತನ್ ಉರೈಕ್ಕಿನ್ರ ನಹರ್**
**ನಂದಿಪುರವಿಣ್ಣಹರಂ ನಣ್ಣು ಮನನೇ** ॥೧॥

(ತೀದು ಅರುನಿಲತ್ತೊಡು) ದೋಷರಹಿತವಾದ ಭೂಮಿಯೂ (ಎರಿ) ಅಗ್ನಿಯೂ (ಕಾಲಿನೊಡು) ವಾಯುವೂ (ನೀರ್) ಜಲವೂ (ಕೆಟುವಿಶುಂಬುಂ ಅವ್ವೈಆಯ್) ವಿಸ್ತಾರವಾದ ಆಕಾಶವೂ ಎಂಬುವ ಪಂಚಭೂತಗಳಿಗೂ ಅಂತರಾತ್ಮನಾಗಿರ) ವವನೂ, (ವಾಶು ಅರುಮನತ್ತಿನೊಡು) ದೋಷವಿಲ್ಲದ ಮನಸ್ಸೂ, (ಉರಕ್ಕ ಮೊಡು) ನಿದ್ರೆಯೂ (ಇರಕ್ಕೈ ಅವ್ವೈಆಯು) ಮರಣವೂ ಎಂಬುವ ಇವುಗಳಿಗೆ ನಿರ್ವಾಹಕನಾದವನೂ. (ಪೆರುಮಾನ್) ಹಿರಿಮೆಯನ್ನುಳ್ಳವನೂ, (ತಾಯ್ ತಾಯಿಯಾದ ಯಶೋದೆಯೂ (ಶೆರ) ಹಗ್ಗವನ್ನೆತ್ತಿಕೊಳ್ಳಲು (ಉಳೈನ್ದು) ಅದಕ್ಕೆ ನಡುಗಿ ಇರುತ್ತಿದ್ದು, ಮತ್ತೆ ಸಮಯವನ್ನು ನೋಡಿ (ತಯಿರ್ ಉಂಡು) ಮೊಸರನ್ನು ಕದ್ದು ಭುಜಿಸಿ (ಕುಡಂ ಆಡು) ಕುಂಭನರ್ತನವನ್ನಾಡಿದವನೂ (ತಡಂ ಮಾರ್ವರ್) ವಿಶಾಲವಾದ ವಕ್ಷಃಸ್ಥಲವನ್ನುಳ್ಳವನೂ, (ತ ಹೈ ಶೇರ್ ನಾದನ್) ಕರುಣಾಪರಿಪೂರ್ಣನಾದವನೂ ಆದ ಸ್ವಾಮಿಯು (ಉರೈಹಿನ್ರ ನಹರ್) ನಿತ್ಯವಾಸ ಮಾಡುತ್ತಿರುವ ದಿವ್ಯನಗರವಾದ (ನಂದಿಪುರ ವಿಣ್ಣಹರಂ ಮನಮೇನಣ್ಣು) ನಂದಿಪುರ ವಿಣ್ಣಹರವನ್ನು, ಎಲೈಮನಸ್ಸೇ, ಹೋಗಿ ಸೇರುವವನಾಗು.

ಚೇತನರಿಗೆ ಭೋಗಮೋಕ್ಷಗಳನ್ನು ಅನುಗ್ರಹಿಸುವವನಾಗಿದ್ದಾನೆ ಈ ಸರ್ವೇಶ್ವರ. ದೋಷ ದೂರವಾದ ಪೃಥಿವ್ಯಾದಿಭೂತಪಂಚಕಗಳಿಗೆ ಅಂತರಾತ್ಮ ನಾಗಿದ್ದಾನೆ. ನಿರ್ದೋಷವಾದ ಮನಸ್ಸಿನೊಡನೆ ಸ್ವಪ್ನ, ಸುಷುಪ್ತಿ ಮತ್ತು ಮರಣ ಎಂದು ಹೇಳಲ್ಪಡುವ ಇವುಗಳಿಗೆ ನಿರ್ವಾಹಕನಾಗಿದ್ದಾನೆ. ಅಂತರಾತ್ಮ ನಾಗಿದ್ದು ರಕ್ಷಕನೂ ಆಗಿದ್ದಾನೆ—ಎಲ್ಲರ ಕಣ್ಣುಗಳನ್ನೂ ಚಿತ್ತವನ್ನೂ ಅಪಹರಿ ಸುವಂತೆ ಬಂದು ಅವತರಿಸಿ ದಿವ್ಯಲೀಲಾಚೇಷ್ಟಿತಗಳನ್ನು ನಡೆಸಿದ ಅವನು, ಯಶೋದೆ ಹಗ್ಗವನ್ನೆತ್ತಿಕೊಂಡಾಗ ಹೆದರಿದಂತೆ ನಟಿಸಿದ. ಎಲ್ಲವನ್ನೂ ಮಾಡಿದರೂ ಅವನು ಧಾರಕವನ್ನು ಬಿಡಲಾರನಷ್ಟೇ ? ಸ್ವಾನುಭವದಿಂದ ತೃಪ್ತನಾಗಿರಬೇಕಾಗಿದ್ದ ಅವನು ಅನುಕೂಲರ ಸ್ಪರ್ಶವಿದ್ದ ಬೆಣ್ಣೆಯನ್ನು ಭುಜಿಸುವುದರಿಂದ ಹೃಷ್ಟನಾದನು. ಆ ಹರ್ಷವು ಉಕ್ಕಿ ಹರಿಯುವಂತೆ ಕುಂಭನರ್ತನವನ್ನಾಡಿ ಎಲ್ಲರಿಗೂ ತೋರಿಸಿದನು. 'ತ್ರೈಲೋಕ್ಯಮಪಿ ನಾಥೇನ ಯೇನ ಸ್ಯಾನ್ನಾಥವತ್ತರಂ' ಎಂದಂತೆ ಸೊಗಯಿಸಿದ ಅವನು ಅವತಾರಗಳೋ ಪಾದಿಯಲ್ಲಿ ಆ ಕಾಲಕ್ಕೆ ಮಾತ್ರವಲ್ಲದೆ ನಿತ್ಯವಾಸ ಮಾಡುತ್ತಾ ಎಲ್ಲ ಕಾಲ ದಲ್ಲಿಯೂ ಎಲ್ಲರಿಗೂ ಲಭ್ಯವಾಗಿದ್ದಾನೆ ಈ ದಿವ್ಯಕ್ಷೇತ್ರದಲ್ಲಿ.

ಉಯ್ಯ್ಯುವತ್ ವಹ್ಯೆ ಉಂಡು ಶೊನ ಶೆಯ್ಯ್ಯಿಲ್
ಉಲಹೇಟುಂ ಒಟಿಯಾಮ್ಯೆ ಮುನನಾಳ್
ಮೆಯ್ಯ್ಯಿನ್ ಅಳವೇ ಅಮುದು ಶೆಯ್ಯ್ಯವಲ
ಐಯನ್ ಅವನ್ ಮೇವು ನಹರ್ ತಾನ್
ಮ್ಯೆಯ ವರಿವಂಡು ಮದುಉಂಡು ಕಿಳ್ಯೆಯೊಡು
ಮಲರ್ ಕಿಣ್ಡಿ ಅದನ್ ಮೇಲ್
ನೈವಳಂ ನವಿತ್ತ್ರು ಪ್ಪೊಟಿಲ್
ನಂದಿಪುರವಿಣ್ಣಹರಂ ನಣ್ಣು ಮನಮೇ ॥೨॥

(ಮನಮೇ) ಮನಸ್ಸೇ, (ಶೊನ ಶೆಯ್ಯ್ಯಿಲ್) ನಾನು ಹೇಳಿದುದನ್ನು ಮಾಡಿದರೆ (ಉಯ್ಯ್ಯುವತ್‌ವಹ್ಯೆ ಉಂಡು) ಉಜ್ಜೀವಿಸುವುದಕ್ಕೆ ಉಪಾಯವಿದೆ. ಹಾಗಾದರೆ ಹೇಳುವುದೇನೆಂದರೆ ಹೇಳುತ್ತೇನೆ, ಕೇಳು. (ಮುನನಾಳ್) ಹಿಂದೊಂದು ಕಾಲದಲ್ಲಿ (ಉಲಹು ಏಟುಂ ಒಟಿಯಾಮ್ಯೆ) ಸಪ್ತಲೋಕಗಳಲ್ಲಿ ಒಂದೂ ಉಳಿಯದಂತೆ (ಮೆಯ್ಯ್ಯಿನ್ ಅಳವೇ) ಆಲೋಕಗಳೆಲ್ಲ ತನ್ನ ಸಣ್ಣ ದೇಹದಲ್ಲಿ ಸೇರಿರುವಂತೆ (ಅಮುದು ಶೆಯ್ಯ್ಯವಲ) ಭುಜಿಸುವುದರಲ್ಲಿ ಸಮರ್ಥನಾಗಿದ್ದ (ಐಯನ್ ಅವನ್ ತಾನ್) ಆ ಮಹಾಮಹಿಮನಾದ ಪರಮಾತ್ಮನು (ಮೇವುಂ ನಹರ್) ಹೊಂದಿ ಬಾಳುತ್ತಿರುವ ದಿವ್ಯದೇಶವಾದುದೂ, (ಮ್ಯೆಯ ವರಿ ವಂಡು) ಕೃಷ್ಣವರ್ಣದ ಸುಂದರವಾದ ದುಂಬಿಗಳು (ಕಿಳ್ಯೆಯೊಡು) ತಮ್ಮ ಬಂಧುವರ್ಗಗಳ ಜೊತೆಗೆ (ಮದು ಉಂಡು) ಮಧುಪಾನಮಾಡಿ (ಮಲರ್ ಕಿಂಡಿ) ಹೂವುಗಳೊಳಗೆ ಹೊಕ್ಕು (ಅದನ್ ಪಿರಹು) ಅದಕ್ಕೂ ಮೇಲೆ (ನೈವಳಂ ನವಿತ್ತು) ರಾಗವಿಶೇಷಗಳನ್ನು ಹಾಡುತ್ತಿರುವಂತಹ (ಪ್ಪೊಟಿಲ್) ತೋಟಗಳನ್ನು ಹೊಂದಿರುವುದೂ ಆದ (ನಂದಿಪುರ ವಿಣ್ಣಹರಂ ನಣ್ಣು) ನಂದಿಪುರ ವಿಣ್ಣಹರಂ ಕ್ಷೇತ್ರವನ್ನು ಹೋಗಿ ಸೇರು.

'ಅವನ ನಗರವನ್ನು ಸೇರಿದ ಮಾತ್ರಕ್ಕೆ ಉಜ್ಜೀವಿಸುವುದಕ್ಕಾಗುವುದೋ? ಎಂದರೆ ಚರಮಶ್ಲೋಕದಲ್ಲಿ ವಿಧಿಸಿದಂತೆ ಮಾಡಿದರೆ ಅವನು ಉಜ್ಜೀವನಗೊಳಿಸುತ್ತಾನೆ. ಅವನು ಅದಕ್ಕೆ ಶಕ್ತನಾಗಿದ್ದಾನೆ. ವಿಶ್ವಸನೀಯನೂ ಆಗಿದ್ದಾನೆ. ಪ್ರಲಯ ಕಾಲದಲ್ಲಿ ಸಪ್ತಲೋಕಗಳನ್ನೆಲ್ಲಾ ಸಮಗ್ರವಾಗಿ ತನ್ನ

ಹೊಟ್ಟೆಯೊಳಗಿಟ್ಟುಕೊಂಡು ರಕ್ಷಿಸಿದ ಮಹೋದಾರನಲ್ಲವೇ ಅವನು ? ನಿರುಪಾಧಿಕನಾದ ಪಿತಾ ಅವನು. ಆ ಕ್ಷೇತ್ರದಲ್ಲಿ ಬಂಡುಗಳು ಕಂಠಪೂರ್ತಿಯಾಗಿ ಮಧುಪಾನಮಾಡಿ ಅಲ್ಲಿಂದ ಚಲಿಸಲಾರದವಾಗಿ ಅಲ್ಲಿಯೇ ಇದ್ದು ಹೂಗಳೊಳಗೆ ಹೊಕ್ಕು 'ನೈವಳಂ' ಎನ್ನುವ ರಾಗದಲ್ಲಿ ಹಾಡನ್ನು ಹಾಡುತ್ತಿರುತ್ತವೆ– ಭಗವದನುಭವದಲ್ಲಿ ತಮ್ಮನ್ನೇ ಮರೆತ ಸೂರಿಗಳಂತೆ.

**ಉಂಬರ್ ಉಲಹು ಏಟುಮ್ ಕಡಲೇಟುಮ್**
**ಮಲೈಯೇಟುಂ ಒಟಿಯಾವ್ಮೈ ಮುನನಾಳ್**
**ತವ್ ಪೊನ್‌ವಯಿರು ಆರಳವುವ್ ಉಂಡು**
**ಅವ್ವೈ ಉಮಿಟ್‌ನ್ದ ತಡ ಮಾರ್‌ವರ್ ತಹೈಶೇರ್**
**ವಂಬು ಮಲರ್‌ಹಿನ್ರ ಪೊಟಿಲ್ ಪೈಂಪೊನ್**
**ವರು ದುಂಬಿ ಮಣಿ ಕಂಗುಲ್ ವಯಲ್‌ಶೂಟ್**
**ನಂಬನ್ ಉರೈಹಿನ್ರ ನಹರ್**
**ನಂದಿಪುರ ವಿಣ್ಣಹರಂ ನಣ್ಣು ಮನನೇ** ॥ ೨ ॥

(ಮುನನಾಳ್) ಹಿಂದೊಂದು ಕಾಲದಲ್ಲಿ (ಉಂಬರ್ ಉಲಹುಏಟುಮ್) ಮೇಲಿನ ಸಪ್ತಲೋಕಗಳನ್ನೂ (ಕಡಲ್‌ಏಟುಮ್) ಸಪ್ತಸಾಗರಗಳನ್ನು (ಮಲೈ ಏಟುಮ್) ಸಪ್ತಕುಲಪರ್ವತಗಳನ್ನು (ಒಟಿಯಾವ್ಮೈ) ಒಂದನ್ನೂ ಬಿಡದಂತೆ (ತವಚ್ ಪೊನ್‌ವಯಿರು ಆರಳವುವ್) ತನ್ನ ಹೊಟ್ಟೆಯು ತುಂಬುವಂತೆ (ಉಂಡು) ಭುಜಿಸಿ (ಅವ್ವೈ) ಆ ಲೋಕಗಳನ್ನು (ಉಮಿಟ್‌ನ್ದ) ಸೃಷ್ಟಿಕಾಲದಲ್ಲಿ ಹೊರಹಾಕಿದವನೂ, (ತಡಮಾರ್‌ವರ್) ವಿಶಾಲವಾದ ವಕ್ಷಃಸ್ಥಲವನ್ನುಳ್ಳವನೂ, (ತಹೈಶೇರ್) ಹಿರಿಮೆ ಹೊಂದಿದನೂ, (ನಮ್ಬನ್) ವಿಶ್ವಸನೀಯನೂ (ಉರೈಹಿನ್ರನಹರ್) ಆದವನು ನಿತ್ಯವಾಸಮಾಡುತ್ತಿರುವಂಥದೂ, (ವಂಬು ಮಲರ್‌ಹಿನ್ರ ಪೊಟಿಲ್) ಹೊಸಹೊಸದಾಗಿ ಅರಳುತ್ತಿರುವ ಹೂಗಳನ್ನುಳ್ಳ ತೋಟಗಳಲ್ಲಿ (ಪೈಪೊನ್‌ವರು ತುಂಬಿ) ಪುಟಕ್ಕಿಟ್ಟ ಚಿನ್ನದ ಬಣ್ಣವನ್ನು ಹೊಂದಿರುವುವೂ ತಿರಿಯುತ್ತಿರುವುವೂ ಆದ ದುಂಬಿಗಳಿಂದ (ಮಣಿ) ಚೆಲುವಾದುದೂ (ಕಂಗುಲ್ ವಯಲ್‌ಶೂಟ್) ಕತ್ತಲಿಸುತ್ತಿರುವ ಗದ್ದೆಗಳಿಂದ ಸುತ್ತುವರಿಯಲ್ಪಟ್ಟುದೂ ಆದ (ನಂದಿಪುರ ವಿಣ್ಣಹರಂ ಮನಮೇ ನಣ್ಣು) ನಂದಿಪುರ ವಿಣ್ಣಹರವನ್ನು, ಎಲೈ ಮನಸ್ಸೇ, ಹೋಗಿ ಸೇರು.

ಜ್ಞಾನಶಕ್ತಿಸಂಪನ್ನನೂ ಪರಮಬಂಧುವೂ ಆದವನು ಆ ಸರ್ವೇಶ್ವರ. ಅವನು ಅತ್ಯಂತ ವಿಶ್ವಸನೀಯನೂ ಆಗಿದ್ದಾನೆ. ಪ್ರಲಯಕ್ಕೆ ಸಿಕ್ಕದಂತೆ ಲೋಕಗಳೆಲ್ಲವನ್ನೂ ತನ್ನ ಚೆಲುವಾದ ಹೊಟ್ಟೆಯೊಳಗಿಟ್ಟುಕೊಂಡು ಪುಷ್ಕಲವಾದ ಆನಂದವನ್ನು ಹೊಂದಿದವನು ಅವನು. ಅವನು ನಿತ್ಯವಾಸಮಾಡುತ್ತಿರುವ ನಂದಿಪುರ ವಿಣ್ಣಹರವಂತೂ ಮನೋಹರವಾದುದು. ನೀಲಮಣಿಗಳಂತೆ ಸಂಚರಿಸುವ ದುಂಬಿಗಳಿಂದಲೂ ಕತ್ತಲೆಯನ್ನು ತವ್ಮ್ಮ ದಟ್ಟವಾದ ಪಯಿರಿನಿಂದ ಹರಡುತ್ತಿರುವಂತೆ ಇರುವ ಗದ್ದೆಗಳಿಂದಲೂ ಆ ಕ್ಷೇತ್ರದ ಸೌಂದರ್ಯ ಮಿಗಿಲೆನಿಸಿದೆ. ಮುಮುಕ್ಷುಗಳು ನಂಬುವುದಕ್ಕೆ ತಕ್ಕವನಾಗಿದ್ದಾನೆ ಆ ಪರಮ ಕರುಣಾಕರ.

**ಪಿರೈಯಿನ್ ಒಳಿಎಯಿರು ಇಲಹ ಮುರುಹಿ**
**ಎದಿರ್‌ಪೊರುದುಮವ್‌ ಎನ ವಂದ ಅಶುರರ್**
**ಇರೈಹಳವೈ ನೆರುನೆರು ಎನ ವೆರಿಯ ಅವರ್**
**ವಯಿರು ಅಟಲ ನಿನ್ರ ಪೆರುಮಾನ್**
**ಶಿರೈಕೊಳ್ ಮಯಿಲ್ ಕುಯಿಲ್ ಪಯಿಲ**
**ಮಲರ್‌ಹಳ್ ಉಹ ಅಳಿ ಮುರಲ ಅಡಿಕೊಳ್‌ನೆಡುಮಾ**
**ನರೈ ಶೆಯ್‌ ಪೊಟಿಲ್ ಮುಟ್ಟೈ ತವಟುವವ್**
**ನಂದಿಪುರ ವಿಣ್ಣಹರಂ ನಣ್ಣು ಮನನೇ** ॥೪॥

(ಪಿರೈಯಿನ್ ಒಳಿ ಎಯಿರು) ಬಾಲಚಂದ್ರನನ್ನು ಹೋಲುವಂತಹ ಕಾಂತಿಯುಳ್ಳ ಕೋರೆಹಲ್ಲುಗಳು (ಇಲಹ) ಪ್ರಕಾಶಿಸುತ್ತಿರಲು (ಮುರುಹಿ) ಮೇಲೆ ಆಕ್ರಮಣನಡೆಸಿ (ಎದಿರುಪೊರುದುಮವ್‌ಎನ ವಂದ) ಎದುರಾಗಿ ಹೊರಾಡುವೆವು ಎಂದು ಬಂದ (ಅಶುರರ್ ಇರೈಹಳ್ ಅವೈ) ಅಸುರರ ಶರೀರದ ಸಂಧಿಬಂಧಗಳು (ನೆರು ನೆರು ಎನ) ನರ ನರವೆಂದು ಮುರಿದು ಬೀಳಲು (ವೆರಿಯ ಅವರ್) ಬರಿಗೈಯ್ಯವರಾದ ಆ ಅಸುರರುಗಳ (ವಯಿರುಅಟಲ ನಿನ್ರ)ಹೊಟ್ಟೆ ಉರಿಯುವಂತೆ ಜಯವನ್ನು ಹೊಂದಿ ನಿಂತ (ಪೆರುಮಾನ್) ಸರ್ವೇಶ್ವರನು ಇರುತ್ತಿರುವಂಥದೂ, (ಶಿರೈಕೊಳ್) ಗರಿಗಳನ್ನುಳ್ಳ (ಮಯಿಲ್ ಕುಯಿಲ್) ನವಿಲುಗಳೂ ಕೋಗಿಲೆಗಳೂ (ಪಯಿಲ) ಹಿಂಡು ಹಿಂಡಾಗಿ ಬಾಳುತ್ತಿರುವಂಥವೂ,

(ಮಲರ್‌ಹಳ್‌ಉಹ) ಹೂಗಳು ಎಲ್ಲೆಲ್ಲಿಯೂ ಉದುರಿರುವಂಥವೂ, (ಅಳಿ ಮುರಲ) ದುಂಬಿಗಳು ಝೇಂಕರಿಸುತ್ತಿರುವಂಥವೂ, (ಅಡಿಕೊಳ್) ಕೆಳಗೆ ಬೇರೂರಿ (ನೆಡುಮಾ ನಕೈಶೆಯ್) ಮೇಲೆ ಉನ್ನತವಾಗಿರುವ ಮಾಮರಗಳು ಪರಿಮಳಿಸುತ್ತಿರುವಂಥವೂ ಆದ (ಪೊಟ್ಟಿಲ್) ತೋಪುಗಳಲ್ಲಿ (ಮುಟ್ಟಿತವ ಟಿುಮ್) ಮೇಘಗಳು ಸಂಚರಿಸುತ್ತಿರುವಂಥದೂ ಆದ (ನಂದಿಪುರವಿಣ್ಣಹರಂ ಮನವೇ ನಣ್ಣು) ನಂದಿಪುರವಿಣ್ಣಹರವನ್ನು, ಎಲೈಮನಸ್ಸೇ, ಹೋಗಿ ಸೇರು.

ಪರಮಾತ್ಮನು ಪ್ರಬಲರಾದ ಅಸುರರನ್ನು ಹೇಗೆ ವಿಧ್ವಂಸಗೊಳಿಸಿದ ನೆಂಬುದನ್ನು ಇಲ್ಲಿ ವರ್ಣಿಸಿದೆ. ಯಾವ ಅಸುರರು ಕಾದುವುದಕ್ಕೆ ಅಭಿಮುಖ್ಯ ದಿಂದ ಎದುರಾದರೋ ಅವರ ದೇಹದ ಸಂಧಿಬಂಧಗಳೆಲ್ಲಾ 'ನರನರ' ಎಂದು ಮುರಿದು ಹೋಗುವಂತೆ ಮುಷ್ಟಿಪ್ರಹಾರವನ್ನು ಸ್ವಾಮಿ ಮಾಡಿದನೆಂಬ ಭಾವ. ಅವರ ಕೈಯ್ಯಲ್ಲಿದ್ದ ಚಾಪಶರಗಳು ಜಾರಿಬಿದ್ದವಂತೆ—'ಚಚಾಲ ಚಾಪಂ ಚ ಮುಮೋಚ' ಎಂದು ಹೇಳಿದಂತೆ. ಆ ಕ್ಷೇತ್ರದಲ್ಲಿ ಅಂಥ ಸ್ವಾಮಿ ನಿತ್ಯವಾಸ ಮಾಡಿದ್ದಾನೆ. ಅಲ್ಲಿರುವ ಸಾಂದ್ರವಾದವೂ ಉನ್ನತವಾದವೂ ಆದ ಮಾಮರ ಗಳು ಮೇಘಮಂಡಲವನ್ನೂ ಮುಟ್ಟುತ್ತಿರುತ್ತವೆಯಂತೆ.

**ಮೂಳ ಎರಿ ಶಿಂದಿ ಮುನಿವು ಎಯ್‌ದಿ**
**ಅಮರ್‌ಶೆಯ್‌ದುಂ ಎನ ವಂದ ಅಶುರರ್**
**ಶೋಳುಂ ಅವರ್‌ತಾಳುಂ ಮುಡಿಯೊಡು**
**ಪೊಡಿಯಾಹ ನೊಡಿಅಮ್ ಅಳವು ಎಯ್‌ದಾನ್**
**ವಾಳುಂ ವರಿವಿಲ್ಲುಂ ವಳ್ಳೈ ಆಟಿ**
**ಕದೈ ಶಂಗಂ ಇವೈ ಅಮ್‌ಕೈ ಉಡೈಯಾನ್**
**ನಾಳುಂ ಉರೈಹಿಸ್ರ ನಹರ್**
**ನಂದಿಪುರ ವಿಣ್ಣಹರಂ ನಣ್ಣು ಮನನೇ ॥೫॥**

(ಮೂಳ ಉರಿಶಿಂದಿ) ಹೊಗೆಯು ಏಳುವಂತೆ ಬೆಂಕಿಯನ್ನು ಸುರಿದು (ಮುನಿವು ಎಯ್‌ದಿ) ಕೋಪಗೊಂಡು (ಅಮರ್ ಶೆಯ್‌ದುಂ ಎನವಂದ ಅಶುರರ್ ಅವರ್) 'ಯುದ್ಧಮಾಡೋಣ' ಎಂದು ಬಂದ ಅಸುರರುಗಳ (ತೋಳುಂ ತಾಳುಂ ಮುಡಿಯೊಡು) ತೋಳುಗಳನ್ನೂ ಕಾಲುಗಳನ್ನೂ ಮತ್ತು ತಲೆಗಳನ್ನೂ

(ಪೊಡಿಆಹ) ನುಚ್ಚುನೂರಾಗುವಂತೆ (ನೊಡಿ ಅಮ್ ಅಳವು) ಒಂದು ಕ್ಷಣ ಕಾಲದಲ್ಲಿ (ಎಯ್‌ದಾನ್) ಶರಪ್ರಯೋಗ ಮಾಡಿದವನೂ (ವಾಳುಂ ವರಿವಿಲ್ಲುಂ) ನಂದಕವೆಂಬ ಕತ್ತಿಯನ್ನೂ ಸುಂದರವಾದ ಬಿಲ್ಲುಶಾರ್ಙ್ಗವನ್ನೂ, (ವಳ್ಳೆಆಳಿ) ಮಂಡಲಾಕಾರವಾದ ಸುದರ್ಶನವನ್ನೂ (ಗದ್ಯೆ ಶಂಗಂ ಇವೈ) ಕೌಮೋದಕಿ ಎಂಬುವ ಗದೆಯನ್ನೂ ಪಾಂಚಜನ್ಯವೆಂಬ ಶಂಖವನ್ನೂ—ಈ ಪಂಚಾಯುಧ ಗಳನ್ನು (ಅವರ್ ಕೈಉಡ್ಯೆಯಾನ್) ತನ್ನ ಸುಂದರವಾದ ಹಸ್ತಗಳಲ್ಲಿ ಧರಿಸಿರು ವವನೂ ಆದ ಪರಮಾತ್ಮನು (ನಾಳುಂ ಉರೈಹಿನ್ರ ನಹರ್) ಯಾವಾಗಲೂ ವಾಸಿಸುತ್ತಿರುವ ದಿವ್ಯಕ್ಷೇತ್ರವಾದ (ನಂದಿಪುರ ವಿಣ್ಣಹರಂ, ಮನಮೇ, ನಣ್ಣು) ನಂದಿಪುರ ವಿಣ್ಣಹರವನ್ನು, ಎಲೈ ಮನಸ್ಸೇ ಹೋಗಿಸೇರು.

ಹಿಂದಿನ ಪಾಶುರದಲ್ಲಿ ಅಸುರರು ಭಗವಂತನ ಮುಂದೆ ನಿಲ್ಲಲಾರದೆ ಕೆಟ್ಟೋಡಿದ ರೀತಿಯನ್ನು ಹೇಳಿದರು. ಈ ಪಾಶುರದಲ್ಲಿ ಕೋಪಾಗ್ನಿಯಿಂದ ಅವರನ್ನು ನಿರಸನಮಾಡಿದ ಬಗೆಯನ್ನು ವರ್ಣಿಸಿದ್ದಾರೆ. ಅಗ್ನಿವರ್ಷವನ್ನು ಮಾಡುತ್ತಾ ಬಂದ ಅಸುರರ ದೇಹವನ್ನೆಲ್ಲಾ ಭಿನ್ನಭಿನ್ನವಾಗಿ ಕತ್ತರಿಸಿ ಹಾಕಿದವನವನು. ಯುದ್ಧಕ್ಕೆ ಪರಿಕರಗಳಾದ ಪಂಚಾಯುಧಗಳನ್ನು ಧರಿಸಿ ದವನವನು. 'ಅವತಾರಕಾಲದಲ್ಲಿ ಅವನು ಸಾನ್ನಿಧ್ಯ ನೀಡಿದ. ಈಗ ಇಲ್ಲ'— ಎಂದು ಹೇಳುವುದಕ್ಕಾಗದಂತೆ ಈ ಶ್ರೀ ಕ್ಷೇತ್ರದಲ್ಲಿ ನಿತ್ಯವಾಸ ಮಾಡಿದ್ದಾನೆ ಆಪ್ರಭು.

**ತಂಬಿಯೊಡು ತಾವ್ ಒರುವರ್ ತನ್‌ತುಣೈವಿ**
**ಕಾದಲ್ ತುಣೈಯಾಹ ಮುನನಾಳ್**
**ವೆಂಬಿ ಎರಿ ಕಾನಹಂ ಉಲಾವುಮವರ್**
**ತಾವ್ ಇನಿದು ಮೇವು ನಹರ್ ತಾನ್**
**ಕೊಂಬು ಕುದಿಕೊಂಡು ಕುಯಿಲ್ ಕೂವ**
**ಮಯಿಲ್ ಆಲುಂ ಎಟಿಲ್ ಆರ್‌ಪುರವುಶೇರ್**
**ನಂಬಿ ಉರೈಹಿನ್ರ ನಹರ್**
**ನಂದಿಪುರ ವಿಣ್ಣಹರಂ ನಣ್ಣುಮನಮೇ ॥೬॥**

(ಮುನನಾಳ್) ಹಿಂದೊಂದು ಕಾಲದಲ್ಲಿ (ತಾಮ್ ಒರುವರ್) ಲೋಕವಿಲಕ್ಷಣ ರಾಗಿ ಅವತರಿಸಿದ ಶ್ರೀ ರಾಮಚಂದ್ರನೆನ್ನುವ ಒಬ್ಬರು (ತಂಬಿಯೊಡು)

(ತಂಪೈ) ತಂಪೆಯಾದ ನಂದಗೋಪನ (ಮನಂಉಂದು) ಮನಸ್ಸನ್ನು ಕೊರಗಿಸುತ್ತಿದ್ದ (ತುಯರ್) 'ಪುತ್ರನಿಲ್ಲವಲ್ಲಾ' ಎಂಬುವ ಶೋಕವು (ನಂದ) ತೊಲಗುವಂತೆ (ಇರುಳ್‌ವಂದ) ರಾತ್ರಿಯಲ್ಲಿ ಬಂದು ಸೇರಿದವನೂ (ವಿರಲ್) ಅತಿಪರಾಕ್ರಮಿಯಾದವನೂ (ನಂದನ್‌ಮದಲೈ) ಆದ ನಂದಗೋಪ ಕುಮಾರನಾದ ಶ್ರೀಕೃಷ್ಣನು (ಇವನ್ ಎಂನ್ರೈಎನ್ರು) 'ಇವನೇ ನಮಗೆ ಸ್ವಾಮಿ' ಎಂದು ಹೇಳಿಕೊಂಡು (ಕಂದಂ ಮಲರ್ ಕೊಂಡು ತೊಟಿ) ಸುಗಂಧ ಭರಿತವಾದ ಹೂಗಳನ್ನು ಅರ್ಪಿಸಿ ಆಶ್ರಯಿಸುವುದಕ್ಕಾಗುವಂತೆ (ನಿನ್ರನಹರ್‌ತಾನ್) ಬಂದು ನೆಲಸಿರುವ ದಿವ್ಯದೇಶವಾದುದೂ, (ಮುಟಿವುಪಂಂದಂ ಓಶೈ) ವಾದ್ಯಗಳ ಮಂದವಾದ ಧ್ವನಿಯನ್ನು (ಮಟ್ಕೈಆಪ) ಮೇಘಗಳ ಘರ್ಜನೆ ಎಂದು ಭಾವಿಸಿ (ಕಾರ್) ಮಳೆಗಾಲದಲ್ಲಿ (ಎಟುಮಯಿಲ್‌ಹಳ್) ಹೊರಬರುವ ನವಿಲುಗಳು (ಆಡು) ನರ್ತಿಸುವಂತಹ (ಪೊಟಿಲ್‌ಶೂಟ್) ತೋಪುಗಳಿಂದ ಸುತ್ತುವರಿಯಲ್ಪಟ್ಟಿರುವುದೂ, (ನಂದಿಪಣಿಶೆಯ್‌ದನಹರ್) ನಂದಿ ಎಂಬ ಅರಸನೊಬ್ಬನು ಕೈಂಕರ್ಯಗಳನ್ನು ಮಾಡಿದಂತಹ ಸ್ಥಲವೂ ಆದ (ನಂದಿಪುರವಿಣ್ಣಹರಂ, ಮನವೇನಣ್ಣು) ನಂದಿಪುರವಿಣ್ಣಹರವನ್ನು, ಎಲೈ ಮನಸ್ಸೇ ಹೋಗಿ ಸೇರು.

ನಂದಗೋಪರ ಹೃದಯವನ್ನು ಪೀಡಿಸುತ್ತಿದ್ದ ದುಃಖವು ಹೋಗುವಂತೆಯೂ, ಅಸುರ ಪ್ರಕೃತಿಗಳ ಕಣ್ಣಿಗೆ ಕಾಣದಂತೆಯೂ ರಾತ್ರಿ ಬಂದು ಸೇರಿದ ಶ್ರೀಕೃಷ್ಣ ನಂದಗೋಕುಲಕ್ಕೆ. ನಂದಗೋಕುಲದಲ್ಲಿ ಸ್ವಲ್ಪಕಾಲ ಇದ್ದು ಮತ್ತೆ ಹೊರಟು ಹೋಗುವ ಇವನಿಂದ ಅವರ ಅನಪತ್ಯತಾ ದುಃಖವು ಪರಿಹಾರವಾಯಿತೇ ? ಹೆತ್ತತಾಯಿಯಂತೆ ಯಶೋದೆ ಮೊಲೆಯುಣಿಸಿದಳು. ಇವನೂ ಪರತಂತ್ರನಾಗಿ ಅವರಿಗೆ ವಿಧೇಯನಾಗಿ ನಡೆದುಕೊಂಡ. ಆದುದರಿಂದ ಅನಪತ್ಯತಾ ದುಃಖವು ಪರಿಹಾರವಾದಂತೆಯೇ ಆಯಿತು ಎಂದು ಸಮಾಧಾನ. 'ನಮಗೆ ಇವನು ಸ್ವಾಮಿ' ಎಂದು ದೇವತೆಗಳು ಕಲ್ಪವೃಕ್ಷದ ಹೂಗಳನ್ನು ತಂದು ಅರ್ಚಿಸುವಂತಹ ಕ್ಷೇತ್ರ ಇದು, ನಂದಿ ಎಂಬ ರಾಜನು ಈ ಕ್ಷೇತ್ರದಲ್ಲಿ ಭಗವಂತನಿಗೆ ಅನೇಕ ಕೈಂಕರ್ಯಗಳನ್ನು ಮಾಡಿದನು.

ಎಣ್ಣಿಲ್ ನಿನೈವು ಎಯ್‌ದಿ ಇನಿಇಲ್ಲೈ
ಇರೈ ಎನ್ರು ಮುನಿಯಾಳರ್ ತಿರು ಆರ್

ಪಣ್ಣಿಲ್ ಮಲಿ ಕೀತವೊಡುಪಾಡಿ ಅವರ್
ಆಡಲೊಡುಕೂಡ ಎಟ್ಟಿಲಾರ್
ಮಣ್ಣಿಲ್ ಇದು ಪೋಲುಂನಹರ್ ಇಲ್ಲೈಎನ
ವಾನವರ್‌ಹಳ್‌ತಾಮ್ ಮಲರ್‌ಹಳ್‌ತೂಯ್
ನಣ್ಣಿ ಉರೈಹಿನ್ರ ನಹರ್
ನಂದಿಪುರವಿಣ್ಣಹರಂ ನಣ್ಣುಮನಮೇ ॥೮॥

(ಎಣ್ಣಿಲ್) ವಿಚಾರ ಮಾಡಿನೋಡಲು (ನಿನ್ಯೆವು ಎಯ್‌ದಿ ಇರೈ) ಧ್ಯಾನಕ್ಕೆ ವಿಷಯುವಾಗತಕ್ಕ ಸ್ವಾಮಿಯು (ಇನಿಇಲ್ಲೈಎನ್ರು) ಇವನಿಗಿಂತ ಬೇರೆಯುವರೊಬ್ಬರು ಇಲ್ಲವೆಂದು ನಿಶ್ಚಯಿಸಿ (ಮುನಿಯಾಳರ್) ಮಹಾಮುನಿಗಳು (ತಿರು ಆರ್ ಪಣ್ಣಿಲ್‌ಮಲಿ) ಸುಂದರವಾದ ಗಾನ ರಾಗಗಳಿಂದ ಪೂರ್ಣವಾದ (ಕೀತವೊಡುಪಾಡಿ) ಹಾಡುಗಳೊಡನೆ ಸ್ತೋತ್ರಗಳನ್ನು ಮಾಡಲು (ಅವರ್ ಆಡಲೊಡು ಕೂಡ) ಆ ಮುನಿಗಳ ನರ್ತನಕ್ಕೆ ತಕ್ಕಹಾಗೆ (ವಾನವರ್‌ಹಳ್ ತಾಮ್) ದೇವತೆಗಳು (ಎಟ್ಟಿಲ್‌ಆರ್‌ಮಣ್ಣಿಲ್) ಹಿರಿಮೆಯುಳ್ಳ ಈ ಭೂಲೋಕದಲ್ಲಿ (ಇದುಪೋಲುಂ ನಹರ್ ಇಲ್ಲೈಎನ) ಈ ಕ್ಷೇತ್ರವನ್ನು ಹೋಲುವ ನಗರವು ಎಲ್ಲಿಯೂ ಇಲ್ಲವೆಂದು ಕೊಂಡಾಡಿ (ಮಲರ್‌ಹಳ್ ತೂಯ್) ಪುಷ್ಪಗಳನ್ನು ಸಮರ್ಪಿಸಿ (ನಣ್ಣಿ) ಆಶ್ರಯಿಸಿ (ಉರೈಹಿನ್ರ) ನಿತ್ಯ ವಾಸವನ್ನು ಮಾಡುತ್ತಿರುವಂತಹ (ನಹರ್) ದಿವ್ಯಕ್ಷೇತ್ರವಾದ (ನಂದಿಪುರವಿಣ್ಣಹರಂ, ಮನಮೇ, ನಣ್ಣು) ನಂದಿಪುರವಿಣ್ಣಹರ ಕ್ಷೇತ್ರವನ್ನು ಎಲೈ ಮನಸ್ಸೇ, ಹೋಗಿಸೇರು.

ರಜಸ್ತಮಸ್ಸುಗಳ ಪ್ರಭಾವಕ್ಕೆ ಸಿಲುಕದೆ ಕೆಲವರ ಕಾಲಿಗೆ ಬೀಳುವುದೆಂಬುದು ಆಗುವುದಿಲ್ಲ. ಸ್ವಲ್ಪ ಆಳವಾಗಿ ವಿಚಾರ ಮಾಡಿ ನೋಡಿದರೆ ಧ್ಯಾನಕ್ಕೆ ವಿಷಯವಾಗತಕ್ಕವರು ಈ ಶ್ರೀಮನ್ನಾರಾಯಣನನ್ನು ಬಿಟ್ಟು ಮತ್ತಾರೂ ಇಲ್ಲವೆಂಬುದು ಖಚಿತವಾಗುತ್ತದೆ. ಸನಕಾದಿಗಳು ಭಗವನ್ನಾಮವನ್ನು ಇಂಪಾಗಿ ಹಾಡುತ್ತಾ ನರ್ತನ ಮಾಡುವುದನ್ನು ಕಂಡ ದೇವತೆಗಳು,— 'ಸ್ವರ್ಗವೂ ಒಂದು ದೇಶವೋ ? ಭೂಲೋಕದಲ್ಲಿ ಭರತ ವರ್ಷವೇ ಶ್ರೇಷ್ಠ. ಅಲ್ಲಿ ಬಿಟ್ಟು ಬೇರೆಲ್ಲಿ ಬಯಸಿದ ಫಲಗಳಿಗಾಗಿ ಸಾಧನಾನುಷ್ಠಾನ ಮಾಡುವುದಕ್ಕಾಗುವುದು ?'—ಎಂದು ಹೇಳಿ ಹಾಗೆಯೇ ಭೂ ಮಂಡಲದಲ್ಲಿ ಈ ಕ್ಷೇತ್ರಕ್ಕೆ

ಸದೃಶವಾದ ಕ್ಷೇತ್ರವೂ ಮತ್ತೊಂದಿಲ್ಲವೆಂದು ಕೊಂಡಾಡುವರು. ಅಂಥ ಹಿರಿಮೆಯನ್ನುಳ್ಳದು ಈ ದಿವ್ಯಕ್ಷೇತ್ರ. ಆ ದೇವತೆಗಳೂ ಬಂದು ಇಲ್ಲಿ ನಿತ್ಯವಾಸ ಮಾಡಿ ಭಗವಂತನನ್ನು ಆರಾಧಿಸಿ ಧನ್ಯರಾಗುತ್ತಾರೆ.

**ವಂಗ ಮಲಿಪೌವಮ್ ಅದು ಮಾ ಮುಹಡಿನ್**
**ಉಚ್ಚಿ ಪುಹ ಮಿಕ್ಕ ಪೆರುನೀರ್**
**ಅಂಗಂ ಅಟಿಯಾರ್ ಅವನದು ಆಣೈ**
**ತಲೈಕೊಡುಂ ಅಡಿಯಾರ್ ಅರಿದಿ ಏಲ್**
**ಪೊಂಗು ಪುನಲ್ ಉಂದುಂಮಣಿ ಕಂಗುಲ್ ಇರುಳ್**
**ಶೀರುಂ ಒಳಿ ಎಂಗುಂ ಉಳದಾಲ್**
**ಸಂಗಳ್ ಪೆರುಮಾನ್ ಉಱೈಯುಂ**
**ನಂದಿಪುರವಿಣ್ಣಹರಂ ನಣ್ಣು ಮನನೇ** ॥೯॥

(ಮನಮೇ) ಎಲೈ ಮನಸ್ಸೇ, (ಅವನದು ಆಣೈ) ಆ ಭಗವಂತನ ಆಣೆಯನ್ನು (ತಲೈಕೊಡುಂ ಅಡಿಯಾರ್) ಶಿರಸಾವಹಿಸುವ ಭಕ್ತರುಗಳು (ವಂಗಂ ಮಲಿ ಪೌವಂ ಅದು) ಹಡಗುಗಳು ತುಂಬಿರುವ ಸಮುದ್ರವು (ಮಾ ಮುಹಡಿನ್ ಉಚ್ಚಿಪ್ಪುಹ) ಅತ್ಯುನ್ನತವಾದ ಅಂಡಭಿತ್ತಿಯ ನೆತ್ತಿಯವರೆಗೂ ವ್ಯಾಪಿಸುವಂತೆ (ಮಿಕ್ಕ ಪೆರುನೀರ್) ಉಕ್ಕಿ ಏಳುವ ಮಹಾ ಪ್ರವಾಹದಲ್ಲಿಯೂ (ಅಂಗಂ ಅಟಿಯಾರ್) ಶರೀರದ ನಾಶವನ್ನು ಹೊಂದುವುದಿಲ್ಲ. (ಅರಿದಿ ಏಲ್) ನೀನು ಇದನ್ನು ತಿಳಿದುಕೊಂಡೆಯಾದರೆ (ಪೊಂಗು ಪುನಲ್ ಉಂದುಂಮಣಿ) ಪ್ರವಹಿಸುತ್ತಿರುವ ಪ್ರವಾಹ ಜಲವು ತಳ್ಳಿಕೊಂಡು ಬರುವ ನವಮಣಿಗಳ (ಕಂಗುಲ್ ಇರುಳ್ ಶೀರುಂ ಒಳಿ) ರಾತ್ರಿಯ ಕತ್ತಲೆಯನ್ನು ಹೋಗಲಾಡಿಸುವ ಪ್ರಕಾಶವು (ಎಂಗುಂಉಳದು) ಎಲ್ಲೆಲ್ಲಿಯೂ ವ್ಯಾಪಿಸುತ್ತಿರುವಂಥದೂ ಆದ (ನಂದಿಪುರ ವಿಣ್ಣಹರಂನಣ್ಣು) ನಂದಿಪುರವಿಣ್ಣಹರ ಕ್ಷೇತ್ರವನ್ನು ಹೋಗಿ ಸೇರು.

ಕಾವಲಿರುವವರೇ ಕಳ್ಳತನ ಮಾಡುವಂತೆ ಭೂಮಿಗೆ ರಕ್ಷಕವಾಗಿ ಇಡಲ್ಪಟ್ಟಿರುವ ಸಮುದ್ರವು ಉಕ್ಕೇರಿ ಅಂಡಭಿತ್ತಿಯವರೆಗೂ ಹೋದರೂ ಭಗವಂತನು ಉಪದೇಶಿಸಿದ ಚರಮಶ್ಲೋಕದ ಅರ್ಥವನ್ನರಿತವರು ಪ್ರಳಯಾಪತ್ತಿಗೆ ಹೇತುವಾದ ಕರ್ಮಕ್ಕೆ ವಶರಾಗುವುದಿಲ್ಲ. 'ಸರ್ಗೇಪಿ ನೋಪಜಾ

ಯಂತೇ ಪ್ರಳಯೇ ನ ವ್ಯಥಂತಿ ಚ ।' ಎಂದು ಹೇಳಿದೆಯುಷ್ಟೇ? ನಮ್ಮ ಸ್ವಾಮಿ ಇರುವ ಈ ದಿವ್ಯ ಕ್ಷೇತ್ರಕ್ಕೆ, ಎಲೈ ಮನವೇ, ನೀನು ಈ ಸತ್ಯವನ್ನರಿತು ಹೋಗಿ ಸೇರು. ಪರಾವಸ್ಥೆ ನಿತ್ಯಸೂರಿಗಳಿಗೆ. ವ್ಯೂಹವು ಬ್ರಹ್ಮರುದ್ರಾದಿಗಳ ಪರಿಭವವನ್ನು ಹೋಗಲಾಡಿಸುವುದಕ್ಕೆ. ವಿಭವಾದ್ಯವತಾರಗಳು ಶ್ರೀವಸುದೇವ, ದಶರಥ ಚಕ್ರವರ್ತಿ ಮೊದಲಾದ ಭಾಗ್ಯಾಧಿಕರಿಗೆ ಆಗಿವೆ. ಇವೆಲ್ಲಾ ಆದ ಮೇಲೆ ಬಂದಂಥ ನಮ್ಮಂಥವರಿಗಾಗಿ ತಾನೇ ಸ್ವಾಮಿ ಒಲಿದು ನೆಲಸಿರುವ ದಿವ್ಯಕ್ಷೇತ್ರಗಳು! ನಿತ್ಯಸೂರಿಗಳೂ ಸಹ ಇಲ್ಲಿ ಬರುವಾಗ ವೇಷ ಮರೆಸಿಕೊಂಡು ಮನುಷ್ಯಾದಿ ವೇಷಗಳನ್ನು ಧರಿಸಿ ಬರಬೇಕಷ್ಟೇ? ಅಂಧರಿಗಾಗಿ ಮೀಸಲಾಗಿರುವ ಜಾಗಕ್ಕೆ ಕಣ್ಣುಗಳಿರುವವರು ಬರುವಾಗ ದೃಷ್ಟಿಯನ್ನು ಮರೆತು ತಾನೇ ಬರಬೇಕು?

**ನರೈ ಶೆಯ್ ಪೊೞಿಲ್ ಮಟ್ಟಿೞ್ ತವೞುಮ್**
**ನಂದಿಪುರವಿಣ್ಣಹರಂ ನಣ್ಣಿ ಉಱೈಯುಂ**
**ಉಱೈಕೊಳ್ ಪುಹರ್ ಆೞಿ ಶುರಿ ಶಂಗಂ ಅವ್ವೈ**
**ಅಮರ್ಕೈ ಉಡೈಯಾನೈ ಒಳಿಶೇರ್**
**ಕಱೈವಳರುಂ ವೇಲ್ ವಲ್ಲ ಕಲಿಯನ್**
**ಒಲಿಮಾಲೈ ಇವೈ ಐನ್ದುಂ ಐನ್ದುಂ**
**ಮುಱೈಯಿಲ್ ಇವೈ ಪಯಿಲವಲ**
**ಅಡಿಯವರ್‌ಹಳ್ ಕೊಡುವಿನೈಹಳ್ ಮುಱುದು**
**ಅಹಲುಮೇ ॥೧೦॥**

(ನರೈಶೆಯ್ ಪೊೞಿಲ್) ಜೇನು ಸಮೃದ್ಧವಾಗಿರುವ ತೋಪುಗಳಲ್ಲಿ (ಮಟ್ಟಿೞ್ ತವೞುಮ್) ಮೇಘಗಳು ಬಂದು ಸೇರುವಂಥ (ನಂದಿಪುರ ವಿಣ್ಣಹರಂ) ನಂದಿಪುರವಿಣ್ಣಹರವೆಂಬುವ ದಿವ್ಯಕ್ಷೇತ್ರವನ್ನು (ನಣ್ಣಿ) ಸೇರಿ (ಉಱೈಯುಂ) ಅಲ್ಲಿ ನಿತ್ಯವಾಸ ಮಾಡುವವನೂ (ಉಱೈಕೊಳ್‌ಪುಹರ್ ಆೞಿ) ಒರೆಯೊಳಗಿರುವುದೂ ತೇಜಸ್ಸು ಅತ್ಯಧಿಕವಾಗಿರುವುದೂ ಆದ ಶ್ರೀಸುದರ್ಶನ ಚಕ್ರವನ್ನೂ (ಶುರಿಶಂಗಂ) ಬಲಮುರಿ ಶಂಖವನ್ನೂ (ಅವ್ವೈ) ಮತ್ತೆ ಇತರ ದಿವ್ಯಾಯುಧಗಳನ್ನೂ (ಅಮರ್ಕೈ ಉಡೈಯಾನೈ) ಸುಂದರವಾದ ಹಸ್ತಗಳಲ್ಲಿ ಹೊಂದಿರುವವನಾದ ಸರ್ವೇಶ್ವರನನ್ನು ಕುರಿತು (ಕಱೈವಳರುಂ) ರಕ್ತದ ಕಲೆ ಬೆಳೆಯು

ತ್ತಿರುವುದೂ (ಒಳಿಶೇರ್) ಪ್ರಕಾಶಯುಕ್ತವಾದುದೂ ಆದ (ವೇಲ್‌ವಲ್ಲ) ವೇಲಾಯುಧವನ್ನು ಆಳಬಲ್ಲ (ಕಲಿಯನ್ ಒಲಿ) ತಿರುಮಂಗೈ ಆಳ್ವಾರ್ ಅನುಗ್ರಹಿಸಿದ (ಇವೈಪತ್ತೈ) ಈ ದಿವ್ಯಪ್ರಬಂಧದಲ್ಲಿ (ಇವೈ ಐಂದುಂ ಐಂದುಂ) ಈ ಹತ್ತುಪಾಶುರಗಳನ್ನೂ (ಮುರೈಯಿಲ್) ಕ್ರಮಕ್ಕನುಸಾರವಾಗಿ (ಪಯಿಲವಲ) ಅಧಿಕರಿಸಬಲ್ಲ (ಅಡಿಯವರ್ ಹಳ್) ಭಕ್ತರುಗಳ (ಕೊಡು ವಿನೈಹಳ್ ಮುಟುದು) ತೀವ್ರವಾದ ಪಾಪಗಳೆಲ್ಲವೂ (ಅಹಲುಂ) ಅವರನ್ನು ಬಿಟ್ಟೋಡುವುವು.

ನಂದಿಪುರ ವಿಣ್ಣಹರದ ಭೋಗ್ಯತೆಯನ್ನು ಮೊದಲು ಹೇಳಿದೆ. ಮೇಘಗಳು ಆ ಊರಿನ ತೋಟಗಳ ಮೇಲೆ ಸಂಚರಿಸುತ್ತಿರುತ್ತವೆಯಂತೆ. ತಿರುಮಂಗೈ ಆಳ್ವಾರ್ ಕೈಯ್ಯಲ್ಲಿ ವೇಲಾಯುಧ ಇದ್ದ ಬಳಿಕ ಸುದರ್ಶನವನ್ನು ಸ್ವಾಮಿ ಒರೆಯೊಳಗೆ ಇಟ್ಟಿರುವನಂತೆ. ಆ ಸರ್ವೇಶ್ವರ ತನ್ನ ಶ್ರೀಹಸ್ತಗಳಲ್ಲಿ ದಿವ್ಯಾಯುಧಗಳನ್ನು ಧರಿಸಿದ್ದಾನೆ. ತಿರುಮಂಗೈ ಆಳ್ವಾರ್ ಅವರ ವೇಲಾಯುಧ ಒರೆಯನ್ನು ಸೇರಲು ಅವಕಾಶವಿಲ್ಲದಂತೆ ಆಗಿದೆ. ಆ ವೇಲಾಯುಧದ ರಕ್ತದ ಕಲೆಯನ್ನು ತೊಳೆಯುವುದಕ್ಕೂ ಅವರಿಗೆ ಅವಕಾಶವಿಲ್ಲವಾಯಿತಂತೆ. 'ಮನಸ್ಸೇ ಈ ಕ್ಷೇತ್ರವನ್ನಾಶ್ರಯಿಸು' ಎಂದು ಆಳ್ವಾರ್ ಹೇಳಿದಂತೆಯೇ 'ಈ ಜಾಗವೇ ನಮಗೆ ಆಶ್ರಯಣೀಯವಾದ ಸ್ಥಲ' ಎಂದು ವಿಶ್ವಾಸಪೂರ್ವಕವಾಗಿ ಇದನ್ನು ಅಭ್ಯಾಸ ಮಾಡುವ ಭಕ್ತರ ಕಡುಪಾಪಗಳೆಲ್ಲಾ ಹೇಳ ಹೆಸರಿಲ್ಲದಂತೆ ಸವಾಸನವಾಗಿ ನಾಶವಾಗುವುವು.

### ಆರನೆಯ ಹತ್ತು—ಮೊದಲ ತಿರುಮೊಳಿ

## 'ವಂಡುಣು ನರುಮಲರ್'

## ಪ್ರವೇಶ

ಭಗವಂತನು ತಾನು ಒಲಿದು ನಿಂತಿರುವ ದಿವ್ಯದೇಶಗಳಲ್ಲಿ ರುಚಿಯು ಇವರಿಗೆ ಉಂಟಾಗಲೆಂದು ಇವರನ್ನು ಇಲ್ಲಿ ಇರಿಸಿದನು. ಈ ಭೂಮಿಯಲ್ಲಿ

ಶಬ್ದಾದಿವಿಷಯಗಳೂ ಇರುತ್ತಿವೆಯಷ್ಟೇ ? ಹಳೆಯ ವಾಸನೆಯ ಕಾರಣ ಆ ವಿಷಯಗಳ ಕಡೆಯೇ ಮನಸ್ಸು ಧಾವಿಸುವುದಷ್ಟೇ ದಿವ್ಯಕ್ಷೇತ್ರಗಳು ಇದ್ದಾಗ್ಯೂ ಸಹ, 'ಹೀಗೆಯೂ ಇವರಿಗೆ ರುಚಿಯು ಉಂಟೋ ಏನೋ'—ಎಂದು ಈಶ್ವರನು ಕೈಬಿಡಲೂ ಅವಕಾಶವಾದೀತು ! ಅದುದರಿಂದ ಭಗವತ್ಸಾಕ್ಷಾತ್ಕಾರ ದಲ್ಲಿ ತಮಗುಂಟಾದ ತೀವ್ರವಾದ ಆಶೆಯನ್ನೂ ಸಂಸಾರದಲ್ಲಿ ಉಂಟಾದ ಅರುಚಿಯನ್ನೂ ಅವನ ಮನಸ್ಸಿಗೆ ಬರುವಂತೆ ಇಲ್ಲಿ ವಿಜ್ಞಾಪಿಸುತ್ತಾರೆ. ಅಚಿತ್‌ನಲ್ಲಿ ಉಂಟಾದ ಪ್ರತ್ಯಾಸತ್ತಿಯ ಕಾರಣ ತಾನೇ ಆತ್ಮವಸ್ತು ಅನಾದಿ ಕಾಲದಿಂದ ಭಗವದರ್ಹವಾಗದಂತೆ ಹೋಗಿರುವುದು ! ಆದುದರಿಂದ ವಿಷಯ ಗಳಲ್ಲಿರುವ ಆ ಆಸಕ್ತಿಯನ್ನು ಹೋಗಲಾಡಿಸಿಕೊಳ್ಳಬೇಕಷ್ಟೇ ? ಅದನ್ನೇ ಇಲ್ಲಿ ಬೇಡಿದೆ.

**ವಂಡುಣಾ ನರುಮಲರ್ ಇಂಡ್ಶೈಕೊಂಡು**
**ಪಂಡೈ ನಮ್ ವಿನ್ಯೆ ಕೆಡವೆನ್ರು ಅಡಿಮೇಲ್**
**ತೊಂಡರುಂ ಅಮರರುಂ ಪಣಿಯ ನಿನ್ರು**
**ಅಂಗು ಅಂಡಮೊಡು ಅಹಲ್ ಇಡಂ ಅಳಂದವನೇ**
**ಆಂಡಾಯ್ ಉನ್ನೈ ಕಾಣ್ಬದೋರ್**
**ಅರುಳ್ ಎನಕ್ಕು ಅರುಳುದಿಯೇಲ್**
**ವೇಂಡೇನ್ ಮನೈ ವಾಟ್ಕೈಯೈ**
**ವಿಣ್ಣಹರ್ ಮೇಯವನೇ** ॥೧॥

(ಅಮರರುಂ) ದೇವತೆಗಳೂ (ತೊಂಡರುಂ) ಮತ್ತೆ ಇತರ ಭಕ್ತರುಗಳೂ (ನಮ್ ಪಂಡೈವಿನೈಕೆಡ ಎನ್ರು) 'ನಮ್ಮ ಹಿಂದಿನ ಪಾಪಗಳೆಲ್ಲಾ ಹೋಗಬೇಕು' ಎಂದು ಇಚ್ಛಿಸಿ (ವಂಡು ಉಣಾಂ ನರುಮಲರ್ ಇಂಡೈಕೊಂಡು) ದುಂಬಿಗಳು ಮಧು ಪಾನ ಮಾಡುವಂಥ ಪರಿಮಳವುಳ್ಳ ಪುಷ್ಪಗಳ ಮಾಲೆಗಳನ್ನು ತೆಗೆದುಕೊಂಡು ಬಂದು (ಅಡಿಮೇಲ್ ಪಣಿಯ ನಿನ್ರು) ನಿನ್ನ ಶ್ರೀಪಾದಗಳ ಮೇಲೆ ಬಿದ್ದು ಸೇವಿಸುವುದಕ್ಕಾಗುವಂತೆ ನಿಂತು ಸೇವಿಸುವರು. (ಅಂಗು ಅಂಡಮೊಡು ಅಹಲ್ ಇಡಂ ಅಳಂದವನೇ) ಆಗಲೇ ಅಂಡಗಳನ್ನೂ ಹರಡಿದ ಭೂಮಿಯನ್ನೂ ಅಳೆದು ಕೊಂಡವನೇ (ಆಂಡಾಯ್) ನನ್ನನ್ನು ಆಳಿದವನಾದ ಭಗವಂತನೇ (ವಿಣ್ಣಹರ್

ಮೇಯುವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿ ನಿತ್ಯವಾಸ ಮಾಡುವವನೇ, (ಉನ್ನೈ ಕಾಣ್ಬದು ಓರ್ ಅರುಳ್) ನಿನ್ನನ್ನು ನಾನು ಸೇವಿಸುವುದಕ್ಕಾಗುವಂತೆ ಕೃಪೆಯನ್ನು (ಎನಕ್ಕು ಅರುಳುದಿ ಏಲ್) ನನ್ನ ವಿಷಯದಲ್ಲಿ ನೀನು ಮಾಡುವುದಾದರೆ ಇನ್ನು (ಮನೈವಾಟ್ಕ್ಕೈಯೈ ವೇಂಡೇನ್) ಈ ಸಂಸಾರದ ಬಾಳ್ವೆಯನ್ನು ನಾನು ಬಯಸಲಾರೆ.

'ಹಿಂದಿನಿಂದ ನಾವು ಮಾಡಿರುವ ಪಾಪಗಳನ್ನೆಲ್ಲಾ ಹೋಗಲಾಡಿಸಬೇಕು' ಎಂದು ಭಗವಂತನ ಪಾದಗಳ ಮೇಲೆ ಬಿದ್ದು ದೇವತೆಗಳೂ ಭಗವದ್ಭಕ್ತರೂ ಬೇಡುತ್ತಾರೆ. ಭಗವಂತನಾದರೂ 'ಸಂಸಾರ ತಂತ್ರವಾಹಿತ್ವಾತ್ ರಕ್ಷಾಪೇಕ್ಷಾಂ ಪ್ರತೀಕ್ಷತೇ'–ಎಂದರೆ ಅಪರ ಪ್ರಾರ್ಥನೆಯನ್ನೇ ಎದುರುನೋಡುತ್ತಿರುವನು. 'ಇದುವರೆಗೂ ಅವನಲ್ಲಿ ಆಭಿಮುಖ್ಯ ಹೊಂದದೆಯೇ ವಿಷಯಪರನಾಗಿದ್ದರೂ ನಮ್ಮ ಸತ್ತೆ ಅಳಿಯದಂತೆ ಕಟಾಕ್ಷಿಸಿ ಕರುಣಿಸಿದವನು ಅವನು ! ಇಷ್ಟುಕಾಲ ನಮ್ಮ ಸತ್ತೆಯನ್ನು ಉಳಿಸಿಕೊಂಡು ಬಂದುದರ ಫಲವನ್ನು ನೀನು ಪಡೆಯ ಬೇಕೆಂದಿರುವುದಾದರೆ 'ತನಕ್ಕೇಯಾಹ ಎನ್ನೈ ಕೊಳ್ಳುಮೀದೇ' ಎಂಬಂತೆ ನನ್ನ ಮೇಲೆ ಕೃಪಾವರ್ಷ ಮಾಡಬೇಕು ನೀನು. 'ಇನ್ನೂ ಇವನಿಗೆ ಸಂಸಾರವಾಸನೆ ಹೋಗಿಲ್ಲ'–ಎಂದು ಸುಮ್ಮನೆ ಇರಬೇಡ. ನನಗೆ ಲೋಕಯಾತ್ರೆಯಲ್ಲಿ ರುಚಿ ಇಲ್ಲವೆಂಬುದನ್ನು ನೀನು ಮನಸ್ಸಿಗೆ ತಂದುಕೊಳ್ಳಬೇಕು.

**ಅಣ್ಣಲ್ ಶೆಯ್‌ದು ಅಲೈಕಡಲ್ ಕಡೈಂದು**
**ಅದನುಳ್ ಕಣ್ಣುದಲ್ ನಂಜುಉಂಡಕ್ಕಂಡವನೇ**
**ವಿಣ್ಣವರ್ ಅಮುದುಣ ಅಮುದಿಲ್‌ವರುಂ**
**ಪೆಣ್ ಅಮುದು ಉಂಡ ಎಂಬೆರುಮಾನೇ**
**ಆಂಡಾಯುನ್ನೈ ಕಾಣ್ಬದೋರ್**
**ಅರುಳೆನಕ್ಕು ಅರುಳುದಿಯೇಲ್**
**ವೇಂಡೇನ್ ಮನೈವಾಟ್ಕೈಯೈ**
**ವಿಣ್ಣಹರ್ ಮೇಯವನೈ ॥ ೨ ॥**

(ಅಣ್ಣಲ್‌ಶೆಯ್‌ದು) ತಾನೇ ಸರ್ವಸ್ವಾಮಿ ಎಂಬುವುದನ್ನು ತೋರಿಕೊಂಡು (ಅಲೈಕಡಲ್ ಕಡೈಂದು) ಅಲೆಗಳೇಳುವ ಸಮುದ್ರವನ್ನು ಮಥನಮಾಡಿ

(ಅದನುಳ್‌ನಂಜು) ಆ ಸಮುದ್ರದಿಂದ ಉದಿಸಿದ ಕಾಲಕೂಟ ವಿಷವನ್ನು (ನುದಲ್‌ಕಣ್) ಹಣೆಯಲ್ಲಿ ಕಣ್ಣನ್ನುಳ್ಳ ರುದ್ರನು (ಉಂಡ ಕಂಡವನೇ) ಪಾನ ಮಾಡುವಂತೆ ನಿಯಮಿಸಿದವನೇ, (ವಿಣ್ಣವರ್) ದೇವತೆಗಳು (ಅಮುದುಉಣ) ಅಮೃತಪಾನ ಮಾಡುತ್ತಿರಲು (ಅಮುದಿಲ್‌ವರುಂ ಪೆಣ್ ಅಮುದು) ಆ ಅಮೃತದ ಸಾರವಾದ ಶ್ರೀದೇವಿ ಎಂಬ ಅಮೃತವನ್ನು (ಉಂಡ ಎಂಬೆರು ಮಾನೇ) ಅನುಭವಿಸಲು ಪಡೆದ ನಮ್ಮ ಸ್ವಾಮಿಯೇ, (ಅಂಡಾಯ್) ನನ್ನನ್ನು ಆಳನ್ನಾಗಿ ಮಾಡಿಕೊಂಡವನೇ, ( ವಿಣ್ಣಹರ್‌ಮೇಯವನೇ ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ,(ಉನ್ನೈಕ್ಕಾಣ್ಬದು ಓರ್ ಅರುಳ್) ನಿನ್ನನ್ನು ಕಾಣುವಂತಹ ಒಂದು ಕೃಪೆಯನ್ನು (ಎನಕ್ಕು ಅರುಳುದಿವಿಲ್) ನನ್ನ ಮೇಲೆ ನೀನು ಮಾಡುವುದಾದರೆ (ಮನ್ನೈವಾಟ್ಕ್ಕೈಯೈ ವೇಂಡೇನ್) ಇನ್ನು ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ.

ತಮ್ಮ ಈ ರುಚಿ ಸ್ಥಿರವಾದುದೆಂದು ಅವನ ಮನಸ್ಸಿಗೆ ಬರುವಂತಾಗಲೆಂದು ಒಮ್ಮೆ ಹೇಳಿದುದನ್ನು ಮತ್ತೆಮತ್ತೆ ಹೇಳುತ್ತಾರೆ. 'ನನಗೆ ಸಂಸಾರದಲ್ಲಿ ರುಚಿ ಇಲ್ಲ; ಭಗವದ್ವಿಷಯದಲ್ಲಿಯೇ ರುಚಿ ಇರುತ್ತದೆ'– ಎಂದು ತಿಳಿಯಪಡಿಸುತ್ತಾರೆ. ಭಗವಂತನು ತನ್ನ ಔದಾರ್ಯವನ್ನು ತೋರಿ ಕ್ಷುಬ್ಧವಾದ ಸಾಗರವನ್ನು ಮಥಿಸಿದ. ಅಮೃತಪಾನ ಮಾಡಿ ದೇವತೆಗಳು ಉಜ್ಜೀವಿಸಲು ಆ ಅಮೃತದ ಸಾರಸರ್ವಸ್ವವಾದ ಶ್ರೀಮಹಾಲಕ್ಷ್ಮಿಯನ್ನು ತಾನು ಪಡೆದುಕೊಂಡು ಆ ಮೂಲಕ ಆಶ್ರಿತವರ್ಗದವರಿಗೆ ಉಪಕಾರಮಾಡಿದನವನು. ಮಹಾಲಕ್ಷ್ಮಿಯೊಡನೆ ಸೇರಿರುವ ಆ ಭವ್ಯವಾದ ರೂಪವನ್ನು ನಾನು ಕಂಡು ಅನುಭವಿಸುವಂತೆ ನನ್ನ ಮೇಲೆ ಅನುಗ್ರಹ ಮಾಡಬೇಕು. ಆ ದೇವಜಾತಿಯವರು ನಿನ್ನನ್ನು ಆಶ್ರಯಿಸಿ ಪಡೆದುಕೊಂಡ ಆ ಸಂಸಾರದ ಯಾತ್ರೆ ನನಗೆ ಬೇಕಾಗಿಲ್ಲ.

**ಕುಟಿಲ್ ನಿರವಣ್ಣ ನಿನ್ ಕೊರುಕೊಂಡ**
**ತವಿಲ್‌ನಿರವಣ್ಣನ್ ನಣ್ಣಾರ್ ನಹರಂ**
**ವಿಟ ನನಿನುಲ್ಲೈ ಶಿಲ್ವೈ ವಳ್ಳಿ ವುಶೆಯ್‌ದು**
**ಅಂಗು ಅಟಲ್ ನಿರವಂಬದು ಆನವನೇ**

**ಆಂಡಾಯ್ ಉನ್ನೈಕ್ಕಾಣ್ಬದೋರ್.**
**ಅರುಳಿನಕ್ಕು ಅರುಳುದಿಯೇಲ್**
**ವೇಂಡೇನ್ ಮನೈ ವಾಟ್ಕ್ಕೈಯೈ**
**ವಿಣ್ಣಹರ್ ಮೇಯವನೇ ॥೩॥**

(ಕುಟಿಲ್‌ನಿರಂವಣ್ಣ) ಕೇಶಪಾಶದ ಬಣ್ಣವನ್ನು ಹೋಲುವ ನೀಲವರ್ಣವನ್ನುಳ್ಳವನೇ, (ನಿನ್‌ಕೂರುಕೊಂಡ) ನಿನ್ನ ದಿವ್ಯಶರೀರದಲ್ಲಿ ಒಂದು ಭಾಗವನ್ನು ತನ್ನ ಸ್ಥಾನವನ್ನಾಗಿ ಉಳ್ಳವನೂ, (ತವಿಲ್‌ನಿರವಣ್ಣನ್) ಬೆಂಕಿಯ ಬಣ್ಣದಂತಹ ಬಣ್ಣವನ್ನುಳ್ಳವನೂ ಆದ ರುದ್ರನಿಂದ (ನಣ್ಣಾರ್‌ನಹರಂ ವಿಟಿ) ಶತ್ರುಗಳಾದ ಅಸುರರ ತ್ರಿಪುರವು ನಾಶವಾಗಿ ಬೀಳುವಂತೆ (ನನಿಮಲೈ) ದೊಡ್ಡ ಮೇರುಪರ್ವತವನ್ನು ಹೋಲುವ(ಶಿಲೈ) ಬಿಲ್ಲನ್ನು (ವಳೈವುಶೆಯ್‌ದು) ಬಾಗಿಸಿ (ಅಂಗು) ಅಲ್ಲಿ (ಅಟಲ್ ನಿರಂ ಅಂಬು ಅದು ಆನವನೇ) ಬೆಂಕಿಯನ್ನು ಹೋಲುವಂತಿದ್ದ ಬಾಣದಲ್ಲಿ ಆವೇಶಿಸಿ ನಿಂತವನೇ (ಆಂಡಾಯ್) ನನ್ನನ್ನು ಆಳುವವನೇ (ವಿಣ್ಣಹರ್‌ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ (ಉನ್ನೈಕ್ಕಾಣ್ಬದು ಓರ್ ಅರುಳ್) ನಿನ್ನನ್ನು ಕಾಣುವಂತಹ ಒಂದು ಕೃಪೆಯನ್ನು (ಎನಕ್ಕು ಅರುಳುದಿಯೇಲ್) ನನಗೆ ನೀನು ಅನುಗ್ರಹಿಸುವುದಾದರೆ (ವೇಂಡೇನ್ ಮನೈವಾಟ್ಕ್ಕೈಯೈ) ಈ ಸಂಸಾರದ ಬಾಳ್ವೆಯನ್ನು ಬಯಸುವುದಿಲ್ಲ.

ನಿನ್ನ ದೇಹದಲ್ಲಿ ಒಂದು ಪಾರ್ಶ್ವದಲ್ಲಿರುವವನೂ ಅಗ್ನಿಗೆ ಸಮನಾದ ವರ್ಣವನ್ನುಳ್ಳವನೂ ಆದ ರುದ್ರನು ತ್ರಿಪುರಾಸುರನ ನಗರಗಳನ್ನು ಧ್ವಂಸ ಮಾಡಿದಾಗ ದೊಡ್ಡ ಮೇರು ಕಲ್ಪವಾದ ಬಿಲ್ಲನ್ನು ಬಗ್ಗಿಸಿ ಅದರಲ್ಲಿ ಹೂಡಿದ ಬಾಣದ ಮೊನೆಯಲ್ಲಿ ಆವೇಶಿಸಿ ಪ್ರವೇಶಿಸಿದೆ ನೀನು ಮತ್ತು ಪ್ರತಿಪಕ್ಷವನ್ನು ನಿರಸನ ಮಾಡಿದೆ. ಆ ವಿಜಯವನ್ನು ಅವನಿಗೆ ತಂದುಕೊಟ್ಟೆ. ಅಂಥ ನೀನು ನನ್ನ ಸ್ವರೂಪ ವಿರೋಧಿಯನ್ನು ಹೋಗಲಾಡಿಸಿ ಸ್ವರೂಪಾನುರೂಪವಾದ ಲಾಭವನ್ನು ನಾನು ಪಡೆಯುವಂತೆ ಮಾಡಿಕೊಡಬೇಕು.

**ನಿಲವೊಡು ವೆಯ್ಯಿಲ್ ನಿಲವು ಇರುಶುಡರುಂ**
**ಉಲಹಮುಂ ಉಯಿರ್ ಹಳುಂ ಉಂಡು ಒರುಕಾಲ್**
**ಕಲೈತರು ಕುಟಿವಿಯಿನ್ ಉರುವಿನೈಆಯ್**
**ಅಲೈಕಡಲ್ ಆಲಿಲೈ ವಳರ್ನ್ದವನೇ**

**ಆಂಡಾಯ್ ಉನ್ನೈ ಕಾಣ್ಬದೋರ್ ಅರುಳ್**
**ಎನಕ್ಕು ಅರುಳುದಿಯೇಲ್**
**ವೇಂಡೇನ್ ಮನೈವಾಟ್ಕೈಯೈ**
**ವಿಣ್ಣಹರ್ ಮೇಯವನೇ** ॥೪॥

(ಒರುಕಾಲ್) ಪ್ರಳಯವು ಸಂಭವಿಸಿದ ಸಮಯದಲ್ಲಿ (ನಿಲವೊಡುವೆಯ್ಯಿಲ್ ನಿಲವು ಇರುಶುಡರುಮ್) ಬೆಳುದಿಂಗಳು ಮತ್ತು ಬಿಸಿಲು ಇವುಗಳೊಡನೆ ಸಂಚರಿಸುವ ಚಂದ್ರಸೂರ್ಯರುಗಳನ್ನೂ (ಉಲಹಮುಂ) ಲೋಕಗಳನ್ನೂ (ಉಯಿರ್ಹಳುಂ) ಪ್ರಾಣಿಗಳನ್ನೂ (ಉಂಡು) ನಿನ್ನ ಹೊಟ್ಟೆಯೊಳಗಿಟ್ಟು ಕೊಂಡು (ಕಲೈತರು) ಬಹಳ ಚಿಕ್ಕರೂಪವನ್ನು ಹೊಂದಿ (ಕುಟಿಮಿಯಿನ್ ಉರುವಿನ್ನೈ ಆಯ್) ಚಿಕ್ಕ ಶಿಶುವಿನ ರೂಪದವನಾಗಿ (ಅಲೈಕಡಲ್) ಅಲೆಗಳೇಳು ತ್ತಿರುವ ಸಾಗರದಲ್ಲಿ (ಆಲ್ಇಲೈವಳರ್ನ್ದವನೇ) ಎಳೆಯ ಆಲದೆಲೆಯ ಮೇಲೆ ಶಯನಿಸಿದವನೇ (ಆಂಡಾಯ್, ವಿಣ್ಣಹರ್ ಮೇಯವನೇ) ಎನ್ನನ್ನು ಆಳುವವನೇ, ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಉನ್ನೈಕಾಣ್ಬದು ಓರ್ ಅರುಳ್ ಎನಕ್ಕು ಅರುಳುದಿಯೇಲ್) ನಿನ್ನನ್ನು ಕಾಣುವುದಕ್ಕಾಗುವಂತಹ ಕೃಪೆಯನ್ನು ನನಗೆ ನೀನು ಕರುಣಿಸುವುದಾದರೆ ಸಾಕು. (ಮನೈವಾಟ್ಕೈಯೈ ವೇಂಡೇನ್). ಈ ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ.

ಬೆಳುದಿಂಗಳು ಮತ್ತು ಬಿಸಿಲುಗಳನ್ನು ಹೊಂದಿ ಸಂಚರಿಸುವ ಚಂದ್ರ ಸೂರ್ಯರಿಗೂ ಅವನೇ ನಿರ್ವಾಹಕನಾಗಿದ್ದಾನೆ. ಲೋಕಗಳು ಅವುಗಳಲ್ಲಿರುವ ಪ್ರಾಣಿಗಳು ಮೊದಲಾದವನ್ನೆಲ್ಲಾ ಒಮ್ಮೆ ತನ್ನ ಉದರದೊಳಗೆ ಅಡಗಿಸಿಟ್ಟು ಕೊಂಡ ಸ್ವಾಮಿ ಅವನು. ಒಂದೇ ಒಂದು ಕಲೆಯನ್ನುಳ್ಳ ಎಳೆಯ ಮಗುವಿನ ರೂಪ ಹೊಂದಿ ಪ್ರಕ್ಷುಬ್ಧವಾದ ಸಾಗರದಲ್ಲಿ ವಟಪತ್ರ ಶಾಯಿಯಾಗಿ ಮೆರೆದ ನವನು. ಅಂಥ ಅಘಟಿತಘಟನಾಸಮರ್ಥ ನೀನು. ನನ್ನ ಬಗೆಗೆ ಅಘಟಿತವಾದವು ಘಟಿಸುವಂತೆ ಮಾಡಬೇಕಾದುದೇನೂ ಇಲ್ಲ. ನಿನ್ನನ್ನು ನಾನು ಕಾಣುವುದಕ್ಕಾಗು ವಂತಹ ಉಪಾಯವೊಂದನ್ನು ಅನುಗ್ರಹಿಸಿದರೆ ಸಾಕು !

**ಪಾರೇೞು ಕಡಲೇೞು ಮಲೈಯೇೞುಮಾಯ್**
**ಶೀರ್ಕೊೞುಂ ಇವ್ವುಲಹು ಏೞುಮೆಲ್ಲಾಮ್**
**ಆರ್ಕೆೞು ವಯಿತ್ತಿನಿಲ್ ಅಡಕ್ಕಿ ನಿನ್ರು**
**ಅಂಗು ಓರ್ ಎೞುತ್ತು ಓರುರುವಾನವನೇ**

**ಅಂಡಾಯ್ ಉನ್ನೈ ಕಾಣ್ಬದೋರು**
**ಅರುಳ್ ಎನಕ್ಕರುಳುದಿಯೇಲ್**
**ವೇಂಡೇನ್ ಮನೈವಾಟ್ಕೈಯೈ**
**ವಿಣ್ಣಹರ್ ಮೇಯವನೇ** ॥೫॥

(ಪಾರ್ ಏ ಟುಂ) ಸಪ್ತದ್ವೀಪಗಳಿಂದ ಕೂಡಿದ ಭೂಮಿಗೂ (ಕಡಲೇಟುಂ) ಸಪ್ತಸಾಗರಗಳಿಗೂ (ಮಲೈಏಟುಂ) ಸಪ್ತಕುಲಾಚಲಗಳಿಗೂ (ಆಯ್) ನಿರ್ವಾಹಕನಾಗಿದ್ದುಕೊಂಡು (ಅಂಗು) ಅಂಥ ಪ್ರಳಯಕಾಲದಲ್ಲಿ (ಶೀರ್ ಕೆಟುಂ) ಸೌಂದರ್ಯವು ಅತ್ಯಧಿಕವಾಗಿರುವ (ಇವ್ವುಲಹು ಏಟುಂ ಎಲ್ಲಾಂ) ಈ ಸಪ್ತ ಲೋಕಗಳನ್ನೂ (ಆರ್‌ಕೆಟು ವಯಿತ್ತಿನಿಲ್) ಚೆಲುವಾದ ತನ್ನ ಉದರದೊಳಗೆ (ಅಡಕ್ಕಿ ನಿನ್ರು) ಅಡಗಿಸಿಟ್ಟುಕೊಂಡವನಾಗಿ (ಓರ್‌ಎಟುತ್ತು ಓರ್‌ಉರು ಆನವನೇ) ಅಕಾರಕ್ಕೆ ಮುಖ್ಯವಾಚ್ಯನಾಗಿರುವವನೇ, (ವಿಣ್ಣಹರ್ ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಅಂಡಾಯ್) ಎನ್ನನ್ನು ಆಳುವವನೇ, (ಉನ್ನೈ ಕಾಣ್ಬದೋರ್ ಅರುಳ್ ಎನಕ್ಕು ಅರುಳುದಿಯೇಲ್) ನಿನ್ನನ್ನು ಕಾಣುವುದಕ್ಕಾಗುವಂತಹ ಕೃಪೆಯನ್ನು ನನಗೆ ಕರುಣಿಸಬೇಕು. (ವೇಂಡೇನ್ ಮನೈವಾಟ್ಕೈಯೈ) ಈ ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ.

ಭಗವಂತನು ಸರ್ವಕಾರಣನಾಗಿರುವುದರಿಂದ ಬಂದ ಶಕ್ತಿವಿಶೇಷವನ್ನು ಅನುಸಂಧಾನ ಮಾಡುತ್ತಾರೆ ಇಲ್ಲಿ. ಈ ಲೋಕಗಳೆಲ್ಲಕ್ಕೂ ಆಧಾರನೂ. ನಿಯಾಮಕನೂ. ಶೇಷಿಯೂ ಆದವನು ಅವನು. ಎಲ್ಲವನ್ನೂ ಪ್ರಳಯ ಕಾಲದಲ್ಲಿ ತನ್ನ ಉದರದೊಳಗೆ ಅಡಗಿಸಿದ ಮಹಾನುಭಾವನವನು. ವಾಚಕ ಗಳಿಗೆಲ್ಲಾ ಪ್ರಧಾನವಾದುದು ಅಕಾರ, ಆ ಅಕಾರ ಶಬ್ದಕ್ಕೆ ವಾಚ್ಯನಾದವನು ಆ ಪರಮಾತ್ಮನು.

**ಕಾರ್‌ಕೆಟು ಕಡಲ್ ಹಳುಂ ಮಲೈಹಳುಮಾಯ್**
**ಏರ್‌ಕೆಟುಂ ಉಲಹಮುಂ ಆಹಿ ಮುದ–**
**ಲಾರ್‌ಹಳುಂ ಅರಿವರುನಿಲೈಯಿನೈಯಾಯ್**
**ಶೀರ್‌ಕೆಮಿನಾಲ್ ಮರ್ಕೈ ಆನವನೇ**

**ಆಂಡಾಯ್ ಉನ್ನೈಕ್ಕಾಣ್ಬದೋರ್ ಅರುಳ್**
**ಆರುಳೆನಕ್ಕು ಅರುಳುದಿಯೇಲ್**
**ವೇಂಡೇನ್ ಮನ್ನೈವಾಟ್ಕೈಯೈ**
**ವಿಣ್ಣಹರ್ ಮೇಯವನೇ ॥೬॥**

(ಕಾರ್‌ಕೆಟು) ಮೇಘಗಳುಉಂಟಾಗುವ ಸ್ಥಾನವಾದ (ಕಡಲ್‌ಹಳುಂ) ಸಮುದ್ರ ಗಳಿಗೂ (ಮಲೈಹಳುಂ) ಪರ್ವತಗಳಿಗೂ (ಆಯ್) ಧಾರಕನಾಗಿ, ಶರೀರಿ ಯಾಗಿಯೂ (ಏರ್ ಕೆ ಟುಂ) ಸೌಂದರ್ಯವನ್ನುಳ್ಳ (ಉಲಹಮುಂ ಆಯ್) ಲೋಕಗಳಿಗೂ ನಿರ್ವಾಹಕನಾಗಿಯೂ (ಮುದಲಾರ್‌ಹಳುಂ) ಪ್ರಧಾನರಾದ ಬ್ರಹ್ಮಾದಿದೇವತೆಗಳಿಗೂ (ಅರಿಪರುನಿಲೈಯಿನ್ನೈ ಆಯ್) ಅರಿಯುವುದಕ್ಕಾಗ ದಂತಹ ಸ್ವಭಾವವನ್ನುಳ್ಳವನಾಗಿಯೂ, (ಶೀರ್‌ಕೆಟುನಾಲ್‌ಮರೈ ಆನವನೇ) ಶ್ರೇಷ್ಠವಾದ ಚತುರ್ವೇದಗಳಿಂದಲೂ ಪ್ರತಿಪಾದ್ಯನಾಗಿರುವ ಪರಮಾತ್ಮನೇ, (ಆಂಡಾಯ್ ಉನ್ನೈಕ್ಕಾಣ್ಬದು ಓರ್ ಆರುಳ್ ಎನಕ್ಕರುಳುದಿಯೇಲ್) ನನ್ನನ್ನು ಆಳುವವನೇ, ನಿನ್ನನ್ನು ಕಾಣುವುದಕ್ಕಾಗುವಂತಹ ಅನುಗ್ರಹವನ್ನು ನೀನು ನನ್ನ ಮೇಲೆ ಮಾಡುವುದಾಗಬೇಕು. (ವಿಣ್ಣಹರ್‌ಮೇಯವನೇ ಮನ್ನೈವಾ ಟ್ಕೈಯೈ ವೇಂಡೇನ್) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, ಈ ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ.

ಪರಮಾತ್ಮನು ಜಗದಾಧಾರನೂ ಜಗಚ್ಛರೀರನೂ ಆಗಿರುವುದನ್ನು ಇಲ್ಲಿ ಸ್ತುತಿಸಿದೆ. ಚತುರ್ದಶಭುವನೇಶ್ವರನಾದ ಚತುರ್ಮುಖನೇ ಮೊದಲಾದ ದೇವತೆಗಳೂ ಸಹ 'ಇಷ್ಟು' ಎಂದು ಪರಿಚ್ಛೇದಿಸುವುದಕ್ಕಾಗದ ಸ್ವಭಾವ ವನ್ನುಳ್ಳವನು ಅವನು. ಪ್ರಮಾಣಭೂತವಾದುದೂ, ಯಥಾಭೂತವಾದಿ ಯಾದುದೂ ಆದ ಚತುರ್ವೇದಗಳಿಂದ ಪ್ರತಿಪಾದ್ಯನಾದವನು ಅವನೇ. 'ನೀನು ಜಗದಾಧಾರ, ಜಗಚ್ಛರೀರ ಎಂದು ಕೇಳುವುದರಲ್ಲಿಯೇ ನಿಲ್ಲದಂತೆ, ನಿನ್ನ ಅಸಾಧಾರಣಾಕಾರವನ್ನು ನಾನು ಸಾಕ್ಷಾತ್ಕರಿಸುವಂತೆ ನನ್ನ ಮೇಲೆ ನೀನು ಕೃಪೆಮಾಡಬೇಕು. ನಾನು ನಿಜವಾಗಿ ಈ ಸಂಸಾರದ ಬಾಳಿನಲ್ಲಿ ಜಿಗುಪ್ಸೆ ಹೊಂದಿದ್ದೇನೆ'— ಎನ್ನುತ್ತಾರೆ ಆಳ್ವಾರ್ ಅವರು.

ಉರುಕ್ಕುರು ನರುನೆಯ್ ಕೊಂಡು ಆರ್ ಅಟಲಿಲ್
ಇರುಕ್ಕ್ಕು ಉರುಂ ಅಂದಣರ್ ಶಂದಿಯಿನ್ ವಾಯ್
ಪೆರುಕ್ಕವೊಡು ಅಮರರ್ ಹಳ್ ಅಮರನಲ್ ಹುಂ
ಇರುಕ್ಕಿನಿಲ್ ಇನ್ ಇಶೈ ಆನವನೇ
ಆಂಡಾಯ್ ಉನ್ನೈಕ್ಕಾಣ್ಬದೋರ್ ಅರುಳ್
ಎನಕ್ಕು ಅರುಳುದಿಯೇಲ್
ವೇಂಡೇನ್ ಮನ್ನೈವಾಟ್ಕ್ಕೈಯೈ
ವಿಣ್ಣಹರ್ ಮೇಯವನೇ ॥೭॥

(ಇರುಕ್ಕುಉರುಂ ಅಂದಣರ್) ವೇದವನ್ನು ಅಧಿಕರಿಸಿದ ಬ್ರಾಹ್ಮಣರು (ಅಮರರ್‌ಹಳ್) ದೇವತೆಗಳಿಂದ (ಪೆರುಕ್ಕವೊಡು ಅಮರ) ತಾವು ಐಶ್ವರ್ಯ ಪಡೆದು ಬಾಳುವುದಕ್ಕಾಗಲೆಂದು (ಶಂದಿಯಿನ್‌ವಾಯ್) ಸಂಧ್ಯಾಕಾಲದಲ್ಲೆಲ್ಲಾ (ಉರುಕ್ಕುರು ನರುನೆಯ್‌ಕೊಂಡು) ಕರಗಿರುವುದೂ ಸುಗಂಧವನ್ನುಳ್ಳದೂ ಆದ ತುಪ್ಪವನ್ನು ತೆಗೆದುಕೊಂಡು (ಆರ್‌ಅಟಲಿಲ್) ಜ್ವಲಿಸುವ ಅಗ್ನಿಯಲ್ಲಿ (ನಲ್‌ಹುಂ) ಹೋಮಮಾಡುವುದಕ್ಕೆ ತಕ್ಕುದಾದ (ಇರುಕ್ಕಿನಿಲ್ ಇನ್‌ಇಶೈ ಆನವನೇ) ವೇದದಲ್ಲಿರುವ ಪ್ರಣವಕ್ಕೆ ಪ್ರತಿಪಾದ್ಯನಾದ ಸ್ವಾಮಿಯೇ (ಆಂಡಾಯ್ ವಿಣ್ಣಹರ್‌ಮೇಯವನೇ) ನನ್ನನ್ನು ಆಳುವವನೇ, ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಉನ್ನೈಕ್ಕಾಣ್ಬದೋರ್ ಅರುಳ್ ಎನಕ್ಕು ಅರುಳುದಿಯೇಲ್) ನಿನ್ನನ್ನು ಕಾಣತಕ್ಕಂಥ ಅನುಗ್ರಹವೊಂದನ್ನು ನನಗೆ ನೀನು ಮಾಡಿದರೆ ಸಾಕು (ಮನ್ನೈವಾಟ್ಕ್ಕೈಯೈ ವೇಂಡೇನ್) ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ.

'ಪರಸ್ಪರಂ ಭಾವಯಂತ; ಶ್ರೇಯ; ಪರಮವಾಪ್ಸ್ಯಥ' ಎಂದು ಹೇಳಿದಂತೆ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರು ದೇವತೆಗಳಿಗೆ ಧಾರಕವಾದ ಹವಿಸ್ಸನ್ನು ಸಂಧ್ಯಾಕಾಲದಲ್ಲಿ ಸಮರ್ಪಿಸುವರಷ್ಟೇ ? ಅಂಥ ಬ್ರಾಹ್ಮಣರಿಗೆ ಧನವಾಗಿರುವ ವೇದದಲ್ಲಿ ಸ್ವರರೂಪವಾಗಿರುವ ಯಾವ 'ಪ್ರಣವ' ಇದೆಯೋ ಆದರಿಂದ ಪ್ರತಿಪಾದ್ಯನಾದವನು ಆ ಸರ್ವೇಶ್ವರ, 'ಯದ್ವೇದಾದೌ ಸ್ವರಃ ಪ್ರೋಕ್ತಃ' ಎಂದು ಹೇಳಲ್ಪಟ್ಟಿರುವ ಪ್ರಣವವು ಪರಸ್ವರೂಪವನ್ನು

ಹೇಳುತ್ತದೆ– 'ಓಂಕಾರೋ ಭಗವಾನ್ ವಿಷ್ಣುಃ' ಎಂದು ಹೇಳಿದಂತೆ 'ಋಚಸ್ಸಾಮಾನಿ ಯಜೂಂಷಿ, ಸಾ ಹಿ ಶ್ರೀಃ ಅಮೃತಾ ಸತಾಂ' ಎಂದು ಹೇಳಿದಂತೆ ಬ್ರಾಹ್ಮಣರಿಗೆ ವೇದವೇ ಧನ. ಪ್ರಣವವು 'ಓಂ ಇತ್ಯಾತ್ಮಾನಂ ಯುಂಜೀತ' ಎಂದು ಆತ್ಮವಸ್ತುವನ್ನು ಈಶ್ವರನ ಪಾದದಲ್ಲಿ ಸಮರ್ಪಿಸುವಾಗ ಆ ಪ್ರಣವವು ಆತ್ಮವಾಚಕವೂ ಆಗುವುದು,

**ಕಾದಲ್ ಶೆಯ್‌ದು ಇಳೈಯವರ್ ಕಲವಿತರುಂ**
**ವೇದನೈ ವಿನೈ ಅದು ವೆರುವುದಲ್ ಆವಾ**
**ಆದಲಿಲ್ ಉನದಡಿ ಅಣುಹುವನ್ ನಾನ್**
**ಪೋದಲರ್ ನೆಡುಮುಡಿ ಪುಣ್ಣಿಯನೇ**
**ಅಂಡಾಯ್ ಉನ್ನೈಕ್ಕಾಣ್ಬದೋರ್ ಅರುಳ್**
**ಎನಕ್ಕು ಅರುಳುದಿಯೇಲ್**
**ವೇಂಡೇನ್ ಮನೈವಾಟ್ಕೈಯೈ**
**ವಿಣ್ಣಹರ್ ಮೇಯವನೇ** ॥೮॥

(ಪೋದಲರ್ ನೆಡುಮುಡಿ ಪುಣ್ಣಿಯನೇ) ಆಗ ತಾನೇ ಅರಳಿದ ಕುಸುಮಗಳಿಂದ ರಚಿತವಾದ ನೀಳವಾದ ಕಿರೀಟದಿಂದ ಅಲಂಕೃತನಾದ ಪರಿಶುದ್ಧನೇ, (ಇಳೈಯವರ್ ಕಾದಲ್ ಶೆಯ್‌ದು) ಚಿಕ್ಕವಯಸ್ಸಿನ ಹೆಂಗಳೆಯರು ಪ್ರೀತಿಯನ್ನು ಮಾಡಿ (ತರುಂ ವೇದನೈ ಕಲವಿ ಅದು) ಕೊಡುವ ದುಃಖರೂಪವಾದ ಸಂಶ್ಲೇಷಕ್ಕೆ ಮೂಲವಾಗಿರುವ (ವಿನೈ ವೆರುವುದಲ್ ಆವಾ) ಕರ್ಮವಾದುದು ನನಗೆ ಲಜ್ಜೆಯನ್ನೂ ಜುಗುಪ್ಸೆಯನ್ನೂ ಉಂಟುಮಾಡುವುದಾಗಿದೆ. (ಆದಲಿಲ್) ಆದುದರಿಂದ (ಉನದು ಅಡಿನಾನ್ ಅಣುಹುವನ್) ನಿನ್ನು ಚೆಲುವಡಿಗಳನ್ನು ನಾನು ಬಂದು ಆಶ್ರಯಿಸಿದ್ದೇನೆ. (ಅಂಡಾಯ್, ವಿಣ್ಣಹರ್ ಮೇಯವನೇ) ನನ್ನನ್ನು ಆಳುವವನೇ, ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಉನ್ನೈಕ್ಕಾಣ್ಬದೋರ್ ಅರುಳ್ ಎನಕ್ಕು ಅರುಳುದಿಯೇಲ್) ನಿನ್ನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವಂತಹ ಕೃಪೆಯನ್ನು ನನ್ನ ಮೇಲೆ ನೀನು ದಯೆಯಿಂದ ಮಾಡಿದರೆ ಸಾಕು. (ಮನೈವಾಟ್ಕೈಯೈವೇಂಡೇನ್) ಈ ಸಂಸಾರದ ಬಾಳನ್ನು ನಾನು ಬಯಸೆನು.

ಹೆಂಗಳಿಯರಲ್ಲಿ ಪ್ರಣಯಮಾಡಿ ಅವರಿಂದ ಲಭಿಸುವ ದುಃಖಾತ್ಮಕವಾದ ಸಂಶ್ಲೇಷಕ್ಕೆ ಕಾರಣವಾದ ಕರ್ಮವನ್ನು ನೆನೆದಂತೆಲ್ಲಾ ನನಗೆ ಭಯವಾಗುತ್ತದೆ. ಇಂಥ ಅಪಾಯಗಳನ್ನು ತಪ್ಪಿಸುವಂಥ ನಿನ್ನ ಶ್ರೀಪಾದಗಳನ್ನು ನಾನು ಆಶ್ರಯಿಸಿದ್ದೇನೆ. ಇತರ ವಿಷಯಗಳಲ್ಲಿ ನನ್ನ ಪ್ರಾವಣ್ಯವನ್ನು ಹೋಗಲಾಡಿಸಿ ಶುದ್ಧಿಯನ್ನುಂಟುಮಾಡಿದ ಸ್ವಾಮಿಯೇ ! ನಾಡಿನಲ್ಲಿ ಎಲ್ಲರಿಗೂ ಇಂಥ ಮನೋಭಾವ ಉಂಟಾಗದಷ್ಟೇ ? ನಿನ್ನನ್ನುಳಿದು ಬೇರೆ ವಿಚಾರಗಳಲ್ಲಿ ನನಗೆ ಆಸಕ್ತಿ ಉಂಟಾಗದಂತೆ ಮಾಡಿದ ನೀನೇ ನಿನ್ನನ್ನು ನಾನು ಸಾಕ್ಷಾತ್ಕರಿಸುವಂತೆ ಅನುಗ್ರಹಿಸಬೇಕು. ನನಗೆ ನಿನ್ನ ಸಂದರ್ಶನದಲ್ಲಿ ರುಚಿಯೇ ವಿನಾ ಸಂಸಾರದಲ್ಲಿ ರುಚಿ ಇಲ್ಲ.

**ಶಾದಲುಂ ಪಿರತ್ತಲುಂ ಎನ್ರಿವತ್ತೈ**
**ಕಾದಲ್ ಶೆಯ್ಯಾದು ಉನ ಕಟಿಲ್ ಅಡೈಂದೇನ್**
**ಓದಲ್ ಶೆಯ್ ನಾಲ್‌ಮರೈಆಹಿ**
**ಉಂಬರಾದಲ್‌ಶೆಯ್ ಮೂಉರು ಆನವನೇ**
**ಆಂಡಾಯ್ ಉನ್ನೈ ಕಾಣ್ಬದೋರ್ ಅರುಳ್**
**ಎನಕ್ಕು ಅರುಳುದಿಯೇಲ್**
**ವೇಂಡೇನ್ ಮನೈವಾಟ್ಕೈಯೈ**
**ವಿಣ್ಣಹರ್ ಮೇಯವನೇ** ॥೯॥

(ಓದಲ್ ಶೆಯ್) ಪರಂಪರೆಯಾಗಿ ಬಾಯಿಪಾಠದಿಂದ ಬರುತ್ತಿರುವ (ನಾಲ್ ಮರೈಆಯ್) ನಾಲ್ಕು ವೇದಗಳಿಗೂ ನಿರ್ವಾಹಕನಾಗಿ (ಉಂಬರ್ ಆದಲ್ ಶೆಯ್‌ಮೂ ಉರು ಆನವನೇ) ದೇವತೆಗಳಿಗೆ ಪ್ರಧಾನರಾಗಿ ಹಿರಿಮೆ ಉಳ್ಳವರಾದ ಬ್ರಹ್ಮರುದ್ರೇಂದ್ರರೆಂಬುವ ಮೂವರಿಗೂ ನಿಯಾಮಕನಾಗಿರುವವನೇ, (ಶಾದಲುಂ ಪಿರತ್ತಲುಂ ಎನ್ರು ಇವತ್ತೈ) ಸಾಯುವುದೂ ಹುಟ್ಟುವುದೂ ಆಗಿರುವ ಸಂಸಾರವನ್ನು (ಕಾದಲ್ ಶೆಯ್ಯಾದು) ಎಳ್ಳಷ್ಟೂ ಬಯಸದವನಾಗಿ (ಉನ್ ಕಟಿಲ್ ಅಡೈಂದೇನ್) ನಿನ್ನ ಶ್ರೀಪಾದಗಳನ್ನು ನಾನು ಬಂದು ಸೇರಿದ್ದೇನೆ. (ಅಂಡಾಯ್ ವಿಣ್ಣಹರ್ ಮೇಯವನೇ) ನನ್ನನ್ನು ಆಳುವವನೇ, ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಉನ್ನೈ ಕಾಣ್ಬದೋರ್ ಅರುಳ್)

ನಿನ್ನನ್ನು ಕಾಣುವುದಕ್ಕಾಗುವಂತಹ ಅನುಗ್ರಹವೊಂದನ್ನು (ಅರುಳಿದಿಯೇಲ್) ನನ್ನ ಮೇಲೆ ದಯೆಗೈದರೆ ಸಾಕು. (ಮನ್ನೈವಾಟ್ಕಿ್ಕ್ಕು ವೇಂಡೇನ್) ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ.

ಮರಣ ಸಮಯದಲ್ಲಿ ಪಡುವ ದುಃಖವನ್ನೂ, ನರಕಾನುಭವದ ದುಃಖವನ್ನೂ, ಪಂಚಾಗ್ನಿ ವಿದ್ಯೆಯಲ್ಲಿ ಹೇಳುವಂತೆ ಗರ್ಭರೂಪದಲ್ಲಿ ಪಡುವ ವೇದನೆಯನ್ನೂ ಅನುಸಂಧಾನ ಮಾಡಿ ಜನ್ಮಾದಿಗಳಲ್ಲಿ ಆಶೆಯನ್ನು ತೊರೆದು ಆ ದುಃಖಗಳನ್ನೆಲ್ಲಾ ಹೋಗಲಾಡಿಸುವ ನಿನ್ನ ಪದಪದ್ಮಗಳನ್ನು ನಾನು ಬಂದು ಆಶ್ರಯಿಸಿದ್ದೇನೆ. ಲೋಕ ಈ ದುಃಖಕ್ಕೆ ಒಳಗಾಗಿರುವುದು ಏತಕ್ಕೆಂದರೆ ಭಗವತ್ಸಮಾಶ್ರಯಣವನ್ನು ಮಾಡದೆ ಇರುವುದರಿಂದಲೇ. ಬ್ರಹ್ಮರುದ್ರೇಂದ್ರಾದಿಗಳಿಗೂ ನಿಯಾಮಕನಾದ ಸ್ವಾಮಿಯೇ, ನನಗೆ ಅಂಥ ಅಧಿಕಾರವನ್ನು ಪಡೆಯುವ ಆಶೆಯೇ ಇಲ್ಲ. ನಿನ್ನ ದಿವ್ಯಮಂಗಳ ರೂಪವನ್ನು ತೋರಿ ನೀನು ಸಲಹಬೇಕು.

**ಪೂಮರು ಪೊೞಿಲ್ ಅಣಿವಿಣ್ಣಹರ್ ಮೇಲ್**<br>
**ಕಾಮರುಶೀರ್ ಕಲಿಕನ್ರಿ ಶೊನ್ನ**<br>
**ಪಾಮರು ತಮಿೞ್ ಇನ್ವೈ ಪಾಡವಲ್ಲಾರ್**<br>
**ವಾಮನನಡಿ ಇಣೈ ಮರುವುವರೇ** ॥೧೦॥

(ಪೂಮರು) ಯಾವಾಗಲೂ ಪುಷ್ಪ ಸಮೃದ್ಧಿ ಇರುತ್ತಿರುವ (ಪೊೞಿಲ್) ತೋಟಗಳಿಂದ (ಅಣಿ) ಅಲಂಕೃತವಾದ (ವಿಣ್ಣಹರ್ ಮೇಲ್) ತಿರುವಿಣ್ಣಹರ್ ಕ್ಷೇತ್ರವನ್ನು ಕುರಿತಂತೆ (ಕಾಮರು ಶೀರ್ ಕಲಿಕನ್ರಿ ಶೊನ್ನ) ಎಲ್ಲರೂ ಆಶಿಸತಕ್ಕ ಶ್ರೀವೈಷ್ಣವ ಶ್ರೀಯನ್ನುಳ್ಳವರಾದ ತಿರುಮಂಗೈ ಆೞ್ವಾರ್ ಅವರು ಅನುಗ್ರಹಿಸಿದ (ಪಾಮರು ತಮಿೞ್ ಇನ್ವೈ) ತಮಿಳು ಪಾಶುರಗಳಿಂದ ಕೂಡಿದ ಈ ದಶಕವನ್ನು (ಪಾಡವಲ್ಲಾರ್) ಹಾಡಬಲ್ಲವರು (ವಾಮನನ್ ಅಡಿ ಇಣೈ ಮರುವುವರ್) ಸರ್ವೇಶ್ವರನ ಪಾದಗಳೆರಡನ್ನೂ ಹೊಂದಿ ನಿಲ್ಲುವರು.

ತಿರುವಿಣ್ಣಹರ್ ಕ್ಷೇತ್ರದಲ್ಲಿ ನಿತ್ಯವಸಂತವೇ ಇರುವಂತಿದೆ. ಅಂಥ ಸುಂದರ ಕ್ಷೇತ್ರವನ್ನು ಉದ್ದೇಶಿಸಿ ಎಲ್ಲರಿಂದಲೂ ಸ್ಪೃಹಣೀಯವಾದ ವೈಷ್ಣವ ಶ್ರೀಯನ್ನುಳ್ಳ ತಿರುಮಂಗೈಆೞ್ವಾರ್ ಅವರು ಒಳ್ಳೆಯ ಛಂದಸ್ಸುಗಳನ್ನುಳ್ಳ ಈ ದಶಕವನ್ನು ಹಾಡಿದ್ದಾರೆ. ಇದನ್ನು ಅಭ್ಯಾಸ ಮಾಡುವವರು 'ವೇಂಡೇನ್'

ಎಂದು ಯಾವುದನ್ನು ಆಳ್ವಾರ್ ಹೇಳಿದರೋ ಅದನ್ನು ಹೋಗಲಾಡಿಸಿಕೊಂಡು 'ಅರುಳುದಿಯೇಲ್' ಎಂದು ಯಾವುದನ್ನು ಹೇಳಿದರೋ ಅದನ್ನು ಪಡೆದು ಕೊಂಡು ಬಾಳುತ್ತಾರೆ.

## ಆರನೆಯ ಪತ್ತು—ಎರಡನೆಯ ತಿರುಮೊಳಿ

# 'ಪೊರುತ್ತೇನ್'

## ಪ್ರವೇಶ

ಸಂಸಾರದಲ್ಲಿ ತಮಗುಂಟಾದ ಅರುಚಿಯನ್ನು ಆಳ್ವಾರ್ ಅವರು ಭಗವಂತ ನಲ್ಲಿ ವಿಜ್ಞಾಪಿಸಿದರು. ಹಾಗೆ ಮಾಡಿದರೂ ಅವನು ಬೇಗ ಬಂದು ಸಂಸಾರ ವನ್ನು ಹೋಗಲಾಡಿಸಲಿಲ್ಲ. ಅನಾದಿ ಕಾಲದಿಂದ ತಾವು ಸಂಸಾರದಲ್ಲಿ ಸಿಕ್ಕಿ ಹೋದ ರೀತಿಯನ್ನೂ, ಅದರಿಂದ ಜನ್ಮಪರಂಪರೆಗಳ ದುಃಖದಲ್ಲಿ ತೊಡಗಿ ಹೋದುದನ್ನೂ, ಅರ್ಥಕಾಮಗಳನ್ನು ಅರಸಿಕೊಂಡು ಹೋದ ರೀತಿಯನ್ನೂ, ಇಂದ್ರಿಯವಶ್ಯನಾಗಿ ಹೋದ ರೀತಿಯನ್ನೂ, ಮುಂದೆ ಬರಬಹುದಾದ ನರಕಾನು ಭವವನ್ನು ನೆನೆದು ಭಯಪಡುವ ರೀತಿಯನ್ನೂ ಆ ಪರಮಾತ್ಮನಲ್ಲಿ ವಿಜ್ಞಾಪನೆ ಮಾಡಿ,— ಇವುಗಳನ್ನು ನನ್ನಿಂದಲೇ ಹೋಗಲಾಡಿಸಿಕೊಳ್ಳುವುದಕ್ಕಾಗುತ್ತಿಲ್ಲ. ನನ್ನ ಈ ದೋಷಗಳನ್ನೊಂದೊಂದನ್ನೂ ಎಣಿಸದೆ ನಿನ್ನೊಡನೆ ಉಂಟಾಗಿರುವ ನಿರುಪಾಧಿಕ ಸಂಬಂಧವೊಂದನ್ನು ಗಮನಿಸಿ ನಿನ್ನಲ್ಲಿಯೇ ಶರಣಾಗಿರುವ ನನ್ನನ್ನು ಸ್ವೀಕರಿಸಿ ಅನುಗ್ರಹಿಸಬೇಕು'—ಎಂದು ಬಿನ್ನಯಿಸುತ್ತಿದ್ದಾರೆ ಈ ದಶಕದಲ್ಲಿ.

**ಪೊರುತ್ತೇನ್ ಪುನ್ ಶೊಲ್ ನೆಂಜಿಲ್ ಪೊರುಳ್ ಇನ್ಬಂ**
**ಎನ ಇರಂಡುಂ**
**ಇರುತ್ತೇನ್ ಐಂಬುಲನ್ ಹಳ್ ಕಡನ್ ಆಯಿನ**
**ವಾಯಿಲೊಟ್ಟಿ**
**ಅರುತ್ತೇನ್ ಆರ್ ವಂ ಶೆತ್ತಂ ಅವೈತನ್ನೈ ಮನತ್ತಹತ್ತಿ**
**ವೆರುತ್ತೇನ್ ನಿನ್ನಡೈಂದೇನ್ ತಿರುವಿಣ್ಣಹರ್ ಮೇಯವನೇ**
**॥೧॥**

(ಪುಲ್‌ಶೊಲ್) ಇತರರು ಹೇಳುವ ಅಲ್ಪವಾದ ಮಾತುಗಳನ್ನು (ನೆಂಜಿಲ್ ಪೊರುತ್ತೇನ್) ಮನಸ್ಸಿನಲ್ಲಿ ಸಹಿಸಿಕೊಂಡಿದ್ದೆನು. (ಐಂಬುಲನ್ ಹಳ್ ಕಡನ್ ಆಯಿನ) ಪಂಚೇಂದ್ರಿಯಗಳಿಗೆ ಪ್ರಾಪ್ಯವಾಗಿದ್ದ (ಪೊರುಳ್ ಇನ್ಬಂ ಎನ ಇರಂಡುಂ) ಅರ್ಥ, ಕಾಮ ಎಂಬ ಎರಡನ್ನೂ (ಇರುತ್ತೇನ್) ಅನುಭವಿಸಿ ತೀರಿಸಿದೆನು. (ಆರ್ವಂ ಶೆತ್ತಂ) ಬೇಕಾದವರ ಬಗೆಗೆ ಪ್ರೀತಿಯನ್ನೂ ಬೇಡದವರ ಬಗೆಗೆ ಹಗೆಯನ್ನೂ (ವಾಯಿಲೊಟ್ಟಿ) 'ಅವಶ್ಯವಾಗಿ ನೆರವೇರಿಸಿಯೇ ತೀರುವೆನೆಂದು' ಪ್ರತಿಜ್ಞೆ ಮಾಡಿ (ಅರುತ್ತೇನ್) ನೆರವೇರಿಸಿಯೇ ಬಿಟ್ಟೆ. (ಅವ್ವೈ ತನ್ನೈ) ಆ ರಾಗ ದ್ವೇಷಗಳನ್ನು (ಮನತ್ತು ಅಹತ್ತಿ) ಈಗ ಮನಸ್ಸಿನಿಂದ ಮಾತ್ರ ಹೋಗಲಾಡಿಸಿಕೊಂಡವನಾಗಿ (ವೆರುತ್ತೇನ್) ನಿರ್ವೇದಕ್ಕೊಳಗಾಗಿದ್ದೇನೆ. (ತಿರುವಣ್ಣ ಹರ್ ಮೇಯವನೇ ನಿ್ ಅಡೈಂದೇನ್) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ದೇವನೇ, ನಿನ್ನಲ್ಲಿ ನಾನು ಶರಣಾಗಿದ್ದೇನೆ.

ಸಂಸಾರಿಗಳನ್ನು ಬಂಧುಗಳು ಎಂದು ತಿಳಿದುಕೊಂಡಿರುವುದುಂಟು. ಉಪಕಾರ ಮಾಡಿಸಿಕೊಂಡು ಸಹ ಉಪಕಾರ ಮಾಡಲಿಲ್ಲ ಎಂದು ಕ್ಷುದ್ರವಾದ ಹುಲುಮಾತನ್ನಾಡಿದರೂ ಸಹ 'ಇವರು ನಮ್ಮ ಬಂಧುಗಳಾಗಿರುವುದರಿಂದ ತಾನೇ ಇಂಥ ಮಾತಾಡುವರು. ಬೇರೆಯವರು ಹೀಗೆ ಆಡಿಯಾರೇ?' ಎಂದು ಆ ಮಾತುಗಳನ್ನು ಸಹಿಸಿಕೊಂಡು ಹೋದೆ. ಇದಕ್ಕೆ ಮತ್ತೂ ಒಂದು ಅರ್ಥ ಹೇಳಲಾಗಿದೆ. ಸಮಸ್ತಕಲ್ಯಾಣಗುಣಾತ್ಮಕನಾದ ಪರಮಾತ್ಮನನ್ನು ಸ್ತುತಿಸುವ ಪಾಶುರಗಳಿಂದ ಕ್ಷುದ್ರರಾದ, ತೃಣಸಮಾನರಾದ ಮನುಷ್ಯರನ್ನು ಕೊಂಡಾಡುವುದನ್ನು ಮನಸ್ಸಿನಲ್ಲಿ ಭಾವಿಸಿದೆ. ಯಾರನ್ನು ಬಂಧುಗಳೆಂದು ತಿಳಿದಿರುವರೋ ಅವರಿಗೆ ಉಪಕರಿಸಲು ಅರ್ಥ ಬೇಕಷ್ಟೇ ? ಮತ್ತೊಬ್ಬರನ್ನು ಆಶ್ರಯಿಸಿ ಕೊಂಡಾಡುವುದು ಅರ್ಥಕ್ಕಾಗಿ ತಾನೇ ? ಹೀಗೆ ಅರ್ಥ ಸಂಪಾದನೆ ಮಾಡಲು ತೊಡಗಿದಾಗ ಅದಕ್ಕೆ ಸಹಕರಿಸಿದವರನ್ನು ಬಾಳಿಸುವುದೂ, ವಿರೋಧಿಸಿದವರನ್ನೂ ನಾಶಗೊಳಿಸುವುದೂ ಮೊದಲಾದುದನ್ನು ಪ್ರತಿಜ್ಞೆಮಾಡಿ ಆ ಸಂಕಲ್ಪವನ್ನೂ ಅನುಷ್ಠಾನಪರ್ಯಂತವಾಗಿ ನಡೆಸಿದೆನು. ಈಗ ಹೀಗೆ ಅನಾದಿಕಾಲದಿಂದ ಬಾಧಿಸುವ ವಾಸನೆಗಳನ್ನು ಹೋಗಲಾಡಿಸಿಕೊಳ್ಳಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದರೂ ಆ ಪ್ರಬಲವಾದ ಪ್ರಾಚೀನ ವಾಸನೆಗಳನ್ನು ಹೋಗಲಾಡಿಸಿಕೊಳ್ಳಲು ನನ್ನಿಂದ ಆಗುತ್ತಿಲ್ಲ. ಅದರಿಂದ

ನಿನ್ನಲ್ಲಿ ಬಂದು ಶರಣಾಗಿದ್ದೇನೆ. ನನಗೆ ಹಿತೈಷಿಯಾದ ನೀನು ಸಮೀಪ ದಲ್ಲಿಯೇ ಇರುವವನಾಗಿದ್ದೀಯೆ. ನಿನ್ನ ದಯೆಯನ್ನು ಬೀರಿ ಶರಣಾದ ನನ್ನನ್ನು ಸಲಹಬೇಕು. ನಿರ್ವಿಣ್ಣನಾಗಿರುವ ನನ್ನನ್ನು ಈ ಸಂಸಾರದಿಂದ ನೀನೇ ಕಡೆ ಹಾಯಿಸಬೇಕು.

**ಮರಂದೇನ್ ಉನ್ನೈ ಮುನ್ನಂ ಮರಂದ ಮತಿಇಲ್ ಮನತ್ತಾಲ್**
**ಇರಂದೇನ್ ಎತ್ತನೈಯುಂ ಅದನಾಲ್ ಇಡುಂಬೈಕ್ಕುಟಿಯಿಲ್**
**ಪಿರಂದೇ ಎಯ್‌ತ್ತು ಒಟಿನ್ದೇನ್ ಪೆರುಮಾನ್ ತಿರುಮಾರ್‌ಪಾ**
**ಶಿರಂದೇನ್ ನಿನ್ನಡಿಕ್ಕೇ ತಿರುವಿಣ್ಣಹರ್ ಮೇಯವನೇ ॥೨॥**

(ತಿರುವಿಣ್ಣಹರ್‌ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ, (ಉನ್ನೈ ಮುನ್ನಂ ಮರಂದೇನ್) ನಿನ್ನನ್ನು ಮೊದಲಿಗೇ ಮರೆತು ಹೋದೆ. (ಮರಂದ ಮತಿಇಲ್ ಮನತ್ತಾಲ್) 'ಹೀಗೆ ಮರೆತು ಬಿಟ್ಟೆನಲ್ಲಾ' ಎನ್ನುವ ಅನುತಾಪವೂ ಇಲ್ಲದ ಮನಸ್ಸನ್ನು ಹೊಂದಿದುದರಿಂದ (ಎತ್ತನೈಯುಂ ಇರಂದೇನ್) ಅತ್ಯಧಿಕವಾಗಿ ನಿಹೀನನಾಗಿ ಕೆಟ್ಟುಹೋದೆ. (ಅದನಾಲ್) ಆದುದರಿಂದ (ಇಡುಂಬೈಕ್ಕುಟಿಯಿಲ್) ದುಃಖಾಸ್ಪದವಾದ ಗರ್ಭವೆಂಬುವ ಹಳ್ಳದಲ್ಲಿ (ಪಿರಂದೇ)ನಿರಂತರವಾಗಿ ಜನನಮರಣಗಳನ್ನುಳ್ಳವನಾಗಿ (ಎಯ್‌ತ್ತು ಒಟಿನ್ದೇನ್) ಅನರ್ಥಕ್ಕೊಳಗಾಗಿ ಹೋದೆ. (ತಿರುಮಾರ್‌ಪಾ ಪೆರುಮಾನ್) ಶ್ರೀದೇವಿಯನ್ನು ವಕ್ಷಃಸ್ಥಲದಲ್ಲಿ ಉಳ್ಳವನಾದ ಪರಮಾತ್ಮನೇ (ನಿನ್‌ಅಡಿಕ್ಕೇ ಶಿರಂದೇನ್) ನಿನ್ನ ಪಾದಗಳಿಗೆ ಈಗ ತಕ್ಕವನಾಗಿ ಸಂದಿದ್ದೇನೆ.

"ಚೇತನನು ಮಾಡಿದ ಅಪರಾಧವು ವಿಪಾಕದಶೆಗೆ ಬಂದಾಗ ಅನರ್ಥ ದಲ್ಲಿ ಪರಿಣಮಿಸುವುದಷ್ಟೇ ? ಆಗ ಹಾಗೆ ಆಪತ್ತು ಬಂದಾಗ 'ನಮಗೆ ರಕ್ಷಕ ರಾರು ?' ಎಂದು ಹುಡುಕುವರು. ಆ ಸಮಯದಲ್ಲಿ ನಾವು ದೂರದಲ್ಲಿರ ಬಾರದು"– ಎಂದು ಆ ಸ್ವಾಮಿ ತಿರುವಿಣ್ಣಹರ್‌ನಲ್ಲಿ ಬಂದು ಸನ್ನಿಹಿತನಾಗಿ ರುವುದರಿಂದ ಅವನ ಪಾದಗಳಲ್ಲಿ ನಾನು ಶರಣು ಹೋದೆನು ಎನ್ನುತ್ತಾರೆ ಆಳ್ವಾರ್ ಅವರು.

ಅರ್ಥ ಕಾಮಗಳನ್ನು ಅರಸಿ ಹೋದಂತೆ ಮನಸ್ಸಿನ ಒಂದು ಮೂಲೆ ಯಲ್ಲಿ ನಿನ್ನನ್ನು ನಾನು ಆದರಿಸಿ ಇಟ್ಟುಕೊಳ್ಳಲಿಲ್ಲ! ಕಷ್ಟ ಕಷ್ಟ! 'ಧ್ಯೇಯೋ

ನಾರಾಯಣಃ ಸದಾ' ಎಂದು ಹೇಳಿರುವ ವಿಷಯವನ್ನು ನಾನು ಮರೆತುಬಿಟ್ಟೆ. 'ನಿನ್ನನ್ನು' ಎಂದು ಹೇಳಿರುವುದರಿಂದ ಸಂಬಂಧವನ್ನವರು ಸ್ಮರಿಸಿದವರಾಗಿ ದ್ದಾರೆ. ಆ ಸಂಬಂಧವೂ ಸ್ವಾಭಾವಿಕವೇ ಆದುದಾಗಿದೆ. ಅನಾದಿ ಕಾಲದಿಂದ ಮರೆತು ಹೋಗಿದ್ದರೂ ಕೆಲವು ದಿನ ಸ್ಮರಿಸಿ ಮರೆತವರಂತೆ ಅವರಿಗೆ ತೋರುತ್ತಿದೆ. ಅಚೇತನಕ್ಕೆ ಜ್ಞಾನಗುಣವಿಲ್ಲ. 'ಮರೆತೆ' ಎಂದು ತಿಳಿಯ ಲಾರದು. 'ಮರೆತೆ' ಎಂಬ ಜ್ಞಾನವೂ ಇಲ್ಲದ ಮನಸ್ಸುಳ್ಳವನಾಗಿ ಆ ಅಚೇತನದಂತೆಯೇ ನಾನೂ ಆಗಿ ಹೋದೆನಲ್ಲಾ ! 'ಅಸನ್ನೇವ ಸ ಭವತಿ' ಎಂದು ಹೇಳುವುದಕ್ಕನುಸಾರ ಆಗಿ ಹೋದೆ ! ಹೀಗೆ ಅನುತಾಪ ಹೊಂದವೆ ಇರುವುದೇ ಸಂಸಾರಕ್ಕೆ ಬೀಜವಾಯಿತು ಎನ್ನುತ್ತಾರೆ ಆಳ್ವಾರ್ ಅವರು.

ಚೇತನರ ದೋಷವನ್ನು ಕಾಣದವಳೂ ಅನುಗ್ರಹೈಕ ಮಯಿಯಾದವಳೂ ಪುರುಷಕಾರ ಭೂತೆಯಾದವಳೂ ಆದ ಶ್ರೀದೇವಿಯನ್ನು ವಕ್ಷಃಸ್ಥಲದಲ್ಲಿ ಹೊಂದಿರುವವನಾಗಿ, ನೀವಿಬ್ಬರೂ ಇಲ್ಲಿ ಸಾನ್ನಿಧ್ಯ ನೀಡಿರುವುದರಿಂದ ನಿಮ್ಮ ಶ್ರೀಪಾದಕ್ಕೆ ಸಲ್ಲಲು ನಾನು ತಕ್ಕವನಾಗಿದ್ದೇನೆ.

**ಮಾನೇಯ್‌ ನೋಕ್ಕಿಯರ್ ತಮ್‌ ವಯಿತ್ತುಕ್ಕುಟಿಯಿಲ್**
**ಉಟಿಕ್ಕೈಕ್ಕುಂ**
**ಊನೇಯ್‌ ಆಕ್ಕೈ ತನ್ನೈ ಉದವಾಮ್ಮೈ ಉಣರ್‌ನ್ದುಣರ್‌ನ್ದು**
**ವಾನೇ ಮಾನಿಲಮೇ ಉವಂದು ವಂದೆನ್ ಮನತ್ತಿರುಂದ**
**ತೇನೇ ನಿನ್ನಡೈಂದೇನ್ ತಿರುವಿಣ್ಣಹರ್ ಮೇಯವನೇ ॥೩॥**

(ವಾನೇ ಮಾನಿಲಮೇ) ನಿತ್ಯವಿಭೂತಿಗೂ ಲೀಲಾವಿಭೂತಿಗೂ ನಾಯಕ ನಾದವನೇ, (ಉವಂದು ವಂದು ಎನ್ ಮನತ್ತಿರುಂದ ತೇನೇ) ಪ್ರೇಮದೊಡನೆ ಬಂದು ನನ್ನ ಮನಸ್ಸಿನಲ್ಲಿ ನಿತ್ಯವಾಸ ಮಾಡುವ ಪರಮ ಭೋಗ್ಯನೇ, (ತಿರು ವಿಣ್ಣಹರ್ ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ, (ಮಾನೇಯರ್ ನೋಕ್ಕಿಯರ್ ತಮ್) ಜಿಂಕೆಯ ಹಾಗೆ ಚೆಲುವಾದ ಕಣ್ಣುಗಳನ್ನುಳ್ಳ ಸ್ತ್ರೀಯರ (ವಯಿರು ಕಟಿಯಿಲ್) ಗರ್ಭಗರ್ತದಲ್ಲಿದ್ದುಕೊಂಡು (ಉಟಿಕ್ಕೈಕ್ಕುಂ) ಕಷ್ಟಪಡುವುದಾಗಿ (ಊನ್‌ಏಯ್ ಆಕ್ಕೈತನ್ನೈ) ಮಾಂಸಾದಿಗಳಿಂದ ಪುಷ್ಟವಾದ ಶರೀರದ (ಉತವಾಮ್ಮೈ ಉಣರ್‌ನ್ದು ಉಣರ್‌ನ್ದು) ಉಪಯೋಗವನ್ನು

ಕಳೆದುಕೊಂಡು ಬಿಟ್ಟುದನ್ನು ಚೆನ್ನಾಗಿ ಚಿಂತಿಸಿ ತಿಳಿದವನಾಗಿ (ನಿನ್ ಅಡ್ಶೈಂದೇನ್) ನಿನ್ನಲ್ಲಿ ಬಂದು ಶರಣಾಗಿದ್ದೇನೆ.

ನರಕವಾಸಕ್ಕಿಂತ ದುಃಖಕರವಾದ ಗರ್ಭವಾಸ ಹೆಚ್ಚಾಗಿ ಇದಕ್ಕೆ ಅವಧಿಯೇ ಇಲ್ಲದಂತೆ ಇದೆ. ಶರೀರಕ್ಕೆ ಪುರುಷಾರ್ಥಸಾಧನವಾದ ಆಕಾರವೂ ಇದೆ. ಬಂಧಕವಾದ ಆಕಾರವೂ ಇದೆ. ಆದರೆ ಸಿದ್ಧಿಸಿದುದು ಯಾವುದು ಎಂದರೆ ಬಂಧಕವಾದ ಆಕಾರವೇ, ಕಂಡುಬರುವ ದೇಹವನ್ನೇ ಪ್ರೀತಿಸಿ, ಅದನ್ನೇ ಆತ್ಮಾ ಎಂದು ಭಾವಿಸಿ, ಅಭಿಮಾನಿಸಿ ಆತ್ಮವನ್ನೂ ಪರಮಾತ್ಮನನ್ನೂ ಎಣಿಸದೆ ಹೋದರೆ ಆ ಶರೀರ ಬಂಧಕವೇ ಆಗುತ್ತದೆ. ಉಭಯವಿಭೂತಿ ಯುಕ್ತನಾದ ಪರಮಾತ್ಮನು ತನಗಿರಲು ಒಂದು ಎಡೆ ಇಲ್ಲದವನ ಹಾಗೆ ಬಂದು ನನ್ನ ಮನಸ್ಸಿನಲ್ಲಿ ನೆಲಸಿದ್ದಾನೆ ಎನ್ನುತ್ತಾರೆ ಆಳ್ವಾರ್ ಅವರು. 'ಆವಾಸಂ ತ್ವಹಮಿಚ್ಛಾಮಿ ಪ್ರತಿಷ್ಠಾಂ ಇಹ ಕಾನನೇ' ಎಂದು ಹೇಳಿದಂತಾಯಿತು.

**ಪಿರಿಂದೇನ್ ಪೆತ್ತಮಕ್ಕಳ್ ಪೆಂಡಿರ್ ಎನ್ರಿವರ್**
**ಪಿನ್‌ಉದವಾದು**
**ಆರಿಂದೇನ್ ನೀ ಪಣಿತ್ತ ಅರುಳ್ ಎನ್ನುಂ ಒಳ್‌ವಾಳ್**
**ಉರುವಿ**
**ಎರಿಂದೇನ್ ಐಂಬುಲನ್ ಕಳ್ ಇಡರ್‌ತೀರ ವೆರಿಂದು ವಂದು**
**ಶೆರಿಂದೇನ್ ನಿನ್ನಡಿಕ್ಕೇ ತಿರುವಿಣ್ಣಹರ್ ಮೇಯವನೇ ॥೪॥**

(ತಿರುವಿಣ್ಣಹರ್ ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಪೆತ್ತ ಮಕ್ಕಳ್ ಪೆಂಡಿರ್ ಎನ್ರ ಇವರ್) ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಹೆಂಡತಿಯರು ಇವರೇ ಮೊದಲಾದ ಬಂಧುಗಳು (ಪಿನ್ ಉದವಾದು ಅರಿಂದೇನ್) ಕೊನೆಯ ಕಾಲಕ್ಕೆ ಜೊತೆಯಾಗಲಾರರೆಂದು ತಿಳಿದುಕೊಂಡವನಾಗಿ (ಪಿರಿಂದೇನ್) ಅವರುಗಳನ್ನು ಬಿಟ್ಟು ಬಿಟ್ಟೆ. (ನೀ ಪಣಿತ್ತ ಅರುಳ್ ಎನ್ನುಂ) ನೀನು ಹಿಂದೆ ಉಪದೇಶಿಸಿದ ಚರಮಶ್ಲೋಕವೆಂಬುವ (ಒಳ್‌ವಾಳ್ ಉರುವಿ) ಪ್ರಕಾಶಮಾನವಾಗಿರುವ ಖಡ್ಗವನ್ನು ಒರೆಯಿಂದ ಹೊರಸೆಳೆದು (ಐಂಬುಲನ್ ಗಳ್ ಇಡರ್ ತೀರ) ಶಬ್ದಾದಿ ವಿಷಯಗಳಲ್ಲಿ ಉಂಟಾಗುವ ದುಃಖವು ಹೊರಟು ಹೋಗುವಂತೆ (ಎರಿಂದೇನ್) ಬೀಸಿ ಪ್ರಯೋಗಿಸಿದೆನು. (ವೆರಿಂದು ವಂದು)

ಆಕಿಂಚನನಾಗಿ ಬಂದು (ನಿನ್ ಅಡಿಕ್ಕೀ ಶೆರಿಂದೇನ್) ನಿನ್ನ ಶ್ರೀಪಾದಗಳಿಗೇ ಹೊಂದಿಕೊಂಡು ಇದ್ದುಬಿಟ್ಟಿದ್ದೇನೆ.

'ನಿಮಗೆ ಧರ್ಮಸಾಧನವಾದ ದೇಹವು ಒದಗದೆ ಹೋದರೆ ಹೋಗಲಿ! ನಿಮ್ಮ ಸಮಯದಲ್ಲಿ ನಿಮಗೊದಗಲು ನಿಮ್ಮ ಬಂಧು ವರ್ಗವಿದೆಯಲ್ಲಾ ! ಅವರಿಂದ ನಿಮಗೆ ಉಜ್ಜೀವನ ಸಿದ್ಧಿಸಬಹುದಲ್ಲಾ !'—ಹೀಗೆ ಹೇಳಿದರೆ ಅದು ಸಿದ್ಧಿಸದ ಕಾರಣ ಅದನ್ನು ಕೈಬಿಟ್ಟೆನೆನ್ನುತ್ತಾರೆ. ಸಂಸಾರದಲ್ಲಿ ಕೆಲವರನ್ನು ಬಂಧುಗಳೆಂದು ನೆನೆದು ಅವರಿಗೆ ಉಪಕಾರ ಮಾಡುವರು. ಅವರು ಹೇಳುವು ದಾದರೂ 'ನಮಗೆ ತಿಳಿಯದೆ ಎಲ್ಲಿಯಾದರೂ ಹಣ ಇಟ್ಟಿದ್ದರೆ ಅದನ್ನು ಪ್ರಾಣ ಹೋಗುವ ಮುನ್ನ ಬೇಗ ಹೇಳಿಬಿಡು'—ಎಂದು. ಒಂದು ಕಡೆ ಯಮಭಟ ರಾದರೆ ಮತ್ತೊಂದು ಕಡೆ ಈ ಆಭಾಸ ಬಂಧುಗಳು ಹಿಂಸಿಸುವರಷ್ಟೇ ? ಉಪಕಾರ ಮಾಡಿಸಿಕೊಳ್ಳುವಾಗ ಮಾಡಿಸಿಕೊಳ್ಳುವರು ಇವರು. ಆದರೆ ಕಷ್ಟ ಕಾಲದಲ್ಲಿ ಸಮಯಕ್ಕಾಗುವವರಲ್ಲ. 'ರಕ್ಷಕರು ನಮಗೆ ಯಾರು ?' ಎಂದು ಅನ್ವೇಷಿಸಿದಾಗ ಸ್ವಾಮಿ ಹೇಳಿದ—'ಮಾಮೇಕಂ ಶರಣಂ ವ್ರಜ' ಎಂಬ ನುಡಿ ತೋರಿಬರುವುದಷ್ಟೇ ?' ಇಂದ್ರಿಯಗಳ ವೇಗವನ್ನು ತಡೆದು ವಿಷಯಾ ಭಿಲಾಷೆಯನ್ನು ತೊರೆದು ನಿನ್ನಡಿಗೆ ಈಗ ಬಂದು ಸೇರಿದ್ದೇನೆ. ಅರ್ಜುನನಿಗೆ ಹೇಳಿದ ಮಾತು ಅವನೊಡನೆ ಸಂಬಂಧ ಇರುವವರೆಲ್ಲರಿಗೂ ಅನ್ವಯಿಸುವು ದಷ್ಟೇ ? ಶತ್ರುಗಳನ್ನು ಖಡ್ಗದಿಂದ ಛೇದಿಸುವಂತೆ ಅವನ ಅನುಗ್ರಹವೆಂಬ ಕತ್ತಿಯಿಂದ ಅಜ್ಞಾನ ಸಂಶಯಗಳನ್ನು ಕತ್ತರಿಸಿ ಹಾಕಿದ್ದೇನೆ.

**ಪಾಣ್ ತೇನ್ ವಂಡುಅರ್ರೈಯುಂ ಕುಟಿಲಾರ್‌ಹಳ್ ಪಲ್ಲಾಂಡು**
**ಇಶೈಪ್ಪ**
**ಆಂಡಾರ್ ವೈಯಮೆಲ್ಲಾಂ ಅರಶಾಹಿ ಮುನ್ ಆಂಡವರೇ**
**ಮಾಂಡಾರ್ ಎನ್ರುವಂದಾರ್ ಅಂದೋ ಮನ್ನೈವಾಟ್ಕೈ**
**ತನ್ನೈ**
**ವೇಂಡೇನ್ ನಿನ್ನಡೈನ್ದೇನ್ ತಿರುವಿಣ್ಣಹರ್ ಮೇಯವನೇ**
**॥೫॥**

(ಪಾಣ್) ಇಂಪಾಗಿರುವ ಗಾನವನ್ನುಳ್ಳವೂ (ತೇನ್) ಮಕರಂದವನ್ನು ಹೀರುವುವೂ ಆದ (ವಂಡು) ತುಂಬಿಗಳು (ಅರ್ರೈಯುಂ ಕುಟಿಲಾರ್‌ಹಳ್) ಎರಗಿ

ರ್ಯೇಂಕರಿಸುವ ತಲೆಗೂದಲನ್ನುಳ್ಳ ಸ್ತ್ರೀಯರುಗಳು (ಪಲ್ಲಾಂಡು ಇಶೈಪ್ಪ) ಮಂಗಳಾಶಾಸನವನ್ನು ಮಾಡುತ್ತಿರಲು (ಅರಶು ಆಹಿ) ರಾಜರುಗಳಾಗಿದ್ದು ಕೊಂಡು (ವೈಯಂ ಎಲ್ಲಾಂ ಆಂಡಾರ್) ಸಮಸ್ತ ಭೂಮಂಡಲವನ್ನೂ ಆಳಿದವರುಂಟು. (ಮುನ್ ಆಂಡವರೇ ಮಾಂಡಾರ್) ಹೀಗೆ ಮೊದಲು ಆಳುತ್ತಾ ಬಂದವರುಗಳೇ ಕಣ್ಮರೆಯಾಗಿ ಹೋದರು (ಎನ್ರುವಂದಾರ್) ಎಂದು ಹೇಳುವದಕ್ಕೆ ಆಸ್ಪದವಾಗಿರುತ್ತಿದ್ದಾರೆ (ಅಂದೋ) ಅಯ್ಯೋ ! (ತಿರುವಿಣ್ಣಹರ್ ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ (ಮನೈವಾೞ್ಕೈತನ್ನೈ ವೇಂಡೇನ್) ಹೀಗೆ ಅಸ್ಥಿರವಾದ ಸಂಸಾರದ ಬಾಳ್ವೆಯನ್ನು ನಾನು ಬಯಸುವುದಿಲ್ಲ. (ನಿನ್ ಅಡೈಂದೇನ್) ನಿನ್ನನ್ನೇ ನಾನು ಬಂದು ಆಶ್ರಯಿಸಿದ್ದೇನೆ.

'ಬಂಧುಗಳು ಒದಗುವುದಿಲ್ಲವೆಂದಿರಿ. ಕೊರೆಯೇ ಆಗದ ಐಶ್ವರ್ಯ ಉಂಟಾದರೆ ಬಂಧುಗಳೆಲ್ಲ ಬಂದು ಒದಗುವರಲ್ಲಾ'–ಎಂದರೆ 'ಆ ಐಶ್ವರ್ಯವು ಸ್ಥಿರವಾಗಿದ್ದರೆ ತಾನೇ ಹಾಗಾಗುವುದು'– ಎನ್ನುತ್ತಾರೆ ಈ ಪಾಶುರದಲ್ಲಿ. ಮಹಾಬಲರೂ, ಮಹಾವೀರ್ಯರೂ, ಅನಂತ ಧನಸಂಚಯವುಳ್ಳವರೂ ಕಾಲದ ಪ್ರವಾಹದಲ್ಲಿ ಹೇಳಹೆಸರಿಲ್ಲದಂತೆ ಕೊಚ್ಚಿಕೊಂಡು ಹೋಗಿ ಬಿಟ್ಟಿದ್ದಾರೆ. 'ಅಭಿಷಿಕ್ತನಾದ' ಎಂದು ಓಲೆಯನ್ನು ಕಳುಹಿಸುವಾಗಲೇ 'ಮುಗಿದು ಹೋದನು' ಎಂದು ಬರೆದು ತಿಳಿಸುವುದಕ್ಕೂ ಅವಕಾಶವಿಲ್ಲದಂತೆ ಮುಗಿದು ಹೋಗುತ್ತಾನೆ. ಆಶ್ರಿತರಿಗೆ ಕೈಂಕರ್ಯ ಸಾಮ್ರಾಜ್ಯವನ್ನು ಅನುಗ್ರಹಿಸುವುದಕ್ಕೆ ತಾನೇ ಈ ಕ್ಷೇತ್ರದಲ್ಲಿ ಅಪನು ಬಂದು ನೆಲೆನಿಂತಿರುವುದು.

**ಕಲ್ಲಾ ಐಂಬುಲನ್‌ಹಳ್ ಅವೈ ಕಂಡವಾರು ಶೆಯ್ಯಹಿಲ್ಲೇನ್**
**ಮುಲ್ಲಾ ಮಲ್ ಅಮರುಳ್ ಮಲ್ಲರ್‌ಮಾಳ ಮಲ್ ಅಡರ್ತ**
**ಮುಲ್ಲಾ ಮುಲ್ಲಲ್ ಅವರ್‌ಶೀರ್ ಮದಿಳ್ ನೀರ್ ಇಲಂಗೈ**
**ಅಟ್ಟಿತ್ತ**
**ವಿಲ್ಲಾ ನಿನ್ನಡೈನ್ದೇನ್ ತಿರುವಿಣ್ಣಹರ್ ಮೇಯವನೇ ॥೬॥**

(ಕಲ್ಲಾ) ಶಾಸ್ತ್ರವು ಹೇಳಿದಂತೆ ಅಡಗಿಸುವುದನ್ನು ಕಲಿಯುವುದಕ್ಕಾಗದ (ಐಂಬುಲನ್‌ಹಳ್ ಅವೈ) ಪಂಚೇಂದ್ರಿಯಗಳು (ಕಂಡ ಆರು ಶೆಯ್ಯಹಿಲ್ಲೇನ್)

ಮಾಡಲು ಹೇಳಿದ ರೀತಿಯಲ್ಲಿ ನಾನು ವರ್ತಿಸುವುದಿಲ್ಲ. (ಮಲ್ಲಾ) ಬಲ ಯುತನಾದ ದೇವನೇ, (ಮಲ್ ಅಮರುಳ್) ಬಹಳ ಭಯಂಕರವಾದ ಯುದ್ಧ ದಲ್ಲಿ (ಮಲ್ಲರ್ಮಾಳ) ಚಾಣೂರನೇ ಮೊದಲಾದ ಮಲ್ಲರುಗಳು ನಾಶವಾಗು ವಂತೆ (ಮಲ್ಲರ್ಅಡರ್ತ್ತ) ಅವರ ಬಲವನ್ನು ಹೋಗಲಾಡಿಸಿದ (ಮಲ್ಲಾ) ಮಲ್ಲಯುದ್ಧ ವಿಶಾರದನೇ, (ಮಲ್ಲರ್ ಅಮ್ಶೀರ್) ಅತ್ಯತಿಶಯವಾದ ಬೆಲೆವಾದ ಐಶ್ವರ್ಯವನ್ನು ಹೊಂದಿದುದೂ (ಮದಿಳ್) ಕೋಟೆಗಳಿಂದ ಸುತ್ತುವರಿಯಲ್ಪಟ್ಟಿದೂ(ನೀರ್)ಸುತ್ತಲೂ ಆಳವಾದ ಕಂದಕಗಳನ್ನುಳ್ಳದೂ ಆದ (ಇಲಂಗೈ) ಲಂಕಾಪಟ್ಟಣವನ್ನು (ಅಟ್ಟಿತ್ತವಿಲ್ಲಾ) ನಾಶಗೊಳಿಸಿದ ಶಾರ್ಙ್ಗವನ್ನು ಕೈಲಿ ಹಿಡಿದಿರುವವನೇ, (ತಿರುವಿಣ್ಣಹರ್ ಮೇಯವನೇ) ತಿರು ವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ನಿನ್ ಅಡೈಂದೇನ್) ನಿನ್ನನ್ನು ನಾನು ಬಂದು ಸೇರಿದ್ದೇನೆ.

'ಈಶ್ವರಾಯ ನಿವೇದಿತಂ' ಎಂದು ಹೇಳಿರುವಂತೆ ಇರುವ ಇಂದ್ರಿಯ ಗಳನ್ನು ಅವುಗಳ ದಾರಿಯಲ್ಲಿ ಹರಿಬಿಟ್ಟು ಕ್ಲೇಶಕ್ಕೊಳಗಾಗುವಿರಲ್ಲವೇ ? ಅವುಗಳು ನಿಮಗಧೀನವಾದರೆ ತಾನೇ ನನ್ನ ಬಳಿ ಬರಬಹುದು ?'– ಹೀಗೆ ಹೇಳಿದರೆ ಆಳ್ವಾರ್ ಹೇಳುತ್ತಾರೆ–'ಮುಂದೆ ಬರುವ ಅನರ್ಥಗಳನ್ನು ನೆನೆದಾಗ ಆ ಇಂದ್ರಿಯಗಳ ಹಾದಿಯಲ್ಲಿ ಹೋಗಲು ನಾನು ಸಿದ್ಧವಿಲ್ಲ'– ಎಂದು. 'ಸರ್ವ ಶಕ್ತನಾದ ನಿನಗೆ ಆ ಇಂದ್ರಿಯಗಳ ಹಿಡಿತಕ್ಕೆ ನಾನು ಸಿಕ್ಕದಂತೆ ಮಾಡುವ ಸಾಮರ್ಥ್ಯವಿಲ್ಲವೇ ?' –ಎಂದು ಆಳ್ವಾರ್ ಕೇಳುತ್ತಾರೆ. ಅಪ್ರಧೃಷ್ಯವಾಗಿದ್ದ ಲಂಕೆಯನ್ನು ಧೂಳೀಪಟ ಮಾಡಿದ ಬಿಲ್ಲನ್ನು ಉಳ್ಳವನಲ್ಲವೇ ನೀನು ? ನನ್ನನ್ನು ಕೊಲ್ಲುತ್ತಿರುವ ಇಂದ್ರಿಯಗಳ ಕೊಬ್ಬನ್ನೂ ಅಸದ್ವಿಷಯ ಪ್ರವೃತ್ತಿ ಯನ್ನೂ ಹೋಗಲಾಡಿಸಿ ನನ್ನನ್ನು ನಿನ್ನ ಕಿಂಕರನನ್ನಾಗಿ ಮಾಡಿಕೊಳ್ಳಬೇಕು.

**ವೇರಾ ಯಾನ್ ಇರಂದೇನ್ ವೆಹುಳಾದು ಮನಂಕೊಳ್**
**ಎಂದಾಯ್**
**ಆರಾ ವೆವ್‌ನರಕತ್ತು ಅಡಿಯೇನೈ ಇಡಕ್ಕರುದಿ**
**ಕೂರಾ ಐವರ್ ವಂದು ಕುಮೈಕ್ಕ ಕುಡಿವಿಟ್ಟವರ್ಕ್ಕೈ**
**ತೇರಾದು ಉನ್ನಡೈಂದೇನ್ ತಿರುವಿಣ್ಣಹರ್ ಮೇಯವನೇ**

॥೭॥

(ತಿರುವಿಣ್ಣಹರ್ ಮೇಯವನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ, (ಎಂದಾಯ್) ನನ್ನ ಸ್ವಾಮಿಯೇ, (ಯಾನ್) ನಾನು (ವೇರು ಆ) ವಿಲಕ್ಷಣವಾಗಿ (ಇರನ್ದೇನ್) ಯಾಚಿಸುತ್ತಿದ್ದೇನೆ. (ವೆಘುಳಾದು) ಕೋಪಗೊಳ್ಳದೆ (ಮನಕ್ಕೊಳ್) ನಿನ್ನ ಮನಸ್ಸಿಗೆ ತೆಗೆದುಕೊಳ್ಳಬೇಕು, (ಐವರ್) ಪಂಚೇಂದ್ರಿಯಗಳು (ಅಡಿಯೇನೈ) ನನ್ನನ್ನು (ಆರಾ ವೆಮ್ ನರಕತ್ತು) ಕೊನೆಯೇ ಇಲ್ಲದ ಕ್ರೂರವಾದ ಸಂಸಾರ ನರಕದಲ್ಲಿ (ಇಡಕರುದಿ) ತಳ್ಳಲು ನೆನೆದು (ಕೂರು ಆ) ನನ್ನನ್ನು ತಮಗೆ ಬರುವ ಭಾಗವೆಂದು ತಿಳಿದುಕೊಂಡು (ವಂದು) ನನ್ನ ಬಳಿ ಬಂದು (ಕುಮೈಕ್ಕ) ಹಿಂಸಿಸಲು (ಕುಡಿವಿಟ್ಟಪರ್ರೈ) ಒಕ್ಕಲಿರಲು ಬಂದಿವೆ. ಆ ಪಂಚೇಂದ್ರಿಯಗಳನ್ನು (ತೀರಾದು) ನಂಬದವನಾಗಿ (ಉನ್‌ಅಡ್ಮೈಂದೇನ್) ನಿನ್ನ ಪಾದಗಳಲ್ಲಿ ಶರಣಾಗಿದ್ದೇನೆ,

ನಾನು ಈಗ ದೃಪ್ತನಾಗಿ ನಿಮ್ಮ ಬಳಿ ಬರುತ್ತಿಲ್ಲ. ಆದರೆ ಆರ್ತನಾಗಿ ಬಂದು ಬೇಡುತ್ತಿದ್ದೇನೆ. ಆರ್ತಿಯು ಅತಿಶಯವಾಗಿರುವುದರಿಂದ ಕೂಡಲೇ ಪರಿಹಾರ ದೊರಕದಿದ್ದರೆ ನಾನು ಉಳಿಯಲಾರೆನೆಂಬ ಆತಂಕದೊಡನೆ ನಿನ್ನಲ್ಲಿ ಬೇಡುತ್ತಿದ್ದೇನೆ. ನೀನು ರಕ್ಷಣೋನ್ಮುಖನಾಗಿದ್ದಾಗ ವೈಮುಖ್ಯವನ್ನು ಮಾಡಿ ಅಲೆದು ಬಸವಳಿದ ನಾನು ಇಂದು ನಿನ್ನಲ್ಲಿ ಯಾಚಿಸುತ್ತಿದ್ದೇನೆ. ನೀನು ನನ್ನನ್ನು ಈಗ ಅನಾದರಿಸಬೇಡ. 'ಇಂದು ಅನನ್ಯಗತಿಯಾಗಿ ಬಂದಿರುವ ಇವನು ನಾನು ಅನಾದಿ ಕಾಲದಿಂದ ಪರಿಗ್ರಹಿಸಬೇಕೆಂದು ಯತ್ನಿಸುತ್ತಿದ್ದರೂ ನನ್ನನ್ನು ಕಡೆಗಣಿಸಿ ನಿಷೇಧಿಸಿ ಹೋದವನಲ್ಲವೇ ?'– ಎಂದು ನನ್ನ ಪೂರ್ವ ವೃತ್ತವನ್ನು ನೆನೆದು ನನ್ನ ಮೇಲೆ ಕೋಪಮಾಡಬೇಡ. 'ಸರ್ವ ದೋಷಯುಕ್ತನಾದ ಇವನು ನಿರ್ದೋಷಿಯ ಹಾಗೆ ನನ್ನ ಕಾಲನ್ನು ಹಿಡಿಯುವುದೋ'–ಎಂದು ಸಿಟ್ಟುಮಾಡದೆ ನನ್ನ ಈ ಯಾಚನೆಯನ್ನು ಕಿವಿಯ ಮೇಲೆ ಹಾಕಿಕೊಂಡು ನನ್ನನ್ನು ರಕ್ಷಿಸಬೇಕು. 'ಪಿತೇವ ಪುತ್ರಸ್ಯ'–ಎಂದು ಹೇಳಿದಂತೆ ನನ್ನ ದೋಷವನ್ನು ಕ್ಷಮಿಸಬೇಕು. ನನಗೆ ಕಳೆದುಕೊಳ್ಳುವುದಕ್ಕಾಗದ ದಾಯಭಾಗದಂತೆ ಬರಬೇಕಾಗಿರುವ ಪ್ರಾಪ್ತಿಯನ್ನು ನಾನು ಬೇಡುತ್ತಿರುವೆ ನಷ್ಟೇ ?

ನನ್ನ ಇಂದ್ರಿಯಗಳ ಸಂಕಲ್ಪ ಬಹಳ ಕ್ರೂರವಾದುದಾಗಿದೆ. ಯಮನ ದಂಡನೆ ಹಾಗಿರಲಿ. ಕೊರೆಯಾಗದ ನರಕವಾಗಿವೆ ಈ ಸಂಸಾರ. ಅಹಂಕಾರ

ಮಮಕಾರಗಳ ತವರಾದ ಸಂಸಾರದಲ್ಲಿ ತಳ್ಳಬೇಕೆಂಬುದು ಅವುಗಳ ಸಂಕಲ್ಪ ವಾಗಿದೆ. 'ನಾನು ನಾನು' ಎಂದು ಒಂದೊಂದು ಇಂದ್ರಿಯವೂ ಪೀಡಿಸುತ್ತಿದೆ. ಪ್ರಬಲರಾದ ಐವರು ದುರ್ಬಲನನ್ನು ನಾನಾಕಡೆಗಳಲ್ಲಿ ಎಳೆದಾಡುವಂತಾಗಿದೆ ಇದು. ಅವುಗಳ ಸಹಾಯದಿಂದ ನಿನ್ನನ್ನು ನಾನು ಪಡೆದುಕೊಳ್ಳುವುದಕ್ಕಾಗ ಲೆಂದು ನೀನು ಅವುಗಳನ್ನು ಕೊಟ್ಟೆ. ಆದರೆ ಅವುಗಳು ನಿನ್ನ ಸಂಬಂಧದಿಂದ ಬೇರ್ಪಡಿಸಿ ವಿಷಯಗಳಲ್ಲಿ ತೊಡಗಿಸಿ ನನ್ನನ್ನು ಮುಗಿಸಿ ಬಿಡಲು ಹವಣಿಸುತ್ತಿವೆ. ಅವುಗಳಲ್ಲಿ ವಿಶ್ವಾಸ ಹೊಂದಲು ಒಳ್ಳೆಯದಾಗದು. ವಿಶ್ವಸನೀಯನಾದ ನೀನು ಸನ್ನಿಹಿತನಾಗಿರುವಾಗ ಭಯಾವಹವಾದ ಪದಾರ್ಥಗಳಿಗೆ ಎಡೆಕೊಟ್ಟು ಅಲೆಯಬೇಕೇ ?

**ತೀವಾಯೆ್ ವಲ್‌ವಿನ್ಯೆಯಾರ್ ಉಡನ್ ನಿನ್ರು ಶಿರಂದವರ್ ಪೋಲ್**
**ಮೇವಾ ವೆವ್‌ನರಕತ್ತು ಇಡಉತ್ತು ವಿರೈನ್ದು ವಂದಾರ್**
**ಮೂವಾ ವಾನವರ್‌ತವ್ ಮುದಲ್ವಾ ಮತಿಕೋಳ್‌ವಿಡುತ್ತ**
**ತೇವಾ ನಿನ್ನಡೈನ್ದೇನ್ ತಿರುವಿಣ್ಣಹರ್ ಮೇಯವನೇ ॥೮॥**

(ತೀವಾಯ್) ಬೆಂಕಿಯನ್ನು ಉಗುಳುವಂತಹ ಬಾಯಿಯನ್ನುಳ್ಳ (ವಲ್‌ವಿನ್ಯೆ ಯಾರ್) ಕ್ರೂರವಾದ ಪಾಪಗಳು (ಶಿರಂದವರ್ ಪೋಲ್) ಬಂಧುಗಳ ಹಾಗೆ ಹೋಲುತ್ತಾ (ಉಡನ್ ನಿನ್ರು) ನನ್ನೊಡನೆ ಅಗಲದೆ ಸೇರಿರುತ್ತಾ (ಮೇವಾ ವೆವ್ ನರಕತ್ತು ಇಡಉತ್ತು) ಹೊಂದದ ಕ್ರೂರವಾದ ನರಕದಲ್ಲಿ ನನ್ನನ್ನು ತಳ್ಳಲು ಉದ್ದೇಶಿಸಿ (ವಿರೈಂದು ವಂದಾರ್) ತೀವ್ರವಾದ ವೇಗದೊಡನೆ ಬಂದಿವೆ. (ಮೂವಾ) ಜರೆ ಮೊದಲಾದ ವಿಕಾರವಿಲ್ಲದ (ವಾನವರ್‌ತವ್ ಮುದಲ್ವಾ) ದೇವಾದಿಗಳಿಗೆ ದೇವನಾದವನೇ, (ಮತಿಕೋಳ್ ವಿಡುತ್ತ್ತೇವಾ) ಸ್ವರೂಪಜ್ಞಾನದ (ಚಂದ್ರನ) ಕ್ಷಯರೋಗವನ್ನು ಹೋಗಲಾಡಿಸಿದವನೇ, (ತಿರುವಿಣ್ಣಹರ್ ಮೇಯವನೇ, ನಿನ್ ಅಡೈಂದೇನ್) ತಿರುವಿಣ್ಣಹರ್ ಕ್ಷೇತ್ರ ದಲ್ಲಿರುವವನೇ, ನಿನ್ನನ್ನು ಬಂದು ಆಶ್ರಯಿಸಿದ್ದೇನೆ.

ತೀವಾಯ್–ಬೆಂಕಿಯನ್ನುಗುಳುವ ಬಾಯಿಯನ್ನುಳ್ಳ ಪಾಪಗಳು ಎಂದರೆ ಪ್ರಾಯಶ್ಚಿತ್ತದಿಂದಲೂ ಪರಿಹರಿಸುವುದಕ್ಕಾಗದಂತಹ ಪಾಪಗಳು.

ನಿರುಪಾಧಿಕ ಬಂಧುಗಳ ಹಾಗೆ ಅವು ನನ್ನನ್ನು ಬಿಟ್ಟಿರದೆ ಇವೆ. ಒಂದು ಕಾಲದಲ್ಲಿಯೂ ಕೈಬಿಡದ ಸೋದರರ ಹಾಗೆ ಅವು ಇವೆ. 'ಆನಂದಮಯಃ' ಎಂಬುವ ವಸ್ತುವನ್ನು ಅನುಭವಿಸುವುದಕ್ಕೆ ಯೋಗ್ಯತೆಯನ್ನುಳ್ಳವರಿಗೆ ಸ್ವಲ್ಪವೂ ಹೊಂದದ ನರಕದಲ್ಲಿ ತಳ್ಳಲು ಅವು ಹವಣಿಸಿವೆ. ಇಲ್ಲಿಯ ದುಃಖ ವನ್ನನುಭವಿಸಿದ ಮೇಲೆ ಹೋಗಿ ಅನುಭವಿಸುವ ನರಕ ಅದು. ಅದರ ವೇಗ ಅಸಹ್ಯವಾಗಿದೆ. ಕರ್ಮಪ್ರವಾಹವು ಅನಾದಿಯಾದುದಷ್ಟೇ ? 'ಅದು ನಿನ್ನ ಕರ್ಮಫಲವಷ್ಟೇ? ನಾವೇನು ಮಾಡೋಣ' –ಎಂದು ಸ್ವಾಮಿ ಹೇಳಿದರೆ ಅದಕ್ಕೆ ಉತ್ತರವಾಗಿ ಹೇಳುತ್ತಾರೆ– 'ನಿತ್ಯಸೂರಿಗಳನ್ನು ಅಕರ್ಮವಶ್ಯ ರನ್ನಾಗಿ ಮಾಡಿ ನಿನ್ನ ನಿತ್ಯಾನುಭವವನ್ನು ಅವರಿಗೆ ಕೊಡುತ್ತಿರುವಿ. ಸೋದರರಲ್ಲಿ ಒಬ್ಬನು ಪಟ್ಟಾಭಿಷಿಕ್ತನಾಗಿರಲು ಮತ್ತೊಬ್ಬನು ಸೆರೆಮನೆ ಯಲ್ಲಿರುವಂತಾಯಿತು ಇದು ! ಸ್ವರೂಪ ಜ್ಞಾನದ ಕ್ಷಯವನ್ನು ಹೋಗಲಾಡಿ ಸುವನು ನೀನು. ಆದರಿಂದ ನಿನ್ನನ್ನು ಆಶ್ರಯಿಸಿದ್ದೇನೆ ಪಾಪಗಳನ್ನು ಕಳೆದು ಹಾಕಿ ನಿನ್ನಡಿಗಳಿಗೇ ನನ್ನನ್ನು ಸೇರಿಸಿಕೊಳ್ಳಬೇಕು.'

**ಪೋದಾರ್ ತಾಮರೈಯೊಳ್ ಪುಲವಿ ಕುಲವಾನವರ್‌ತವ್**
**ಕೋದಾ ಕೋದಿಲ್ ಶೆಂಗೋಲ್ ಕುಡೈಮನ್ನರ್ ಇಡೈನಡಂದ**
**ತೂದಾ ತೂನೊಟಿಯಾಯ್ ಶುಡರ್‌ಪೋಲ್ ಎನ್ಮನತ್ತು**
**ಇರುಂದ**
**ವೇದಾ ನಿನ್ನಡೈಂದೇನ್ ತಿರುವಿಣ್ಣಹರ್ ಮೇಯವನೇ ॥೯॥**

(ಪೋದು ಆರ್ ತಾಮರೈಯಾಳ್) ಸ್ವಕಾಲದಲ್ಲಿ ಅರಳಿದ ತಾವರೆಯು ಹೂವನ್ನು ವಾಸಸ್ಥಾನವನ್ನಾಗಿ ಉಳ್ಳ ಶ್ರೀದೇವಿಯು (ಪುಲವಿ) ಭೂದೇವಿಯು (ಕುಲಂವಾನವರ್‌ತವ್) ಶ್ರೇಷ್ಠರಾದ ನಿತ್ಯಸೂರಿಗಳ(ಕೋದಾ) ಕೊಂಡಾಟಕ್ಕೆ ವಿಷಯ ಭೂತನಾದವನೇ. (ಕೋದು ಇಲ್ ಶೆಂಗೋಲ್) ತಡೆಯಿಲ್ಲದೆ ಅಧಿ ಕಾರ ದಂಡವನ್ನು ನಡೆಸುವವರಾಗಿ (ಕುಡೈ) ಕೊಡೆಯನ್ನುಳ್ಳ (ಮನ್ನರ್‌ಇಡೈ) ದುರ್ಯೋಧನಾದಿ ರಾಜರುಗಳ ಬಳಿಗೆ (ನಡಂದ ತೂದಾ) ದೂತನಾಗಿ ನಡೆದು ಹೋದವನೇ, (ತೂವೊಟಿಯಾಯ್) ಪ್ರಿಯವಾದ ಮಾತುಗಳನ್ನು ಆಡುವವನೇ. (ಶುಡರ್‌ಪೋಲ್ ಎನ್‌ಮನತ್ತು ಇರುಂದ ವೇದಾ) ದೀಪ

ಜ್ವಾಲೆಯಂತೆ ಜ್ವಲಿಸುತ್ತಾ, ನನ್ನ ಮನಸ್ಸಿನಲ್ಲಿರುವ ವೇದ ವೇದ್ಯನೇ, (ತಿರು ವಿಣ್ಣ ಹರ್ ಮೇಯುವನೇ ನಿನ್ ಅಡೈಂದೇನ್) ತಿರುವಿಣ್ಣ ಹರ್ ಕ್ಷೇತ್ರದಲ್ಲಿರು ವವನೇ, ನಿನ್ನಲ್ಲಿ ನಾನು ಶರಣು ಹೋಗಿದ್ದೇನೆ.

ಆಗತಾನೇ ಅರಳಿದ ತಾವರೆಯ ಹೂವಿನಲ್ಲಿರುವ ಶ್ರೀದೇವಿಯೂ ಭೂದೇವಿಯೂ ನಿತ್ಯಸೂರಿಗಳೂ ಆದರದಿಂದ ಅವನನ್ನು ಕೊಂಡಾಡುವವರಾಗಿ ದ್ದಾರೆ. ದೇವಿಯರು ಮತ್ತು ನಿತ್ಯಸೂರಿಗಳು ಇವರನ್ನು ಪುರುಷಕಾರವನ್ನಾಗಿ ಹೊಂದಿ ಶರಣಾಗತಿ ಮಾಡುತ್ತಿದ್ದಾರೆ ಇಲ್ಲಿ. ಪಾಂಡವರ ಛತ್ರಚಾಮರಾದಿಗಳನ್ನು ಕಿತ್ತುಕೊಂಡು ಮುತ್ತಿನಸತ್ತಿಗೆಯ ನೆರಳಲ್ಲಿ ಇರುತ್ತಾ, ಅಪ್ರತಿಹತವಾದ ಆಜ್ಞೆ ಯನ್ನುಳ್ಳವರೂ ಭೂಮಂಡಲಕ್ಕೆಲ್ಲಾ ತಾವೇ ರಾಜರುಗಳಾಗಿ ಮೆರೆಯುತ್ತಿ ದ್ದವರೂ ಆದ ದುರ್ಯೋಧನಾದಿಗಳ ನಡುವೆ, ಕತ್ತಿನಲ್ಲಿ ಒಂದು ಓಲೆಯನ್ನು ಕಟ್ಟಿಕೊಂಡು ದೂತನಾಗಿ ಹೋದ ಆ ಸ್ವಾಮಿ. ಅಪ್ರತಿಹತವಾದ ಆಜ್ಞೆ ಉಳ್ಳವರು ಎಂಬ ವಿಶೇಷಣವನ್ನು ಪಾಂಡವರಿಗೂ ಅನ್ವಯಿಸಿ ಅರ್ಥಮಾಡ ಬಹುದು. ದುರ್ಯೋಧನನ ಸಭೆಯಲ್ಲಿ ನಿರ್ದುಷ್ಟವಾದ ನುಡಿಗಳನ್ನಾಡಿದವ ನವನು. 'ಮಾಮೇಕಂ ಶರಣಂ ವ್ರಜ' 'ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ' ಎಂದು ಹಿತವಚನವನ್ನಾಡಿದವನವನು, ಅವನು ವೇದೈಕಸಮಧಿಗಮ್ಯ. ಅಂಥ ಆ ಸ್ವಾಮಿ ಎಲ್ಲರೂ ತನ್ನನ್ನು ಕಣ್ಣಾಣಿಯ ಕಾಣುವುದಕ್ಕಾಗುವಂತೆ ತಿರುವಿಣ್ಣ ಹರ್ ಕ್ಷೇತ್ರದಲ್ಲಿ ನೆಲಸಿದ್ದಾನೆ. ಅವನ ಪಾದಗಳಲ್ಲಿ ನಾನು ಶರಣಾಗಿದ್ದೇನೆ ಎನ್ನುತ್ತಾರೆ ಆಳ್ವಾರ್ ಅವರು,

**ತೇನಾರ್ ಪೂಂಪುರವಿನ್ ತಿರುವಿಣ್ಣಹರ್ ಮೇಯವನೈ**
**ವಾನಾರುಮದ್ ಮದಿಳ್‌ಶೂಟ್ ವಯಲ್‌ಮಂಗೈಯರ್ ಕೋನ್**
**ಮರುವಾರ್**
**ಊನ್ ಆರ್ ವೇಲ್ ಕಲಿಯನ್ ಒಲಿಶೆಯ್ ತಮಿಳ್**
**ಮಾಲೈವಲ್ಲಾರ್**
**ಕೋನಾಯ್ ವಾನವರ್ ತಮ್‌ಕೊಡಿಮಾನಹರ್**
**ಕೂಡುವರೇ ॥೧೦॥**

(ತೇನ್ ಆರ್ ಪೂಪುರವಿನ್) ಮಕರಂಡದಿಂದ ಪೂರ್ಣವಾದ ಹೂಗಳನ್ನುಳ್ಳ ತೋಪುಗಳನ್ನುಳ್ಳ (ತಿರುವಿಣ್ಣಹರ್ ಮೇಯುವನ್ನೈ) ತಿರುವಿಣ್ಣಹರ್ ಕ್ಷೇತ್ರದಲ್ಲಿ

ನಿತ್ಯವಾಸಮಾಡುತ್ತಿರುವ ಪರಮಾತ್ಮನನ್ನು ಕುರಿತಂತೆ (ವಾಣ್‌ಅರುಂ ಮದಿಳ್ ವಯಲ್ ಶೂಟ್ ಮಂಗೈಯರ್ ಕೋನ್) ಆಕಾಶವನ್ನೂ ವ್ಯಾಪಿಸಿರುವ ಕೋಟೆಗಳಿಂದಲೂ, ಗದ್ದೆಗಳಿಂದಲೂ ಸುತ್ತುವರಿಯಲ್ಪಟ್ಟ ತಿರುಮಂಗೈ ಕ್ಷೇತ್ರ ದಲ್ಲಿರುವವರಿಗೆ ಸ್ವಾಮಿಯಾದವರೂ (ಮರುವಾರ್ ಊನ್ ಆರ್ ವೇಲ್ ಕಲಿ ಯನ್) ಶತ್ರುಗಳ ಶರೀರವನ್ನು ಭೇದಿಸುವ ವೇಲಾಯುಧವನ್ನು ಹಿಡಿದವರೂ ಆದ ಆಳ್ವಾರ್ರವರು (ಒಲಿಶೆಯ್ ತಮಿಳ್‌ಮಾಲೈ) ಅನುಗ್ರಹಿಸಿದ ಈ ತಮಿಳು ಪಾಶುರಗಳನ್ನು (ವಲ್ಲಾರ್) ಹಾಡಬಲ್ಲವರು (ಕೋನ್ ಆಯ್) ಶ್ರೀವೈಕುಂಠ ನಿರ್ವಾಹಕರಾಗಿದ್ದುಕೊಂಡು (ವಾನವರ್‌ತವರ್) ನಿತ್ಯಸೂರಿಗಳನ್ನುಳ್ಳದೂ (ಕೊಡಿಮಾನಹರ್) ಧ್ವಜಗಳಿಂದ ಅಲಂಕೃತವಾಗಿ ಉತ್ಕೃಷ್ಟವಾಗಿರುವುದೂ ಆದ ಶ್ರೀವೈಕುಂಠವನ್ನು (ಕೂಡುವರ್) ಸೇರುವರಾಗುತ್ತಾರೆ.

ಆಕಾಶದ ಅವಕಾಶವನ್ನೆಲ್ಲಾ ವ್ಯಾಪಿಸಿರುವಂತೆ ಉನ್ನತವಾದ ಕೋಟೆ ಗಳಿಂದ ಆವೃತವಾಗಿರುವುದೂ ಗದ್ದೆಗಳನ್ನು ಉಳ್ಳದೂ ಆದ ತಿರುಮಂಗೈ ನಗರಕ್ಕೆ ನಿರ್ವಾಹಕರಾದವರು ಶ್ರೀ ತಿರುಮಂಗೈ ಆಳ್ವಾರ್ ಅವರು. ಭಗವ ದ್ಭಾಗವತರ ವಿಷಯದಲ್ಲಿ ಪ್ರೇಮವಿಲ್ಲದ ಶತ್ರುಗಳ ಶರೀರದಲ್ಲಿ ತನ್ನ ಕೋಪ ವನ್ನು ತೀರಿಸಿಕೊಳ್ಳುವ ವೇಲಾಯುಧವನ್ನು ಕೈಲಿ ಹಿಡಿದವರವರು. ಅವರು ಹಾಡಿದ ಈ ಹತ್ತು ಪಾಶುರಗಳನ್ನು ಬಲ್ಲವರು ನಿತ್ಯ ವಿಭೂತಿಯಲ್ಲಿರುವ ನಿತ್ಯಸೂರಿಗಳೊಡನೆ ಬಾಳಲು 'ದೇವಾನಾಂ ಪೂಃ' ಎಂದು ಹೇಳಲ್ಪಟ್ಟ ಶ್ರೀ ವೈಕುಂಠವನ್ನು ಪಡೆಯುವರಾಗುತ್ತಾರೆ.

—★—

### ಆರನೆಯ ಪತ್ತು—ಮೂರನೆಯ ತಿರುಮೊಳಿ

## 'ತುರಪ್ಪೇನ್'

### ಪ್ರವೇಶ

'ನನಗೆ ಸಂಸಾರದ ಬಾಳ್ವೆ ಬೇಡ'—ಎಂದು ಆಳ್ವಾರ್ ಆ ಪರಮಾತ್ಮನ ಮನಸ್ಸಿಗೆ, 'ಇವನು ಸಹೃದಯವಾಗಿ ಮನಃಪೂರ್ವಕವಾಗಿ ಹೇಳುತ್ತಿದ್ದಾನೆ'—

ಎಂದು ತಿಳಿಯುವಂತೆ ವಿಜ್ಞಾಪಿಸಿದರು. ಸಂಸಾರದಿಂದ ತಾವು ಪಟ್ಟ ಕ್ಲೇಶ ವನ್ನೂ ತೋಡಿಕೊಂಡರು. ಈ ಅನಿಷ್ಟವಾದ ಬಾಳ್ವೆಯನ್ನು ಹೋಗಲಾಡಿಸಿ ನನಗೆ ಇಷ್ಟವಾದ ನಿನ್ನ ಪಾದದ್ವಯಗಳ ಅಡಿಯಲ್ಲಿ ಬಾಳುವ ಬಾಳ್ವೆಯನ್ನು ಕರುಣಿಸಬೇಕೆಂದು ಅವನಲ್ಲಿ ಶರಣಾಗತಿ ಮಾಡಿದರು. ಸಂಸಾರಿಯಾದವನು ಸಂಸಾರದಲ್ಲಿ ವಿರಕ್ತಿ ಹೊಂದಿ ಇದನ್ನು ಹೋಗಲಾಡಿಸಬೇಕೆಂದು ಶರಣು ಹೋದರೂ ಪರಮಾತ್ಮನು ಸ್ವಲ್ಪ ಪರೀಕ್ಷೆಯನ್ನು ಮಾಡುತ್ತಾನಂತೆ. ಅನಾದಿ ಕಾಲದಿಂದ ಇರುತ್ತಿರುವ ಪೂರ್ವವಾಸನೆಯು ಪೂರ್ಣವಾಗಿ ಹೋಗುವವರೆಗೂ ಅಂಥವರ ಕಾರ್ಯವನ್ನು ಅವನು ಮಾಡಿಕೊಡುವುದಿಲ್ಲ. 'ಇನ್ನೂ ಏನು ಅನುಸಂಧಾನ ಮಾಡುತ್ತಿದ್ದೀರಿ ?' ಎಂದು ಅವನು ಕೇಳಿದರೆ ಆಳ್ವಾರ್ ಅವರು ತಮಗೆ ಅವಿರುದ್ಧವಾದುದನ್ನು ಬಿಟ್ಟು ಉಳಿದ ವಿರುದ್ಧವಾದುದೆಲ್ಲವನ್ನೂ ತ್ಯಾಗ ಮಾಡಲು ಸಂಕಲ್ಪಿಸಿರುವುದನ್ನು ವಿಜ್ಞಾಪಿಸುತ್ತಾರೆ. ಆ ದಿವ್ಯವೈಕುಂಠ ದೇಶದ ಪ್ರಾಪ್ತಿಯಲ್ಲಿ ತಮಗಿರುವ ತ್ವರೆಯನ್ನೂ ಅವನಲ್ಲಿ ನಿವೇದಿಸುತ್ತಾರೆ.

**ತುರಪ್ಪೇನ್ ಅಲ್ಲೇನ್ ಇನ್ಬಂ ತುರವಾದು ನಿನ್ ಉರುವ**
**ಮರಪ್ಪೇನ್ ಅಲ್ಲೇನ್ ಎನ್ರುಂ ಮರವಾದು ಯಾನ್ ಉಲಹಿಲ್**
**ಪಿರಪ್ಪೇನ್ ಆಹ ಎಣ್ಣೇನ್ ಪಿರವಾಮೈ ಪೆತ್ತದು ನಿನ್**
**ತಿರತ್ತೇನ್ ಆದನ್ನೈಯೊಲ್ ತಿರುವಿಣ್ಣಹರಾನೇ ॥೧೦॥**

(ತಿರುವಿಣ್ಣಹರಾನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ, (ಇನ್ಬವಮ್) ನಿನ್ನ ಅನುಭವದಿಂದ ಉಂಟಾಗುವ ಹಿರಿಯ ಆನಂದವನ್ನು (ತುರಪ್ಪೇನ್ ಅಲ್ಲೇನ್) ನಾನು ತೊರೆಯುವವನಲ್ಲ. (ತುರವಾದು) ಆ ಪ್ರೇಮವನ್ನು ತೊರೆಯದವನಾಗಿ (ಎನ್ರುಂ) ಒಂದು ದಿನವೂ (ನಿನ್ ಉರುವಂ ಮರಪ್ಪೇನ್ ಅಲ್ಲೇನ್) ನಿನ್ನ ದಿವ್ಯಮಂಗಳ ವಿಗ್ರಹದ ಸೌಂದರ್ಯವನ್ನು ಮರೆಯದವನಾಗಿರು ತ್ತಿದ್ದೇನೆ. (ಮರವಾದು) ಆ ನಿನ್ನ ದಿವ್ಯಸೌಂದರ್ಯವನ್ನು ಮರೆಯದವನಾಗಿ (ಯಾನ್ ಉಲಹಿಲ್ ಪಿರಪ್ಪೇನ್ ಆಹ ಎಣ್ಣೇನ್) ನಾನು ಸಂಸಾರದಲ್ಲಿ ಮತ್ತೆ ಜನ್ಮವನ್ನು ಹೊಂದುವ ಆಶೆಯನ್ನು ತೊರೆದವನಾಗಿದ್ದೇನೆ. (ಪಿರವಾಮೈ ಪೆತ್ತದು) ಇನ್ನು ಇಲ್ಲಿ ಹುಟ್ಟದಂತಹ ಲಾಭವನ್ನು ಪಡೆದವನಾಗಿ ಆಗುವುದೂ

ಸಹ (ನಿನ್ ತಿರತ್ತೇನ್ ಆತನ್ಮೈಯಾಲ್) ನಿನಗೇ ನಾನು ದಾಸನಾಗಿರುವುದರಿಂದ.

ವಿಷಯಾನುಭವ ಸುಖವನ್ನು ತೊರೆಯುವೆನೇ ವಿನಾ ನಿನ್ನ ಅನುಭವದಿಂದಾಗುವ ಪ್ರಧಾನ ಸುಖವನ್ನು ಬಿಡುವವನಲ್ಲ ನಾನು. ನಿನ್ನ ಭುವನ ಮೋಹಕ ರೂಪವನ್ನು ಎಂದೂ ಮರೆಯಲಾರೆ. ಇದಕ್ಕೆ ಮೊದಲು ನಿನ್ನನ್ನು ಮರೆತನಾದ ಕಾರಣ ನಿನ್ನನ್ನು ನಾನು ಪಡೆಯಲಾಗಲಿಲ್ಲ. ಇನ್ನು ಎಂದೂ ನಿನ್ನನ್ನು ಮರೆತು ಇರಲಾರೆ. ನಿನ್ನನ್ನು ಮುಂದೆ ಅಗಲದೆ ಇರಬೇಕಾದರೆ ನಿನ್ನ ಅಭಿಮಾನದೊಳಗೆ ಅಡಗಿ, 'ನೀನೇ ನಿರ್ವಾಹಕನು' ಎಂದಿರುವುದರಿಂದಲೇ ವಿನಾ ನಾನು ಅನುಷ್ಠಿಸಿದ ಯಾವುದೇ ಸಾಧನದಿಂದಲ್ಲ.

**ತುರಂದೇನ್ ಆರ್ವಂ ಶೆತ್ತಂ ಶುತ್ತಂ ತುರಂದಮೈಯಾಲ್**
**ಶಿರಂದೇನ್ ನಿನ್ನಡಿಕ್ಕೇ ಅಡಿಮೈ ತಿರುವಮಾಲೇ**
**ಅರಂತಾನಾಯ್ ತಿರಿವಾಯ್ ಉನ್ನೈಎನ್ ಮನತ್ತಹತ್ತೇ**
**ತಿರುಂಬಾವಮಲ್ ಕೊಂಡೇನ್ ತಿರುವಿಣ್ಣಹರಾನೇ** ॥೨॥

(ತಿರುವಿಣ್ಣಹರಾನೇ, ತಿರುಮಾಲೇ) ತಿರುವಿಣ್ಣಹರ್ ನಗರದಲ್ಲಿರುವ ಶ್ರಿಯಃಪತಿಯೇ, (ಅರಂ ತಾನಾಯ್ ತಿರಿವಾಯ್) ತಾನೇ ಸಾಕ್ಷಾತ್ ಧರ್ಮವಾಗಿ ತನ್ನನ್ನೇ ಕೊಟ್ಟುಕೊಳ್ಳಲು ಅವಸರವನ್ನು ಕಾಯುತ್ತಾ ಸಂಚರಿಸುತ್ತಿರುವವನೇ, (ಶುತ್ತಂ) ಸಂಸಾರಿಗಳ ಬಂಧುತ್ವವನ್ನೂ (ಆರ್ವಂ) ರಾಗವನ್ನೂ (ಶೆತ್ತಂ) ದ್ವೇಷವನ್ನೂ (ತುರಂದೇನ್) ಕಳೆದುಕೊಂಡೆನು. (ತುರಂದಮೈಯಾಲ್) ಹಾಗೆ ಕಳೆದು ಹಾಕಿಕೊಂಡಿರುವುದರಿಂದ (ನಿನ್ ಅಡಿಕ್ಕೇ) ನಿನ್ನ ಶ್ರೀಪಾದಗಳಿಗೇ (ಅಡಿಮೈ ಶಿರಂದೇನ್) ಕೈಂಕರ್ಯವನ್ನು ಮಾಡಲು ಸಮರ್ಥನಾದೆ. (ಉನ್ನೈ) ನಿನ್ನನ್ನು (ಎನ್‌ಮನತ್ತಹತ್ತೇ) ನನ್ನ ಮನಸ್ಸಿನೊಳಗೆ (ತಿರಂಬಾಮಲ್ ಕೊಂಡೇನ್) ತಪ್ಪದೆ ಇರುವಂತೆ ಧರಿಸಿಕೊಂಡಿದ್ದೇನೆ.

'ನಿನಗೆ ಬಾಹ್ಯವಿಷಯಗಳಲ್ಲಿ ಸ್ವಲ್ಪ ಆಸಕ್ತಿಉಂಟು' ಎಂದು ಹೇಳುವುದಕ್ಕಾಗದಂತೆ ಆಗಿದ್ದೇನೆ. 'ಪರಿತ್ಯಕ್ತಾ ಮಯಾ ಲಂಕಾ' ಎಂದು ತಾನೇ ವಿಭೀಷಣ ಹೇಳಿದುದು ? ಅನಾದಿಕಾಲದವಾಸನೆಯಿಂದ ವಿಷಯಗಳಲ್ಲಿ ರುಚಿ ಉಂಟಾಗಿ, ಆ ವಿಷಯಗಳನ್ನು ಪಡೆದರೆ ಬದುಕುವುದು ಇಲ್ಲದಿದ್ದರೆ ಸಾಯುವುದು ಎನ್ನುವ

ವರೆಗೂ ವರ್ತಿಸಿ, ಅದು ಲಭಿಸದ ಸಮಯದಲ್ಲಿ 'ಅದಕ್ಕೆ ಇವನು ತಾನೇ ವಿರೋಧ ಮಾಡಿದ'—ಎಂದು ಕಂಡವರ ಮೇಲೆಲ್ಲಾ ಕೋಪಮಾಡಿ, ಯುಕ್ತಾಯುಕ್ತ ನಿರೂಪಣ ಕ್ಷಮನಾಗದೆ ತೋರಿದಂತೆ ನಡೆಯುವವನಾಗಿದ್ದೆ. ಇದನ್ನೆಲ್ಲಾ ಈಗ ತೊರೆದುಬಿಟ್ಟೆ. ಸಂಗವನ್ನು ಬಿಟ್ಟುದರಿಂದ ಅದರಿಂದ ಬರುವ ದ್ವೇಷವೂ ತೊಲಗಿತು. ಅಪ್ರಾಪ್ತವಿಷಯಗಳಲ್ಲಿ ಸಂಬಂಧವನ್ನೂ ಬಿಟ್ಟೆ.

ಸ್ವಾಭಾವಿಕವಾದ 'ಈಶ್ವರಪಾರತಂತ್ರ್ಯದ' ಅನುಸಂಧಾನದಿಂದ ಇದು ಸಾಧ್ಯವಾಯಿತು. 'ನ ಕಶ್ಚಿನ್ನಾಪರಾಧ್ಯತಿ' ಎಂದು ಹೇಳುವ ಅನುಗ್ರಹೈಕಮಯಿಯಾದ ಶ್ರೀದೇವಿಯಿಂದ ಕೂಡಿರುವ ನಿನ್ನನ್ನು ಅರಿತೆ. ನಿರುಪಾಧಿಕ ಬಂಧುವಾದ ನೀನು ಸಿದ್ಧೋಪಾಯನಾಗಿರುವಾಗ ಬೇರೆ ಸಾಧನಗಳ ಅಪೇಕ್ಷೆ ಇಲ್ಲ. ಇತರ ಧರ್ಮಗಳ ವ್ಯಾವೃತ್ತಿಯನ್ನು ಇದರಿಂದ ಹೇಳಲಾಯಿತು. 'ಕೃಷ್ಣಂ ಧರ್ಮಂ ಸನಾತನಂ' ಎಂಬಂತೆ ಫಲವನ್ನು ಕೊಡುವುದಕ್ಕಾಗಿ ಅವಸರವನ್ನು ನಿರೀಕ್ಷಿಸುತ್ತಾ, ಸಂಚರಿಸುವ ಧರ್ಮಮೂರ್ತಿ ಆಗಿದ್ದೀಯೆ ನೀನು ! ನಾನು ನಿನ್ನನ್ನು ನನ್ನ ಹೃದಯದಲ್ಲಿ ಇಟ್ಟುಕೊಂಡಿದ್ದೇನೆ.

**ಮಾನೇಯ್ ನೋಕ್ಕುನಲ್ಲಾರ್ ಮದಿಪೋಲ್ ಮುಹತ್ತು ಉಲವುಂ**
**ಊನೇಯ್ ಕಣ್‌ವಾಳಿಕ್ಕು ಉಡೈಂದು ಓಟ್ಟೆನ್ಸು ಉನ್ ಅಡೈಂದೇನ್**
**ಕೋನೇ ಕುರುಂಗುಡಿಯುಳ್ ಕುಟಿಹಾ, ತಿರುನರೈಯೂರ್ ತೇನೇ, ವರುಪುನಲ್ ಶೂಟ್ ತಿರುವಿಣ್ಣಹರಾನೇ ॥೩॥**

(ಕೋನೇ) ಸ್ವಾಮಿಯೇ, (ಕುರುಂಗುಡಿಯುಳ್ ಕುಟಿಹಾ) ತಿರುಕ್ಕುರುಂಗುಡಿಯಲ್ಲಿ ಬಂದು ಸಂಶ್ಲೇಷಿಸುವುದಕ್ಕಾಗಿ ನಿಂತವನೇ, (ತಿರುನರೈಯೂರ್‌ತೇನೇ) ತಿರುನರೈಯೂರಿನಲ್ಲಿ ಜೇನಿನಂತಿರುವ ಪರಮ ಭೋಗ್ಯನೇ, (ವರುಪುನಲ್ ಶೂಟ್ ತಿರುವಿಣ್ಣಹರಾನೇ) ಹರಿಯುವ ತೀರ್ಥಗಳಿಂದ ಸುತ್ತುವರಿಯಲ್ಪಟ್ಟ ತಿರುವಿಣ್ಣಹರ್ ಕ್ಷೇತ್ರದಲ್ಲಿ ಬಿಜಯಮಾಡಿರುವ ದೇವನೇ, (ಮಾನ್‌ಏಯ್ ನೋಕ್ಕುನಲ್ಲಾರ್) ಜಿಂಕೆಯ ನೋಟವನ್ನು ಹೋಲುವ ನೋಟಗಳನ್ನುಳ್ಳ ಸ್ತ್ರೀಯರ (ಮತಿ ಪೋಲ್ ಮುಹತ್ತು ಉಲವುಂ) ಚಂದ್ರಸದೃಶವಾದ ಮುಖದಲ್ಲಿ ಚಲಿಸುತ್ತಿರುವ (ಊನ್ ಏಯ್ ಕಣ್‌ವಾಳಿಕ್ಕು) ಮಾಂಸಮಯವಾದ

ಕಣ್ಣುಗಳೆಂಬ ಬಾಣಕ್ಕೆ (ಉಡ್ಶೆಂದು) ಅಂಜಿ ನಡುಗಿ (ಓಟ್ಟಂದು) ಓಡಿ ಬಂದು (ಉನ್ ಅಡ್ಶೆಂದೇನ್) ನಿನ್ನಲ್ಲಿ ಶರಣು ಹೋಗಿದ್ದೇನೆ.

'ತಪ್ಪಿಸಿಕೊಳ್ಳುವುದಕ್ಕೆ ಆಗದಿರುವುದನ್ನು ತಪ್ಪಿಸಿಕೊಂಡು ಬಂದು ನಿನ್ನಲ್ಲಿ ಶರಣು ಹೊಕ್ಕಿದ್ದೇನೆ. ದಯೆಮಾಡಿ ಸಲಹಬೇಕು'—ಎಂದು ಇಲ್ಲಿ ಬೇಡುತ್ತಿದ್ದಾರೆ. ಚೆಲುವೆಯರಾದ ಸ್ತ್ರೀಯರು ತಮ್ಮ ಕಟಾಕ್ಷಗಳ ಬಲೆಯಲ್ಲಿ ಇವನು ತಪ್ಪಿಸಿಕೊಳ್ಳುವುದಕ್ಕಾಗದಂತೆ ಹಿಡಿದು ಹಾಕಿ ಆಮೇಲೆ ಇವನಿಗೆ ನೋವುಂಟುಮಾಡುವರಷ್ಟೇ ? ಆದರಿಂದ ಪಾರಾಗಿ ಬಂದು ನಿನ್ನ ಪಾದಗಳ ಮೇಲೆ ಬಿದ್ದಿದ್ದೇನೆ ರಕ್ಷಣೆಯನ್ನು ಬೇಡುತ್ತಾ. ಇದು ಪ್ರಾಪ್ತವಿಷಯವೇ ಆಗಿರುವುದಾಗಿದೆ. ಈ ಲೋಕದಲ್ಲಿರುವವರೊಡನೆ ಸೇರಿ ಸಂಶ್ಲೇಷಿಸುವುದಕ್ಕಾಗಿ ಆ ಪರಮಾತ್ಮನು ತಿರುಕ್ಕುರುಂಗುಡಿ ಕ್ಷೇತ್ರದಲ್ಲಿ ಬಂದು ನಿಂತಿದ್ದಾನೆ.

**ಶಾಂದು ಏಂದುಂ ಮೆಲ್ ಮುಲೈಯಾಳ್ ತಡನ್‌ದೋಳ್**
**ಪುಣರ್ ಇನ್ಬವೆಳ್ಳತ್ತು**
**ಆಟ್ನ್ದೇನ್, ಅರುನರಹತ್ತು ಅಟುನ್ದುವಾ್ ಪಯನ್**
**ಪಡೈತ್ತೇನ್**
**ಪೋನ್ದೇನ್ ಪುಣ್ಣಿಯನೇ ಉನ್ನೈ ಎಯರ್‌ದಿ ಎನ್**
**ತೀವಿನೈಹಳ್**
**ತೀರ್‌ನ್ದೇನ್, ನಿನ್ನಡೈನ್ದೇನ್ ತಿರುವಿಣ್ಣಹರಾನೇ ॥೪॥**

(ತಿರುವಿಣ್ಣಹರಾನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ (ಶಾಂದು ಏಂದುಂ ಮೆಲ್‌ಮುಲೈಯಾಳ್) ಕುಂಕುಮವನ್ನು ಲೇಪಿಸಿದ ಮೃದುವಾದ ಸ್ತನಗಳನ್ನುಳ್ಳ ಸ್ತ್ರೀಯರ (ತಡತೋಳ್) ದೀರ್ಘವಾದ ಬಾಹುಗಳೊಡನೆ (ಪುಣರ್ ಇನ್ಬಂ ವೆಳ್ಳತ್ತು) ಆಲಿಂಗಿಸುವುದರಿಂದ ಆಗುವ ಸುಖಸಾಗರದಲ್ಲಿ (ಆ ಟ್‌ನ್ದೇನ್) ಹಿಂದಿನ ದಿನಗಳಲ್ಲಿ ಮುಳುಗಿಹೋಗಿದ್ದೆ. ಆದರಿಂದ(ಅರುನರಹತ್ತು ಅಟುನ್ದುವಾ್ ಪಯನ್ ಪಡೈತ್ತೇನ್) ಕ್ರೂರವಾದ ಸಂಸಾರ ನರಕದಲ್ಲಿ ಬಿದ್ದುಹೋಗುವ ಫಲವನ್ನು ಪಡೆದುಕೊಂಡೆ. (ಪುಣ್ಣಿಯನೇ) ಪುಣ್ಯಮೂರ್ತಿಯೇ, (ಪೋನ್ದೇನ್ ನಿನ್) ನಿನ್ನ ಪಾದಗಳ ಬಳಿ ಬಂದು ಸೇರಿದವನಾಗಿ ನಿನ್ನನ್ನು ಆಶ್ರಯಿಸಿದೆ. (ಉನ್ನೈ ಎಯರ್‌ದಿ) ನಿನ್ನನ್ನು ಸಮೀಪಿಸಿ (ಎನ್ ತೀವಿನೈಹಳ್ ತೀರ್‌ನ್ದೇನ್) ನನ್ನ ಕ್ರೂರವಾದ ಪಾಪಗಳನ್ನು ಕಳೆದುಕೊಳ್ಳುವಂತಾದೆ.

ಹಿಂದೆ ಎಲ್ಲ ಕಾಲವೂ ನಿತ್ಯಸಂಸಾರಿಯಾಗಿ ಹೋಗಿ ಬಿಡುವಂತಹ ಪ್ರಯೋಜನವನ್ನು ಪಡೆದೆ. ಸಂಸಾರವೆಂಬುವ ನರಕದಲ್ಲಿ ಬಿದ್ದು ಮುಳುಗಿ ಹೋಗುವಂತಾಯಿತು ಆದರಿಂದ. 'ಹಾಗಾದರೆ ನೀವು ನಮ್ಮ ಬಳಿ ಬಂದು ಸೇರಿದುದು ಹೇಗೆ ?'—ಎಂದು ಅವನು ಕೇಳಿದರೆ ಹೇಳುತ್ತಾರೆ—'ಸರ್ವಪುಣ್ಯ ನಿರ್ವಾಹಕನಾದ ನೀನು ಯಾವ ಪುಣ್ಯವನ್ನು ಹಿಂದೆ ನನ್ನ ಬಳಿ ಉಂಟುಮಾಡಿ ದೆಯೋ ನಾನರಿಯೆ. ನಾನು ನಿನ್ನನ್ನು ಸೇರಲು ಆದ ಮೂಲಸುಕೃತ ನೀನೇ, ಸರ್ವಾಧಿಕನಾದ ನಿನ್ನನ್ನು ಆಶ್ರಯಿಸಿ ನನ್ನ ಪಾಪಗಳನ್ನೆಲ್ಲಾ ನೀಗಿಕೊಂಡೆ. ಉಪಾಯ ಪ್ರತಿಬಂಧಕಗಳನ್ನೂ ಪ್ರಾಪ್ತಿ ಪ್ರತಿಬಂಧಕಗಳನ್ನೂ ಹೋಗಲಾಡಿಸಿ ಕೊಂಡೆ. ರಾವಣನಿಂದ ಪರಿತ್ಯಕ್ತನಾದ ವಿಭೀಷಣ ಒಂದು ಆಶ್ರಯವೂ ಇಲ್ಲದವ ನಾಗಿ ಸಾಗರದ ದಂಡೆಯ ಬಳಿ ಬಂದು ರಾಮನಲ್ಲಿ ಶರಣುಹೋದ ಹಾಗೆ ಸಂಸಾರದಲ್ಲಿ ವಿಷಯಗಳಿಂದ ನೊಂದು ದುಃಖಿಸುವ ನಾನು ನಿನ್ನಲ್ಲಿ ಶರಣಾಗಲು ಸಾಧ್ಯವಾಗುವಂತೆ ತಿರುವಿಣ್ಣಹರ್ ಕ್ಷೇತ್ರದಲ್ಲಿ ನೀನು ಸನ್ನಿಹಿತನಾಗಿರುವುದರಿಂದ ನಿನ್ನಲ್ಲಿ ನಾನು ಮರೆಹೊಕ್ಕೆನು.

**ಮತ್ತು ಓರ್ ದೆಯ್‌ವಂ ಎಣ್ಣೇನ್ ಉನ್ನೈಯಲ್ಲಾಲ್ ಎನ್ ಮನತ್ತು ವೈತ್ತು**
**ಪೆತ್ತೇನ್, ಪೆತ್ತದುವುಂ ಪಿರವಾಮೈ ಎಂಬೆರುಮಾನ್**
**ವತ್ತಾ ನೀಳ್ ಕಡಲ್ ಶೂಳ್ ಇಲಂಗೈ ಇರಾವಣನೈ**
**ಶೆತ್ತಾಯ್ ಕೊತ್ತವನೇ ತಿರುವಿಣ್ಣಹರಾನೇ ॥೫॥**

(ಕೊತ್ತವನೇ ತಿರುವಿಣ್ಣಹರಾನೇ) ದೇವಾಧಿದೇವನೇ, ತಿರುವಿಣ್ಣಹರ್ ಕ್ಷೇತ್ರ ದಲ್ಲಿರುವ ಸ್ವಾಮಿಯೇ, (ವತ್ತಾ ನೀಳ್‌ಕಡಲ್ ಶೂಳ್) ಒಂದು ದಿನವೂ ಬತ್ತದ ದೊಡ್ಡ ಸಮುದ್ರದಿಂದ ಸುತ್ತುವರಿಯಲ್ಪಟ್ಟ (ಇಲಂಗೈ ಇರಾವಣನೈ ಶೆತ್ತಾಯ್) ಲಂಕಾಪುರಿಯಲ್ಲಿ ರಾವಣನನ್ನು ವಧಿಸಿದವನೇ, (ಮತ್ತು ಓರ್ ತೆಯ್‌ವಂ ಎಣ್ಣೇನ್) ಮತ್ತೊಂದು ದೈವವನ್ನು ಮನಸ್ಸಿನಲ್ಲಿಯೂ ನಾನು ನೆನೆಯುವುದಿಲ್ಲ. (ಎಂಬೆರುಮಾನ್) ನಮ್ಮ ಸ್ವಾಮಿಯೇ, (ಉನ್ನೈ ಎನ್ ಮನತ್ತು ವೈತ್ತು ಪೆತ್ತೇನ್) ನಿನ್ನನ್ನು ನನ್ನ ಮನಸ್ಸಿನಲ್ಲಿ ಇಟ್ಟುಕೊಂಡು ಹಿರಿಯಲಾಭವನ್ನು ಪಡೆದೆ. (ಪೆತ್ತದವುಂ ಪಿರವಾಮೈ) ಹಾಗೆ ನಾನು ಪಡೆದುಕೊಂಡ ಲಾಭವಾದರೂ ಇನ್ನು ಜನ್ಮವೆಂಬುವುದಿಲ್ಲವೆಂಬುದೇ ಆಗಿದೆ.

ಮನಸ್ಸಿನಿಂದ ಚಿಂತಿಸುವಾಗಲೂ ಆಶ್ರಯಣೀಯವಾದ ಮತ್ತೊಂದು ವಸ್ತು ಇವೆಯೆಂದು ನಾನು ಎಣಿಸುವುದಿಲ್ಲ. ಸರ್ವಾಧಿಕನಾಗಿರುವ ನಿನ್ನನ್ನು ನನ್ನ ಹೃದಯದಲ್ಲಿಟ್ಟುಕೊಂಡು ಬಂದು ಅಲಭ್ಯವಾದ ಲಾಭವನ್ನು ಪಡೆದು ಕೊಂಡೆ. ಮತ್ತೊಮ್ಮೆ ಹುಟ್ಟದಂತೆ ಆದುದೇ ಆ ಲಾಭವಾಗಿದೆ. 'ನಾನು ತಾನೇ ಈ ನಗರಿಗೆ ನಿರ್ವಾಹಕ ?'– ಎಂದು ದರ್ಪಯುಕ್ತನಾಗಿದ್ದ ರಾವಣನನ್ನು ಅಳಿಸಿಹಾಕಿದ ನಿನಗೆ ನನ್ನ ಪ್ರತಿಬಂಧಕಗಳನ್ನು ನಾಶಪಡಿಸುವುದು ಒಂದು ಕ್ಲೇಶವೇ ?

**ಮೈ ಒಣ್ ಕರುಂ ಕಡಲುಂ ನಿಲನುಂ ಮಣಿವರ್ರೈಯುಂ**
**ಶೆಯ್ಯ ಶುಡರಿರಂಡುಂ ಇವ್ವೈಯಾಯ ನಿನ್ನೈ ನೆಂಜಿಲ್**
**ಉಯ್ಯುಂ ವಹೈ ಉಣರ್ನ್ದೇನ್ ಉಣ್ಮೈಯಾಲ್ ಇನಿ**
**ಯಾದುಂ ಮತ್ತೋರ್**
**ತೆಯ್ವಂ ಪಿರಿದು ಅರಿಯೇನ್ ತಿರುವಿಣ್ಣಹರಾನೇ ॥೬॥**

(ತಿರುವಿಣ್ಣಹರಾನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ದೇವನೇ (ಮೈ ಒಣ್ ಕರುಂಕಡಲುಂ) ಕಾಡಿಗೆಯನ್ನು ಹೋಲುತ್ತಾ ಸುಂದರವಾಗಿ ಕಪ್ಪಾಗಿರುವ ಸಮುದ್ರವೂ, (ನಿಲನುಂ) ಭೂಮಿಯೂ, (ಮಣಿವರ್ರೈಯುಂ) ಶ್ರೇಷ್ಠವಾದ ಪರ್ವತಗಳೂ, (ಶೆಯ್ಯ ಇರಂಡು ಶುಡರುಂ) ಸುಂದರವಾಗಿರುವ ಚಂದ್ರ ಸೂರ್ಯರುಗಳೂ (ಇವ್ವೈ ಆಯ ನಿನ್ನೈ) ಮೊದಲಾದ ಇವೆಲ್ಲವೂ ಆಗಿ ಇರುತ್ತಿರುವ ನಿನ್ನನ್ನು (ನೆಂಜಿಲ್) ಮನಸ್ಸಿನಿಂದ (ಉಯ್ಯುಂ ವಹೈ) ನಾನು ಉಜ್ಜೀವಿಸುವುದಕ್ಕಾಗುವಂತೆ (ಉಣ್ಮೈಯಾಲ್ ಉಣರ್ನ್ದೇನ್) ಇದ್ದದು ಇದ್ದಹಾಗೆ ತಿಳಿದುಕೊಂಡೆ. (ಇನಿ) ಹೀಗಾದ ಮೇಲೆ (ಮತ್ತು) ಇದಕ್ಕೂ ಮೇಲೆ (ಪಿರಿದು ಓರ್ ತೆಯ್ವಂ ಯಾದುಂ ಅರಿಯೇನ್) ಯಾವ ವಿಧವಾದ ದೇವತಾಂತರವನ್ನೂ ನಾನು ನೆನೆಯುವುದಿಲ್ಲ.

ಸರ್ವೇಶ್ವರನ ದೇಹಕಾಂತಿಯನ್ನು ಹೋಲಿ ಅಂಜನದಂತೆ ದರ್ಶನೀಯವಾದ ಸಾಗರವೇನು, ಅದನ್ನು ಹೊಂದಿರುವ ಭೂಮಿಯೇನು, ಕುಲಪರ್ವತಗಳೇನು, ಸೂರ್ಯಚಂದ್ರರೇನು ಇವೇ ಮೊದಲಾದ ಸಮಸ್ತವೂ ಆಗಿ ಜಗದಾಕಾರನಾಗಿರುವ ನಿನ್ನನ್ನು ಮನಸ್ಸಿನಲ್ಲಿ ಅನುಸಂಧಾನಮಾಡಿ ಅಸತ್ಕಲ್ಪನಾಗಿದ್ದ ನಾನು

ಈಗ ಸತ್ತೆಯನ್ನು ಹೊಂದಿ ಉಜ್ಜೀವಿಸುವಂತಾದೆ. 'ನೀನೇ ಸರ್ವಶೇಷಿ. ಈ ಆತ್ಮವಸ್ತು ನಿನಗೆ ಶೇಷಭೂತವಾದುದು'— ಎಂದು ಅರಿತೆ. ಈ ತತ್ತ್ವಸ್ಥಿತಿಯನ್ನು ಅರಿತ ನಾನು ಮತ್ತೆ ಯಾರನ್ನೋ ಆಶ್ರಯಣೀಯರೆಂದು ಸರ್ವಥಾ ಎಣಿಸಲಾರೆ. 'ಈಶ್ವರೋಽಹಂ' ಎಂದಿರುವ ಭ್ರಾಂತರನ್ನು ನಾನು ಎಣಿಸುವುದುಂಟೋ ?

**ವೇರೇ ಕೂರುವದು ಉಂಡು ಅಡಿಯೇನ್ ವಿರಿತ್ತು ಉರ್ೈಕ್ಕುಂ**
**ಆರೇ ನೀ ಪಣಿಯಾದು ಅಡೈನಿನ್ ತಿರುಮನತ್ತು**
**ಕೂರೇನ್ ನೆಂಜಾತನ್ನಾಲ್ ಕುಣಂಗೊಂಡು ಮತ್ತೋರ್**
**ತೆಯ್‌ವಮ್**
**ತೇರೇನ್ ಉನ್ನೈ ಅಲ್ಲಾಲ್ ತಿರುವಿಣ್ಣಹರಾನೇ ॥೭॥**

(ತಿರುವಿಣ್ಣಹರಾನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ, (ಅಡಿಯೇನ್) ನಿನ್ನ ದಾಸನಾದ ನಾನು (ವೇರೇ ಕೂರುವದು ಉಂಡು) ವಿಲಕ್ಷಣವಾಗಿ ಮಾಡುವ ಬೇಡಿಕೆ ಒಂದು ಉಂಟು. (ವಿರಿತ್ತು ಉರೈಕ್ಕುಂ ಆರೇ ನೀ ಪಣಿಯಾದು) ನಾನು ವಿಸ್ತಾರವಾಗಿ ಕೇಳುವ ರೀತಿಯಲ್ಲಿ ನೀನು ನಿಯಮಿಸದೆ (ನಿನ್ ತಿರುಮನತ್ತು) ನಿನ್ನ ಮನಸ್ಸಿನಲ್ಲಿ (ಅಡೈ) ಸಾರವಾದುದನ್ನು ಸಂಗ್ರಹವಾಗಿ ಅನುಗ್ರಹಿಸಬೇಕು. (ಉನ್ನೈ ಅಲ್ಲಾಲ್ ಮತ್ತು ಓರ್ ತೆಯ್‌ವಂ ಕೂರೇನ್) ನಿನ್ನನ್ನು ಬಿಟ್ಟು ಮತ್ತೊಂದು ದೈವವನ್ನು ನಾನು ಬಾಯಿ ಬಿಟ್ಟು ಹೇಳುವುದಿಲ್ಲ. (ಕುಣಂ ಕೊಂಡು) ಅವರುಗಳಲ್ಲಿರುವ ಗುಣವಿಶೇಷವನ್ನು ಕಂಡರೂ ಸಹ (ನೆಂಜು ತನ್ನಾಲ್) ಮನಸ್ಸಿನಿಂದ (ತೇರೇನ್) ಅವರನ್ನು ಆಶ್ರಯಣೀಯರೆಂದು ವಿಶ್ವಾಸ ಹೊಂದುವುದಿಲ್ಲ.

ನಾನು ಅನನ್ಯಗತಿಯಾದವನು. ಅನ್ಯದೇವತೆಗಳನ್ನು ಬಾಯಿಂದಲೂ ಹೇಳುವುದಿಲ್ಲ. ಮನಸ್ಸಿನಿಂದಲೂ ನೆನೆಯುವುದಿಲ್ಲ. ಆಪಾತ ಪ್ರತೀತಿಯ ಕಾರಣ ಅವರಲ್ಲಿ ಏನೋ ಉತ್ಕರ್ಷವಿದೆ ಎಂದು ಕಂಡು ಬಂದರೂ ಅವರಲ್ಲಿ ವಿಶ್ವಾಸವಿಡುವುದಿಲ್ಲ. ನಿನಗೇ ದಾಸಭೂತನಾದ ನಾನು ಬೇಡುವ ರಹಸ್ಯವಾದ ಬೇಡಿಕೆ ಒಂದಿದೆ. ಅದಾದರೂ ನನ್ನ ಮಾತು ಅರ್ಜುನನ ಪ್ರಶ್ನೆಯಂತೆ ಆಗ ಬಾರದು, 'ಕರ್ಮಣ್ಯೇವಾಧಿಕಾರಸ್ತೇ'– ಎಂದೆಂದು ಕೆಲವು ಅಂಶಗಳನ್ನು

ವಿಸ್ತಾರವಾಗಿ ಹೇಳಕೂಡದು. 'ಸ್ಥಿತೋಽಸ್ಮಿ ಗತಸಂದೇಹಃ' ಎಂದು ಫಲಿಸುವಂತೆ ನಿನ್ನ ಮನಸ್ಸಿನಲ್ಲಿ ಯಾವುದು ಸಾರತಮವೆಂದು ತೋರುವುದೋ ಅದನ್ನೇ ನೇರ ವಾಗಿ ತಿಳಿಸಿ ಉಪಕರಿಸಬೇಕು. 'ಭಗವಾನ್ ಉವಾಚ' ಎಂದರೆ 'ಅರ್ಜುನ ಉವಾಚ' ಎಂಬುದು ಬರದಂತೆ ಚರಮಶ್ಲೋಕವನ್ನು ಹೇಳಿದಂತೆ ಹೇಳಬೇಕು.

**ಮುಳಿಂದು ತೀಂದ ವೆಂಗಡತ್ತು ಮೂರಿ ಪೆರುಂ ಕಳಿತ್ತಾಲ್**
**ವಿಳಿಂದು ತೀಂದ ಮಾಮರಂಪೋಲ್ ವೀೞ್ನ್ದಾರೈ**
**ನಿನೈಯಾದೇ**
**ಅಳಿಂದು ಓರ್ನ್ದ ಶಿಂದೈ ನಿನ್‌ಪಾಲ್ ಅಡಿಯೇಱ್ಕ್ಕು**
**ವಾನುಲಹಂ**
**ತೆಳಿಂದೇ ಎನ್ರು ಎಯ್‌ದುವದು ತಿರುವಿಣ್ಣಹರಾನೇ ॥೮॥**

(ತಿರುವಿಣ್ಣಹರಾನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವವನೇ, (ಮುಳಿಂದು ತೀಂದ) ತಾನೇ ಸೊರಗಿ ಸೀದು ಹೋಗುವ, (ವೆವಕ್‌ಕಡತ್ತು) ಬೇಗೆಯನ್ನುಳ್ಳ ಪಾಲೈಭೂಮಿಯಲ್ಲಿ (ಮೂರಿ ಪೆರುಕಳಿತ್ತಾಲ್) ಬಲಿಷ್ಠವಾದ ದೊಡ್ಡ ಆನೆ ಯಿಂದ (ಉಳಿಂದು) ತಳ್ಳಲ್ಪಟ್ಟ (ತೀಂದ) ಕೆಟ್ಟುಹೋದ (ಮಾಮರವ್ ಪೋಲ್‌ವೀೞ್ನ್ದಾರೈ) ದೊಡ್ಡಮಾವಿನ ಮರಗಳಂತೆ ಬಿದ್ದು ಹೋದವರನ್ನು (ನಿನೈಯಾದೆ) ನೆನೆಯದೆ (ನಿನ್‌ಪಾಲ್) ನಿನ್ನಲ್ಲಿ (ಅಳಿನ್ದ ಓರ್ನ್ದ ಶಿಂದೈ) ಪಕ್ವವಾದ ತಿಳಿಯಾದ ಮನಸ್ಸನ್ನುಳ್ಳ (ಅಡಿಯೇಱ್ಕ್ಕು) ನನಗೆ (ತೆಳಿಂದು) ಈ ಸಂಸಾರದ ಕ್ಲೇಶಗಳೆಲ್ಲಾ ನೀಗಿ (ವಾನ್ ಉಲಹಂ ಎಯ್‌ದುವದು ಎನ್ರು) ಪರಮಪದವನ್ನು ಸೇರುವ ದಿನ ಯಾವುದೋ ?

ಆ ನೆಲಕ್ಕೆ ತಕ್ಕಂತಹ ಮರಗಳು. ಬೆಂಡು ಎಂದು ಹೇಳುವಂತಹ ಕೆಲವು ಮರಗಳು. ನೆಲದ ಬೇಗೆಯ ಕಾರಣ ಬೆಳೆದು ಸೀದು ಹೋಗುವಂತಹವು. ಆ ನೆಲದಲ್ಲಿರುವುದೊಂದರಿಂದ ಬೆಳೆದು ಅಪ್ರತಿಹತವಾಗಿ ಸಂಚರಿಸುವ ಆನೆಯಿಂದ ತಳ್ಳಲ್ಪಟ್ಟು ಬಿದ್ದ ದೊಡ್ಡ ಮರಗಳ ಹಾಗೆ ನಾಶಕ್ಕೊಳಪಟ್ಟವರನ್ನು ನೆನೆಯುವು ದಿಲ್ಲ ನಾನು. ಕೆಲವು ಪದಾರ್ಥಗಳು ಹುಟ್ಟಿದಾಗಲೇ ಸಾಯುತ್ತವೆ. ಕೆಲವು ಬಹಳ ಕಾಲ ಇದ್ದು ಕರ್ಮಕ್ಷಯವಾದಮೇಲೆ ಹೋಗುತ್ತವೆ. ಈ ಕ್ಷುದ್ರ ಪದಾರ್ಥಗಳಿಗೆ ಉತ್ಪತ್ತಿಯೊಡನೆ ವಿನಾಶವೂ ಇದ್ದೇ ಇದೆ; ಇದು ಸಂಸಾರ.

ಹೀಗೆ ಇರುವ ಬ್ರಹ್ಮ, ಇಂದ್ರ ಮೊದಲಾದವರನ್ನೆ ನಾನು ನೆನೆಯುವುದಿಲ್ಲ. ಸ್ನೇಹವನ್ನೂ, ಅನವರತವೂ ಅವಧಾನವನ್ನೂ ಉಳ್ಳಮನಸ್ಸಿನೊಡನೆ ಅನನ್ಯ ಗತಿಯಾದ ನಾನು ನಿನ್ನನ್ನೇ ಆಶ್ರಯಿಸಿದ್ದೇನೆ. ಅಪುನರಾವೃತ್ತಿಲಕ್ಷಣವಾದ ಮೋಕ್ಷವನ್ನು ಎಂದು ನಾನು ಪಡೆಯುವುದು ?

ಬಲವಾದ ನೆಲದಲ್ಲಿ ಬಲವಾದ ಒಂದರಿಂದ ತಳ್ಳಲ್ಪಡುವ ಹೂವಿನ ಮರದಂತೆ ಸಂಸಾರದಲ್ಲಿದ್ದು ಜೀವಿಸಿ ಮುಗಿದು ಹೋಗುವವರನ್ನು ನೆನೆಯದೆ ನಿನ್ನಲ್ಲಿ ಅನವರತವೂ ಸ್ನೇಹಭಾವವನ್ನೂ ಅವಧಾನವನ್ನೂ ಹೊಂದಿರುವ ಮನಸ್ಸುಳ್ಳ ನನಗೆ ಎಂದು ಮೋಕ್ಷವನ್ನು ಕೊಡಲು ನೀನು ಸಂಕಲ್ಪಿಸಿದ್ದೀಯೆ ?

**ಶೊಲ್ಲಾಯತ್ ತಿರುಮಾರ್ವಾ ಉನಕ್ಕಾಹಿ ತೊಂಡು ಪಟ್ಟ**<br>
**ನಲ್ಲೇನೈ ವಿನೈಹಳ್ ನಲಿಯಾವ್ಮೈ ನಂಬು ನಂಬೀ**<br>
**ಮಲ್ಲಾ ಕುಡಮಾಡೀ ಮದುಶೂದನೇ ಉಲಹಿಲ್**<br>
**ಶೆಲ್ಲಾ ನಲ್ಲಿಶೈಯಾಯ್ ತಿರುವಿಣ್ಣಹರಾನೇ ॥೯॥**

(ತಿರುವಿಣ್ಣಹರಾನೇ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯೇ, (ಮಲ್ಲಾ) ಅತ್ಯಂತ ಬಲಶಾಲಿಯೇ, (ಕುಡಮ್ ಆಡಿ) ಘಟನರ್ತನವನ್ನು ಆಡಿದವನೇ (ಮದುಶೂದನೇ) ಮಧುವೆಂಬ ಅಸುರನನ್ನು ಕೊಂದವನೇ (ಉಲಹಿಲ್‌ಶೆಲ್ಲಾ) ಲೋಕದಲ್ಲಿ ಎಲ್ಲಿಯೂ ಕಂಡುಬರದ (ನಲ್ ಇಶೈಯಾಯ್) ಒಳ್ಳೆಯ ಕೀರ್ತಿಯುಳ್ಳವನೇ, (ನಂಬೀ) ಪರಿಪೂರ್ಣನೇ (ತಿರುಮಾರ್ವಾ) ಶ್ರೀದೇವಿಯನ್ನು ವಕ್ಷಃ ಸ್ಥಲದಲ್ಲಿ ಉಳ್ಳವನೇ, (ಉನಕ್ಕು ಆಹಿ) ನಿನ್ನ ವಿಷಯದಲ್ಲಿ (ತೊಂಡು ಪಟ್ಟ ನಲ್ಲೇನೈ) ದಾಸ್ಯವನ್ನು ಹೊಂದಿರುವ ವಿಲಕ್ಷಣನಾದ ನನ್ನನ್ನು (ವಿನೈಹಳ್ ನಲಿಯಾವ್ಮೈ) ಪಾಪಗಳು ಹಿಂಸಿಸದ ಹಾಗೆ (ನಂಬು) ಆದರಿಸಿ ಅನುಗ್ರಹಿಸು.

ಲಕ್ಷ್ಮೀಪತಿಯಾಗಿರುವ ನೀನು ನನಗೊಂದು ಮಾತನ್ನು ಹೇಳಲೇಬೇಕು. 'ತಾನು ಮಾಡಿದ ಪಾಪ ಫಲವನ್ನು ಅವನು ಅನುಭವಿಸುತ್ತಿದ್ದಾನೆ'—ಎಂದು ನೀನು ಸುಮ್ಮನೆ ಇರುವುದಕ್ಕೆ ನಾನೊಬ್ಬ ಬ್ರಹ್ಮಚಾರಿ ದೇವರನ್ನು ಆಶ್ರಯಿಸಿದ್ದೇನೆಯೋ ? ಶ್ರಿಯಃಪತಿಯಾದ ನಿನ್ನ ಪಾದಗಳಲ್ಲಿ ನಿತ್ಯಕೈಂಕರ್ಯವನ್ನು ಪಡೆಯುವಂತಹ ವೈಲಕ್ಷಣ್ಯವನ್ನು ನಾನು ಹೊಂದಿರುವೆನಲ್ಲ ; ಕರ್ಮಗಳು ಬಂದು ನನ್ನನ್ನು ಹಿಂಸಿಸದ ಹಾಗೆ ನೀನು ನನ್ನನ್ನು ಅಂಗೀಕರಿಸಬೇಕು.

ಸಂಸಾರಿಗಳನ್ನು ಬಿಟ್ಟು ನಿತ್ಯಸೂರಿಗಳಿಗೇ ಪ್ರತ್ಯಕ್ಷನಾಗಿರುವವನಾದರೆ ನಿನ್ನ ಗುಣ ಪರಿಚ್ಛಿನ್ನವಾಗಿರುತ್ತಿರುವುದು. ಸಂಸಾರಿಗಳಿಗೂ ನೀನು ಮೈದೋರಿದ ಮೇಲೆಯೇ ನಿನ್ನಗುಣ ಅಪರಿಚ್ಛಿನ್ನವೆನಿಸುವುದು.

**ತಾರಾರ್ ಮಲರ್ ಕಮಲತ್ತಡಂ ಶೂಟ್‌ನ್ದ ತಣ್‌ಪುರವಿಲ್**
**ಶೀರಾರ್ ನೆಡುಮರುಹಿಲ್ ತಿರುವಿಣ್ಣಹರಾನ್ನೈ**
**ಕಾರಾರ್ ಪುಯಲ್ ತಡಕ್ಕೈ ಕಲಿಯನೊಲಿಮಾಲೈ**
**ಆರಾರ್ ಇವೈವಲ್ಲಾರ್ ಅವರ್ಕ್ಕು ಅಲ್ಲಲ್ ನಿಲ್ಲಾವೇ ॥೧೦॥**

ತಾರಾರ್ ಮಲರ್) ಹೆಚ್ಚಾಗಿ ದಳಗಳನ್ನುಳ್ಳ ಹೂಗಳನ್ನುಳ್ಳ (ಕಮಲಂತಡಂ ಶೂಟ್‌ನ್ದ) ತಾವರೆಯ ಕೊಳಗಳಿಂದ ಸುತ್ತುವರಿಯಲ್ಪಟ್ಟು (ತಣ್‌ಪುರವಿನ್) ತಂಪಾದ ತೋಟಗಳನ್ನುಳ್ಳದೂ (ಶೀರ್ ಆರ್‌ನೆಡುಮರುಹಿಲ್) ಅತ್ಯಧಿಕವಾದ ಸಂಪತ್ತನ್ನುಳ್ಳ ದೀರ್ಘವಾದ ಬೀದಿಗಳನ್ನುಳ್ಳದೂ ಆದ (ತಿರುವಿಣ್ಣಹರಾನ್ನೈ) ತಿರುವಿಣ್ಣಹರ್ ಕ್ಷೇತ್ರದಲ್ಲಿರುವ ಸ್ವಾಮಿಯನ್ನು ಕುರಿತು ಕಾರ್ ಆರ್ ಪುಯಲ್ ತಡ ಕೈ ಕಲಿಯನ್) ಕಾಳಮೇಘವನ್ನು ಹೋಲುವ ಔದಾರ್ಯವನ್ನುಳ್ಳ ನೀಳ ವಾದ ಕೈಗಳನ್ನುಳ್ಳ ತಿರುಮಂಗೈ ಆಳ್ವಾರ್ ಅವರು (ಒಲಿ) ಹಾಡಿದ (ಮಾಲೈ ಇವೈ) ನುಡಿಮಾಲೆಯಾದ ಈ ಪಾಶುರಗಳನ್ನು (ಆರ್ ಆರ್ ವಲ್ಲಾರ್) ಯಾರು ಯಾರು ಅರಿಯುವರೋ (ಅವರ್ಕ್ಕು ಅಲ್ಲಲ್ ನಿಲ್ಲಾ) ಅವರುಗಳಲ್ಲಿ ಪಾಪಗಳು ತಂಗಿರುವುದಕ್ಕಾಗದೆ ಓಡಿ ಹೋಗುವುವು.

ಆ ತಿರುವಿಣ್ಣಹರ್ ಕ್ಷೇತ್ರದ ಪರಿಸರವೆಲ್ಲ ತಾವರೆಯ ತಟಾಕಗಳಿಂದ ಸುತ್ತುವರಿಯಲ್ಪಟ್ಟಿರುವುದು. ಐಶ್ವರ್ಯ ಪ್ರಕಾಶಕವಾಗಿ ದೀರ್ಘವಾಗಿರುವ ಬೀದಿಗಳನ್ನುಳ್ಳ ಆ ಕ್ಷೇತ್ರದಲ್ಲಿ ನಿತ್ಯವಾಸ ಮಾಡುತ್ತಿರುವವನನ್ನು ಕುರಿತು ಆಳ್ವಾರ್ ಕೊಂಡಾಡಿದ್ದಾರೆ. ದಾನ ಮಾಡಿಮಾಡಿ ಬೆಳೆದ ಕೈಯ್ಯನ್ನುಳ್ಳವರು ಆಳ್ವಾರ್ ಅವರು. ವಕ್ತೃವೈಲಕ್ಷಣ್ಯವನ್ನೂ ಪ್ರಮೇಯ ವೈಲಕ್ಷಣ್ಯವನ್ನೂ ಹೇಳಿದಂತೆ ಇದನ್ನು ಕಲಿಯುವವರಿಗೆ ವೈಲಕ್ಷಣ್ಯ ಹೇಳಿದೆಯೋ ಎಂದರೆ ಆಳ್ವಾರ್ ಹೇಳುತ್ತಾರೆ— 'ಜನ್ಮವೃತ್ತಾದಿಗಳು ಹೇಗಾದರೂ ಇರಬಹುದು. ಇದನ್ನು ಅಧಿಕರಿಸುವುದಕ್ಕೆ ಬೇಕಾದ ರುಚಿ ದೃಢವಾಗಿದ್ದರೆ ಸಾಕು. ಅವರಿಗೆ

ಭಗವತ್ಪ್ರಾಪ್ತಿ ಪ್ರತಿಬಂಧಕವಾದ ಪಾಪಗಳು 'ನಮಗೆ ಇದು ಇರುವುದಕ್ಕೆ ಜಾಗ ವಲ್ಲ'—ಎಂದು ತಾವೇ ಬಿಟ್ಟೋಡುವುವು'—ಎಂದು.

---

### ಆರನೆಯ ಪತ್ತು—ನಾಲ್ಕನೆಯ ತಿರುವೊಳಿ

# 'ಕಣ್ಣುಂ ಶುಟಿನ್ರು'

## ಪ್ರವೇಶ

'ಎಂದು ನಾನು ಪರಮಪದವನ್ನು ಸೇರುವುದು ?' ಎಂದು ಆಳ್ವಾರ್ ಹಂಬಲಿಸಿದರು. 'ಮರಣಮಾನಾಲ್ ವೈಕುಂಠಂ' ಎಂಬಂತೆ ನಾವು ಮಾಡುತ್ತೇವೆ ಎಂದು ಸ್ವಾಮಿ ಅಭಿಪ್ರಾಯಪಡಲು, ಅಲ್ಲಿಯವರೆಗೂ ತಿರುನರೈಯೂರನ್ನು ಅನುಭವಿಸಲು ಆಳ್ವಾರ್ ಇಚ್ಛಿಸುತ್ತಾರೆ. ಶೇಷಿಗೆ ವಿಧೇಯನಾಗಿ ತಾನೇ ಶೇಷಭೂತನಾದವನು ನಡೆದುಕೊಳ್ಳಬೇಕಾದುದು ? ಅವನನ್ನು ಶೇಷಭೂತ ನಿರ್ಬಂಧಿಸುವುದಕ್ಕಾಗುವುದಿಲ್ಲವಲ್ಲ. ಅಲ್ಲಿಯವರೆಗೂ ಮಾಡುವುದೇನು ? ಅವನು ಒಲಿದು ನಿಂತಿರುವ ಕ್ಷೇತ್ರದಲ್ಲಿ ಅವನ ನೆರಳಿನಲ್ಲಿ 'ಅತ್ರೈವ ಶ್ರೀರಂಗೇ ಸುಖಮಾಸ್ವ' ಎಂದು ಹೇಳಿದಂತೆ ಇರುವುದೇ ತಾನೇ ? ಮಕ್ಕಳಹಿತವನ್ನು ತಾಯಿ ತಂದೆಗಳು ಬಯಸಿ ಅವರಿಗೆ ಒದಗುವುದಕ್ಕಾಗಿ ಒಟ್ಟಾಗಿ ಇರುವಂತೆ ತಿರುನರೈಯೂರಿನಲ್ಲಿ ಸರ್ವೇಶ್ವರ ದೇವಿಯೊಡನೆ ಸಾನ್ನಿಧ್ಯ ನೀಡಿದ್ದಾನಷ್ಟೇ ? ಅವನನ್ನು ಬಿಟ್ಟು ಬೇರೆ ಯಾರೂ ಸೇವ್ಯರಲ್ಲ. ಸರ್ವಾವಸ್ಥೆಗಳಲ್ಲಿಯೂ ಹೋಗಿ ಆಶ್ರಯಿಸುವುದಕ್ಕಾಗುವಂತೆ ಸರ್ವಸುಲಭನಾದ ಸ್ವಾಮಿಯನ್ನು ತಿರುನರೈಯೂರಿನಲ್ಲಿ ಹೋಗಿ ಆಶ್ರಯಿಸು ಎಂದು ತಮ್ಮ ಮನಸ್ಸಿಗೆ ಉಪದೇಶಿಸುತ್ತಾರೆ.

**ಕಣ್ಣುಂ ಶುಟಿನ್ರು ಪೀಳೈಯೊಡು ಈಳೈವಂದು ಏಂಗಿನಾಲ್**
**ಪಣ್ ಇನ್ ಮುಟಿಯಾರ್ ಪೈಯೆನಡಮಿನ್ ಎನ್ನಾತಮುಂನ್**

**ವಿಣ್ಣುಂ ಮಲೈಯುಂ ವೇದಮುಂ ವೇಳ್ವಿಯುಂ ಆಯಿನಾನ್**
**ನಣ್ಣು ನರೈಯೂರ್ ನಾಮ್ ತೊಲುದುಂ ಎಲು ನೆಂಜಮೇ**
**॥೧॥**

(ಪೀಳೈಯೊಡು) ಪಿಳಿಚೆಯೊಡನೆ (ಕಣ್ಣುಂ ಶುಟಲು) ಕಣ್ಣುಗಳು ನೀರನ್ನು ಸುರಿಸುತ್ತಾ, ಗುಳಿಬೀಳಲು (ಈಳೈವಂದು) ಶ್ಲೇಷ್ಮವು ಗಂಟಲನ್ನು ಕಟ್ಟಲು (ಏಂಗಿನಾಲ್) ಹಿಂಸೆಗೊಳಗಾಗಿರಲು ಆಗ (ಪಣ್ ಇನ್ ಮುಟಿಯಾರ್) ರಾಗಭರಿತವಾದ ಗಾನದಂತೆ ಮಧುರವಾದ ನುಡಿಗಳನ್ನಾಡುವ ಸ್ತ್ರೀಯರು ('ಪೈಯ ನಡಮಿನ್' ಎನ್ನಾದಮುನ್) 'ಮೆಲ್ಲಗೆ ನಡೆದು ಹೋಗಿ' ಎಂದು ತಿರಸ್ಕರಿಸಿ ಹೇಳುವುದಕ್ಕೆ ಮುನ್ನವೇ (ವಿಣ್ಣುಂ) ಆಕಾಶವೂ (ಮಲೈಯುಂ, ವೇದಮುಂ, ವೇಳ್ವಿಯುಂ) ಪರ್ವತಗಳೂ ವೇದಗಳೂ ಯಾಗಗಳೂ (ಆಯಿನಾನ್) ತಾನೇ ಆಗಿರುವ ಸರ್ವೇಶ್ವರನು (ನಣ್ಣುಂ) ಒಲಿದು ಇರುತ್ತಿರುವ ಜಾಗವಾದ (ನರೈಯೂರು) ತಿರುನರೈಯೂರನ್ನು (ನೆಂಜಮೇ) ಎಲೈ ಮನಸ್ಸೇ, (ನಾಮ್‌ತೊಲುದುಂ) ನಾವು ಸೇವಿಸೋಣ. (ಎಲು) ಎದ್ದೇಳು.

'ಶರೀರಾವಸಾನದಲ್ಲಿ ಪರಮಪದವನ್ನು ಪಡೆಯುವುದಾದರೆ ಅದುವರೆಗೂ ವಿಷಯಾನುಭವದಲ್ಲಿ ಕಾಲ ಕಳೆಯಬಹುದಲ್ಲ'— ಎಂದರೆ ಅದಕ್ಕೆ ಹೇಳುತ್ತಾರೆ—'ಕ್ಷಣಿಕವೂ, ಅಲ್ಪವೂ ಆದುದು ಅದು. ಅದು ಒಂದು ಕ್ಷಣ ಇದ್ದಂತೆ ಮತ್ತೊಂದು ಕ್ಷಣ ಇರದು. ಕೆಲವು ಉಪಾಧಿಗಳ ಕಾರಣ ಇವನಲ್ಲಿ ಸ್ನೇಹ ತೋರಿ ಆ ಉಪಾಧಿಗಳು ಹೋದಾಗ ಇವನನ್ನು ಅನಾದರಿಸಿ ಪರಿಭವಿಸುವರಷ್ಟೇ ? ಆ ಅನುಭವಕ್ಕೆ ಪರಿಕರ ಶರೀರ. ಆ ಶರೀರ ಪರಿಣಾಮ ಹೊಂದಿ ಬಲವನ್ನು ಕಳೆದುಕೊಂಡಾಗ ಇವನನ್ನು ಯಾರು ಆದರಿಸುವರು ? ಆದುದರಿಂದ ಆಕಾಶ ಮೊದಲಾದ ಕಾರಣ ಪದಾರ್ಥಗಳಿಗೂ ಪೃಥಿವೀ ಮೊದಲಾದ ಕಾರ್ಯ ಪದಾರ್ಥಗಳಿಗೂ ನಿರ್ವಾಹಕನಾಗಿ ಜಗದಾಕಾರನೂ, ಸರ್ವವೇದ ಪ್ರತಿಪಾದ್ಯನೂ, ಸರ್ವಕರ್ಮ ಸಮಾರಾಧ್ಯನೂ, ಸಂಸಾರಿಗಳ ರಕ್ಷಣೆಯಲ್ಲಿ ದೀಕ್ಷಿತನೂ ಆದ ಸರ್ವೇಶ್ವರನು ಇರುತ್ತಿರುವ ತಿರುನರೈಯೂರಿಗೆ ಹೋಗಿ ಅವನನ್ನು ಆಶ್ರಯಿಸೋಣ ಎನ್ನುತ್ತಾರೆ ಆಳ್ವಾರ್ ತಮ್ಮ ಮನಸ್ಸಿಗೆ.

**ಕೊಂಗುಉಣ್ ಕುಟಿಲಾರ್ ಕೂಡಿ ಇರುನ್ದು ಶಿರಿತ್ತು ನೀರ್**
**ಇಂಗೆನ್ ಇರುಮಿ ಎಂಬಾಲ್ ವಂದದು ಎನ್ರು**
**ಇಹಟ್ಟಾದ ಮುನ್**
**ತಿಂಗಳ್ ಎರಿಕಾಲ್ ಶೆವ್‌ಶುಡರ್ ಆಯುವನ್ ತೇಶುಡೈ**
**ನಂಗಳ್ ನರೈಯೂರ್ ನಾವ್ ತೊಟುದುಂ ಎಟು**
**ನೆಂಜಮೇ ॥೨॥**

(ಕೊಂಗುಉಣ್ ಕುಟಿಲಾರ್) ಪರಿಮಳ ತಂಗಿರುವ ತಲೆಗೂದಲನ್ನುಳ್ಳ ಹೆಂಗಳೆಯರು (ಕೂಡಿ ಇರುಂದು) ಗುಂಪುಗುಂಪಾಗಿರುತ್ತಾ (ಶಿರಿತ್ತು) ಪರಿಹಾಸ ಮಾಡಿ (ನೀರ್ ಇರುಮಿ ಇಂಗು ಎಮ್‌ಪಾಲ್‌ವಂದದು ಎನ್) ನೀವು ಕೆಮ್ಮುತ್ತಾ ಈ ಜಾಗದಲ್ಲಿ ನಮ್ಮ ಬಳಿ ಬಂದುದು ಯಾತಕ್ಕೆ ? (ಎನ್ರು ಇಹ ಟ್ಟಾದ ಮುನ್) ಎಂದು ತಿರಸ್ಕರಿಸುವುದಕ್ಕೂ ಮೊದಲೇ (ತಿಂಗಳ್, ಎರಿ, ಕಾಲ್, ಶೆವ್‌ಶುಡರ್ ಆಯುವನ್) ಚಂದ್ರ, ಅಗ್ನಿ, ವಾಯು, ಸೂರ್ಯ ಇದೇ ಮೊದಲಾದ ಸಮಸ್ತವೂ ಆಗಿರುವ ನಮ್ಮ ಸ್ವಾಮಿಯುದೂ, (ತೇಶು ಉಡೈ) ತೇಜಸ್ಸನ್ನುಳ್ಳುದೂ (ನಂಗಳ್) ನಮಗೆ ಆಶ್ರಯಣೀಯವಾದುದೂ ಆದ (ನರೈಯೂರ್ ನಾಮ್ ತೊಟುದುಂ, ನೆಂಜಮೇ ಎಟು) ತಿರುನರೈ ಯೂರನ್ನು ನಾವು ಸೇವಿಸೋಣ, ಎಲೈ ಮನಸ್ಸೇ, ಎದ್ದೇಳು.

ಇವನಲ್ಲಿ ಅರ್ಥವೂ ಯೌವ್ವನವೂ ಇದ್ದಾಗ ಆ ಹೆಂಗಳೆಯರು ಒಬ್ಬರು ಮತ್ತೊಬ್ಬರೊಡನೆ ಕೂಡಿರುತ್ತಿರಲಿಲ್ಲ. ಈಗ ಅವುಗಳು ನಾಶವಾದ ಮೇಲೆ ಇವನನ್ನು ಪರಿಹಾಸ ಮಾಡಲು ಅವರು ಗುಂಪುಗುಂಪಾಗಿ ಕೂಡಿರುವರಂತೆ. 'ನಿಮ್ಮನ್ನು ನೀವು ಅರಿಯಿರಾ ? ನಮ್ಮನ್ನು ನೀವು ಅರಿಯಿರಾ ? ಇಲ್ಲಿ ಏನು ಮಾಡುವುದಕ್ಕೆ ನೀವು ಬಂದದ್ದು ? ನೀವು ಬರುವ ಜಾಗ ಇಂಥದ್ದು'—ಎಂದು ಅನಾದರೋಕ್ತಿಗಳನ್ನು ಹೇಳುವಮುನ್ನವೇ ಜಗತ್ತಿಗೆ ಉಪಕಾರಕವಾದ ಪದಾರ್ಥಗಳನ್ನುಂಟುಮಾಡಿದವನೂ ಜಗದ್ರಕ್ಷಕನೂ ಆದ ಸರ್ವೇಶ್ವರನು ಪರಿಗ್ರಹಿಸಿರುವ ಉಜ್ವಲವಾದ ತಿರುನರೈಯೂರನ್ನು ಹೋಗಿ ಆಶ್ರಯಿಸೋಣ ಎನ್ನುತ್ತಾರೆ ತಮ್ಮ ಮನಸ್ಸಿಗೆ.

**ಕೊಂಗಾರ್ ಕುಟಿಲಾರ್ ಕೂಡಿ ಇರುಂದು ಶಿರಿತ್ತು ಎಮ್ಮೈ**
**ಎವರ್ ಕೋಲಂ ಅಯ್ಯೋ ಎನ್ ಇನಿಕಾಣ್ಬದು ಎನ್ನಾದಮುನ್**

**ಶೆಂಗೋಲ್ ವಲವನ್ ತಾನ್ ಪಣಿಂದು ಏತ್ತಿ ತಿಹಟುಂಊರ್**
**ನವ್‌ಕೋನ್ ನರ್ಯೈಯೂರ್ ನಾಮ್ ತೊಟುದುಂ**
**ಎಟು ನೆಂಜಮೇ ॥೩॥**

(ಕೊಂಗು ಆರ್ ಕುಟಿಲಾರ್) ಪರಿಮಳವು ಸೂಸುವ ತಲೆಗೂದಲನ್ನುಳ್ಳ ಹೆಂಗಳೆಯರು (ಕೂಡಿ ಇರುಂದು) ಗುಂಪುಗುಂಪಾಗಿ ಇರುತ್ತಾ (ಶಿರಿತ್ತು) ಪರಿಹಾಸಮಾಡಿ (ಐಯಾ) ಎಲೈ ಮುದುಕರೇ, (ಇನಿ) ಹೀಗೆ ನೀವು ಮುದಿತನವನ್ನು ಹೊಂದಿದ ಮೇಲೆ (ಎಮ್ಮೈ ಎವರ್‌ಕೋಲಂ ಎನ್ ಕಾಣ್ಬದು) ನಮ್ಮನ್ನೂ ನಮ್ಮ ಅಲಂಕಾರವನ್ನೂ ಏತಕ್ಕಾಗಿ ನೋಡುತ್ತಿರುವಿರಿ ? (ಎನ್ನಾದಮುನ್) ಎಂದು ತಿರಸ್ಕರಿಸುವುದಕ್ಕೆ ಮೊದಲೇ (ಶೆಂಗೋಲ್ ವಲವನ್ ತಾನ್) ರಾಜದಂಡವನ್ನು ಧರಿಸಿರುವ ಚೋಳರಾಜನು (ಪಣಿಂದು ಏತ್ತಿ ತಿಹಟುಂ ಊರ್) ಆಶ್ರಯಿಸಿ ಸ್ತುತಿಸಿ ಪ್ರಕಾಶಪಡಿಸುವ ದಿವ್ಯದೇಶವಾದುದೂ (ನವ್‌ಕೋನ್) ನಮ್ಮ ಸ್ವಾಮಿಗೆ ಸೇರಿದುದೂ ಆದ (ನರ್ಯೈಯೂರ್ ನಾವರ್ ತೊಟುದುಂ ಎಟು ನೆಂಜಮೇ) ತಿರುನರ್ಯೈಯೂರನ್ನು ನಾವು ಸೇವಿಸೋಣ, ಎಲೈ ಮನಸ್ಸೇ, ಎದ್ದೇಳು.

ತರುಣಿಯರು ತಿರಸ್ಕಾರದಿಂದ ಮಾತಾಡಿದರೂ 'ಆಶ್ಲೈಕಾ ತರುಣಾಯತೇ'– ಎಂಬಂತೆ ಕಣ್ಣೆರದು ನೋಡಿಯಾದರೂ ಹೋಗೋಣ ಎಂದು ನಿಂತಿರುವರಂತೆ. ಹಿಂಡುಹಿಂಡಾಗಿರುವ ಆ ಹೆಂಗಳೆಯರು, 'ನಿಮ್ಮ ಮುದಿತನವನ್ನು ಮರೆತರಾ ? ನಮ್ಮ ಚೆಲುವನ್ನೂ ಅಲಂಕಾರವನ್ನೂ ನೀವು ನೋಡಿ ಏನು ಮಾಡುವಿರಿ ? ಇಲ್ಲಿಂದ ದೂರ ಹೋಗಿ'—ಎಂದು ಹೇಳುವ ಮಾತುಗಳನ್ನು ಕೇಳುವ ಮೊದಲೇ ಎಲ್ಲರಿಗೂ ಅವರವರ ಅಪೇಕ್ಷಿತಗಳನ್ನನುಗ್ರಹಿಸಲೋಸುಗ ಆ ಸ್ವಾಮಿಯು ಬಂದು ನೆಲಸಿರುವ ತಿರುನರ್ಯೈಯೂರನ್ನು ನಾವು ಆಶ್ರಯಿಸೋಣ.

**ಕೊಂಬುಂ ಅರವಮುಂ ವಲ್ಲಿಯುಂ ವೆನ್ರನುಣ್ ಏರ್ ಇಡ್ಯೈ**
**ವಂಬು ಉಣ್‌ಕುಟಿಲಾರ್ ವಾಶಲ್ ಇಡ್ಯೈತ್ತು ಇಹಟಾದ**
**ಮುನ್**

**ಶೆಂಪೊನ್ ಕಮುಕು ಇನಂ ತಾನ್ ಕನಿಯುಂ ಶೆಟು**
**ಶೋಲೈ ಶೂಟ್**
**ನಂಬನ್ ನರೈಯೂರ್ ನಾಮ್ ತೊಟುದುಂ ಎಟುನೆಂಜಮೇ**
**॥೪॥**

(ಕೊಂಬುಂ) ವಂಜಿಕ್ಕೊಡಿಯನ್ನೂ (ಅರವಮುಂ) ಹಾವನ್ನೂ (ವಲ್ಲಿಯುಂ) ಎಳೆಯ ಬಳ್ಳಿಯನ್ನೂ (ವೆನ್ರುನುಣ್ ಏರ್ ಇಡೈ) ಸೋಲಿಸಿದ ಸೂಕ್ಷ್ಮವಾದುದೂ ಸುಂದರವಾದುದೂ ಆದ ಸೊಂಟವನ್ನುಳ್ಳವರೂ, (ವಂಬು ಉಣ್ ಕುಟಿಲಾರ್) ಪರಿಮಳವು ಸೂಸುವ ತಲೆಗೂದಲನ್ನುಳ್ಳವರೂ ಆದ ತರುಣಿಯರು (ವಾಶಲ್ ಅಡೈತ್ತು) ಮನೆಯ ಹೆಬ್ಬಾಗಿಲನ್ನು ಮುಚ್ಚಿ (ಇಹಟಾದ ಮುನ್) ಅಪಮಾನಪಡಿಸುವುದಕ್ಕೂ ಮೊದಲೇ (ಕಮುಕು ಇನಂ) ಅಡಿಕೆಯ ಮರಗಳ ಗುಂಪುಗಳು (ಶೆಮ್‌ಪೊನ್ ಕನಿಯುಂ) ಕೆಂಪಾದ ಚಿನ್ನದಂತೆ ಚೆನ್ನಾಗಿ ಫಲಗಳನ್ನೂ ಹೊಂದಿರುವುದೂ, (ಶೆರು ಶೋಲೈ) ಸಮೃದ್ಧವಾದ ತೋಪುಗಳಿಂದ (ಶೂಟ್) ಸುತ್ತುವರಿಯಲ್ಪಟ್ಟುದೂ (ನಂಬನ್) ವಿಶ್ವಸಾರ್ಹನಾದ ಸ್ವಾಮಿಗೆ ಸೇರಿದುದೂ ಆದ (ನರೈಯೂರ್ ನಾಮ್ ತೊಟುದುಂ, ಎಟು, ನೆಂಜಮೇ) ತಿರುನರೈಯೂರನ್ನು, ಎಲೈ ಮನಸ್ಸೇ, ನಾವು ಸೇವಿಸೋಣ. ಎದ್ದೇಳು.

ಚೆಲುವೆಯರಾದ ತರುಣಿಯರು ಮೊದಲೆಲ್ಲಾ ಇವನನ್ನು ಬಯಸಿ ಇವನು ಮುದುಕನಾಗಲು ಇವನನ್ನು ಮನೆಯ ಹೊರಗೆ ತಳ್ಳಿ ಬಾಗಿಲನ್ನು ಹಾಕುವರು. ಆದರೂ ಚಾಪಲ್ಯದಿಂದ ಇವನು ಅಲ್ಲೇ ಬಾಗಿಲ ಹೊರಗೆ ನಿಂತಿರುವನಷ್ಟೇ ? ಇವನು ನಾಚಿ ಅಲ್ಲಿಂದ ಹೊರಟು ಹೋಗುವಂತೆ ಮಾಡಲು ಅವರು ಇವನಿಗೆ ಭೋಗ ಯೋಗ್ಯತೆ ಇಲ್ಲದಿರುವುದನ್ನು ಹೇಳಿಕೊಂಡು ಪರಿಭವಿಸುತ್ತಾರೆ. ಇಂಥ ಪರಿಭವೋಕ್ತಿ ಕಿವಿಯ ಮೇಲೆ ಬೀಳುವ ಮುನ್ನವೇ ಮುಕ್ತಪ್ರಾಪ್ಯವಾದ ಭೂಮಿ ಎಂಬಂತೆ ಕಂಗೊಳಿಸುತ್ತಿರುವ ತಿರುನರೈಯೂರನ್ನು ಆಶ್ರಯಿಸೋಣ. ಸರ್ವಾವಸ್ಥೆಯಲ್ಲಿಯೂ ಆಶ್ರಯಿಸುವುದಕ್ಕಾಗುವಂತೆ ವಿಶ್ವಸನೀಯನಾದ ಸ್ವಾಮಿ ಅಲ್ಲಿ ನಿತ್ಯವಾಸ ಮಾಡುತ್ತಿರುವನಷ್ಟೇ ?

**ವಿಲಗುಂ ಕಯಲುಂ ವೇಲುಂ ಒಣ್‌ಕಾವಿಯುಂ ವೆನ್ರ ಕಣ್**
**ಶಲಂಕೊಂಡ ಶೊಲ್ಲಾರ್ ತಾಂಗಳ್ ಶಿರಿತ್ತು ಇಹಟಾದಮುನ್**

**ಮಲಂಗುಂ ವರಾಲುಂ ವಾಳೈಯುಂ ಪಾಯಿಶ್ ವಯಲ್**
**ಶೂಟ್ತರು**
**ನಲಂಗೊಳ್ ನರೈಯೂರ್ ನಾಮ್ ತೊಟುದುಂ ಎಟು**
**ನೆಂಜಮೇ ॥೫॥**

(ವಿಲಂಗುಂ) ಜಿಂಕೆಯನ್ನೂ (ಕಯಲುಂ) ಮತ್ಸ್ಯವನ್ನೂ (ವೇಲುಂ) ವೇಲಾಯುಧವನ್ನೂ (ಒಣ್ಕಾವಿಯುಂ) ಚೆಲುವಾದ ಶೆಂಗಟುನೀರ್ ಹೂವನ್ನೂ (ವೆನ್ರಕಣ್) ಸೋಲಿಸಿದ ಕಣ್ಣುಗಳನ್ನುಳ್ಳವರೂ (ಶಲಂ ಕೊಂಡ ಶೊಲ್ಲಾರ್ ತಾಂಗಳ್) ಕಪಟಪನ್ನುಳ್ಳ ಮಾತುಗಳನ್ನು ಹೊಂದಿದವರೂ ಆದ ಹೆಂಗಳೆಯರು (ಶಿರಿತ್ತು) ಅಪಹಾಸ್ಯ ಮಾಡಿ (ಇಹಟಾದಮುನ್) ತಿರಸ್ಕರಿಸುವುದಕ್ಕೂ ಮೊದಲೇ (ಮಲಂಗುಂ ವರಾಲುಂ ವಾಳೈಯುಂ) ಮಲಂಗು, ವರಾಲ, ವಾಳೈ ಎಂಬುವ ಬಗೆಬಗೆಯಾದ ಮೀನುಗಳು (ಪಾಯಶ್ ವಯಲ್ ಶೂಟ್ ತರು) ಚಿಮ್ಮಿ ಆಟವಾಡುತ್ತಿರುವ ಗದ್ದೆಗಳಿಂದ ಸುತ್ತುವರಿಯಲ್ಪಟ್ಟಿದ್ದೂ, (ನಲಂಕೊಳ್) ಅತ್ಯಧಿಕವಾದ ಕ್ಷೇಮವನ್ನುಳ್ಳುದೂ ಆದ (ನರೈಯೂರ್ ನಾಮ್ ತೊಟುದುಂ ಎಟುನೆಂಜಮೇ) ತಿರುನರೈಯೂರನ್ನು, ಎಲೈ ಮನಸ್ಸೇ, ನಾವು ಹೋಗಿ ಆಶ್ರಯಿಸೋಣ, ಎದ್ದೇಳು.

ಆ ಸುಂದರಿಯರ ಕಣ್ಣುಗಳು ಮೌಗ್ಧ್ಯದಲ್ಲಿ ಜಿಂಕೆಯಕಣ್ಣನ್ನೂ ಚಲನೆಯಲ್ಲಿ ಮೀನನ್ನೂ, ತೀಕ್ಷ್ಣತೆಯಲ್ಲಿ ವೇಲಾಯುಧವನ್ನೂ, ಕೆಂಬಣ್ಣದಲ್ಲಿ ಶೆಂಗಟುನೀರ್ ಹೂವನ್ನೂ ಹೋಲಿ ಅವುಗಳನ್ನೂ ಜಯಿಸಿ ಬಿಟ್ಟಿವೆಯಂತೆ. ಅವರು ಛಲೋಕ್ತಿಗಳನ್ನು ಹೇಳುವವರೇ ವಿನಾ ಒಮ್ಮೆಯೂ ಅನುಕೂಲವಾದ ಮಾತುಗಳನ್ನಾಡುವವರಲ್ಲ. ಅವರು ಅಪಹಾಸ್ಯಮಾಡಿ ಅನಾದರಿಸುವ ಮೊದಲೇ ತಿರುನರೈಯೂರನ್ನು ಆಶ್ರಯಿಸೋಣ, ಬಾ ಎಂದು ತಮ್ಮ ಮನಸ್ಸನ್ನು ಕರೆಯುತ್ತಿದ್ದಾರೆ. 'ಇಂಥಾದ್ದು ನಮಗೆ ಲಭಿಸಲಿಲ್ಲ'—ಎಂದು ಕೊರೆಪಡದಂತೆ ಅಲ್ಲಿರುವ ಜಲಚರಗಳೂ ಸಹ ಅಭಿಮತಲಾಭದಿಂದ ನಲಿದು ವರ್ತಿಸುವ ದೇಶವಾಗಿದೆ ಅದು.

**ಮಿನ್ನೇರಿಡೈಯಾರ್ ವೇಳ್ಕೈಯೈ ಮಾತ್ತಿ ಇರುಂದು**
**ಎನ್ ನೀರ್ ಇರುಮಿ ಎಮ್ ಪಾಲ್ವಂದದು ಎನ್ನು**
**ಇಹಟಾದ ಮುನ್**

**ತೊಲ್ ನೀರ್ ಇಲಂಗ್ಗೈ ಮಲಂಗ ವಿಲಂಗು ಎರಿ ಊಟ್ಟಿನಾನ್**
**ನನ್ನೀರ್ ನರೈಯೂರ್ ನಾಮ್ ತೊಟುದುಂ**
**ಎಟು ನೆಂಜಮೇ ॥೬॥**

(ಮಿನ್ ನೇರ್ ಇಡೈಯಾರ್) ಮಿಂಚನ್ನು ಹೋಲುವ ಸೊಂಟವನ್ನುಳ್ಳ ಹೆಂಗಳೆಯರು (ವೇಟ್ಕೈಯೈ) ಮೊದಲು ಇಟ್ಟಿದ್ದ ಪ್ರೀತಿಯನ್ನು (ಮಾತ್ತಿ ಇರುಂದು) ಬದಲಾಯಿಸಿಬಿಟ್ಟವರಾಗಿ (ನೀರ್ ಇರುಮಿ ಎಮ್ ಪಾಲ್ವಂದದು ಎನ್) ಮುದಿಯರಾದ ನೀವು ಕೆಮ್ಮಿಕೊಂಡು ನಮ್ಮ ಬಳಿ ಬಂದುದು ಏತಕ್ಕಾಗಿ ? (ಎನ್ರು) ಎಂದು (ಇಹಟಿಾದಮುನ್) ತಿರಸ್ಕಾರ ಮಾಡುವ ಮುನ್ನವೇ (ತೊಲ್ ನೀರ್ ಇಲಂಗ್ಗೈ) ಸಾಗರವು ಸುತ್ತುವರಿವ ಲಂಕಾನಗರವು (ಮಲಂಗ) ವ್ಯಾಕುಲ ಗೊಳ್ಳುವಂತೆ (ವಿಲಂಗು) ಹನುಮಂತನ ಮೂಲಕ (ಎರಿಊಟ್ಟಿನಾನ್) ಬೆಂಕಿಯನ್ನು ಹಚ್ಚಿಸಿದವನಾದ ಪರಮಾತ್ಮನಿಗೆ ಸೇರಿದುದೂ, (ನಲ್‌ನೀರ್) ಒಳ್ಳೆಯ ತೀರ್ಥಗಳನ್ನುಳ್ಳುದೂ ಆದ (ನರೈಯೂರ್ ನಾಮ್ ತೊಟುದುಂ ಎಟು ನೆಂಜಮೇ) ತಿರುನರೈಯೂರನ್ನು ಎಲೈ ಮನಸ್ಸೇ, ನಾವು ಸೇವಿಸೋಣ, ಎದ್ದೇಳು.

ಒಂದು ಕಾಲದಲ್ಲಿ ಇವರಲ್ಲಿ ಅಭಿನಿವೇಶವನ್ನು ಹೊಂದಿದ್ದ ಆ ಹೆಂಗಳೆಯರು ಇವರು ಮುದುಕರಾದ ಮೇಲೆ ತಮ್ಮ ಪ್ರೀತಿಯನ್ನು ಬದಲಾಯಿಸಿಬಿಟ್ಟವರಾಗಿ, ಇವರ ಮುದಿತನವನ್ನು ನೋಡಿ ಅಪಹಾಸ್ಯ ಮಾಡುವರು. ಶ್ರೀಮದಾಂಜನೇಯನ ಮೂಲಕ ಲಂಕೆಯನ್ನು ಸುಟ್ಟುಹಾಕಿದವನು ನಮ್ಮ ಪ್ರಭು. ಅವನಿಗೆ ಸೇರಿದುದು ಈ ದಿವ್ಯಕ್ಷೇತ್ರ. ಸಕಲತಾಪವೂ ಹೋಗುವಂತಹ ಜಲಸಮೃದ್ಧಿಯನ್ನು ಹೊಂದಿರುವ ದಿವ್ಯದೇಶ ಅದು. ನಮ್ಮ ವಿರೋಧಿಗಳನ್ನು ಸವಾಸನವಾಗಿ ಹೋಗಲಾಡಿಸುವ ಕೀರ್ತಿಯನ್ನೂ ಶಕ್ತಿಯನ್ನೂ ಹೊಂದಿರುವ ಪರಮಾತ್ಮನು ನಿತ್ಯವಾಸಮಾಡುತ್ತಿರುವ ದೇಶ ಅದು.

**ವಿಲ್ಏರ್‌ನುದಲಾರ್ ವೇಟ್ಕೈಯೈ ಮಾತ್ತಿ ಶಿರಿತ್ತು ಇನ್**
**ಪೊಲ್ಲಾನ್ ತಿರೈಂದಾನೆನ್ನುಂ ಪುರನ್ ಉರೈ**
**ಕೇಳ್ಪದನ್ ಮುನ್**
**ಶೊಲ್ಲಾರ್ ಮರೈನಾನ್ಗು ಓದಿ ಉಲಹಿಲ್ ನಿಲಾಯುವರ್**
**ನಲ್ಲಾರ್ ನರೈಯೂರ್ ನಾಮ್ ತೊಟುದುಂ ಎಟು ನೆಂಜಮೇ**
**॥೭॥**

(ವಿಲ್‌ಏರ್ ನುದಲಾರ್) ಬಿಲ್ಲಿನ ಹಾಗೆ ಸುಂದರವಾದ ನೆತ್ತಿಯುನ್ನುಳ್ಳ ಸ್ತ್ರೀಯರು (ವೇಟ್ಕೈಯ್ಯೆಮಾತ್ತಿ) ತಾವು ಇಟ್ಟಿದ್ದ ಪ್ರೀತಿಯನ್ನು ಬದಲಾಯಿಸಿ (ಶಿರಿತ್ತು) ಪರಿಹಾಸ ಮಾಡಿ (ಇವನ್ ಪೊಲ್ಲಾನ್ ತಿರೈನ್ದಾನ್) 'ಈ ಮುದುಕ ಕೆಟ್ಟವನು, ಮೈಯೆಲ್ಲಾ ಸುಕ್ಕಾಯಿತು' (ಎನ್ನುಂ) ಎಂದು ತಿರಸ್ಕರಿಸಿ ಹೇಳುವ (ಪುರನ್‌ಉರೈ) ಧಿಕ್ಕಾರದ ಮಾತುಗಳನ್ನು (ಕೇಳ್ಪದನ್‌ಮುನ್) ಕೇಳುವುದಕ್ಕೆ ಮೊದಲೇ (ಶೊಲ್ ಆರ್) ಪದಸಮೃದ್ಧಿಯುನ್ನುಳ್ಳ (ನಾನ್ಮರೈ) ನಾಲ್ಕು ವೇದಗಳನ್ನೂ (ಓದಿ) ಅಧಿಕರಿಸಿ (ಉಲಹಿಲ್) ಈ ಲೋಕದಲ್ಲಿ (ನಿಲಾಯುವರ್) ಆ ವೇದಗಳನ್ನು ಪ್ರವರ್ತನಗೊಳಿಸಿ ಸ್ಥಾಪಿಸುವವರಾದ (ನಲ್ಲಾರ್) ಸಜ್ಜನರಾದ ವೈದಿಕರು ನೆಲಸಿರುವಂತಹ (ನರೈಯೂರ್ ನಾಮ್ ತೊಟುದುಂ ಎಟು ನೆಂಜಮೇ) ತಿರುನರೈಯೂರನ್ನು ನಾವು ಹೋಗಿ ಸೇವಿಸೋಣ, ಏಳು ಎಲೈ ಮನಸ್ಸೇ.

ಮೊದಲು, 'ಇವನನ್ನು ಪಡೆಯದಿದ್ದರೆ ನಾವು ಬದುಕಲಾರೆವು' ಎಂದು ಆಶೆಪಟ್ಟವರೇ ಆ ಆಶೆಯನ್ನು ಬಿಟ್ಟುಬಿಟ್ಟರು. ಹೋಗಲಿ ಇವನನ್ನು ಮರೆತರೇ ? ಅದೂ ಇಲ್ಲ. ಇವನೆದುರಿಗೇ ಇವನ ದೇಹದ ಅವಸ್ಥೆಯನ್ನು ಕುರಿತಾಡಿಕೊಂಡು ಗೇಲಿಮಾಡುವರು. ಅಂಥ ತಿರಸ್ಕಾರದ ಮಾತು ಕೇಳುವುದಕ್ಕೂ ಮೊದಲೇ ಈ ಕ್ಷೇತ್ರಕ್ಕೆ ಹೋಗಿ ಸೇವಿಸೋಣವೆನ್ನುತ್ತಾರೆ ತಮ್ಮ ಮನಸ್ಸಿಗೆ. ವೇದಾಧ್ಯಯನ ಸಂಪನ್ನರೂ ವೇದ ಪ್ರವರ್ತಕರೂ ಆಚಾರಪ್ರಧಾನರೂ ಆಗಿ ಬೆಳಗುವ ದಿವ್ಯಕ್ಷೇತ್ರ ಅದು.

**ವಾಳ್ ಒಣ್‌ಕಣ್ ನಲ್ಲಾರ್ ತಾಂಗಳ್ ಮುದನನ್**
**ಎನ್ರಾರ್ ತನ್ನೈ**
**ಕೇಣ್ಣಿನ್‌ಗಳ್ ಈಳೈಯೊಡು ಏಂಗು ಕಿಟವನ್**
**ಎನ್ನಾದ ಮುನ್**
**ನೇಳ್ಪುಂ ವಿಟವುಂ ವೀದಿಯಿಲ್ ಎನ್ರುಂ ಅರಾದಊರ್**
**ನಾಳುಂ ನರೈಯೂರ್ ನಾಮ್‌ತೊಟುದುಂ ಎಟು ನೆಂಜಮೇ**

॥ ೮ ॥

(ವಾಳ್ ಒಣ್‌ಕಣ್) ಕತ್ತಿಯ ಅಲಗನ್ನು ಹೋಲುತ್ತಾ ಸ್ಫುರಿಸುವ ಸುಂದರವಾದ ಕಣ್ಣುಗಳನ್ನುಳ್ಳ (ನಲ್ಲಾರ್) ಸ್ತ್ರೀಯರುಗಳು (ತಾಂಗಳ್) ತಾವೇ

(ಮದನನ್ ಎನ್ಬಾರ್ ತಮ್ಮೈ) 'ಇವನು ಸಾಕ್ಷಾತ್ ಮನ್ಮಥನೇ' ಎಂದು ಹಿಂದೆ ಯಾರನ್ನು ಕೊಂಡಾಡುತ್ತಿದ್ದರೋ ಅವರನ್ನೇ ಕುರಿತು (ಈಳೈಯೊಡು ಏಂಗು ಕಿಟಿವನ್ ಕೇಣ್ಮಿನ್‌ಗಳ್) ಶ್ಲೇಷ್ಮದೊಡನೆ ಕೂಡಿ ನರಳುತ್ತಿರುವ ಈ ಮುದುಕ ನನ್ನು 'ಬಂದ ಕೆಲಸವೇನು ?' ಎಂದು ಕೇಳಿ (ಎನ್ನಾದವುನ್) ಎಂದು ಧಿಕ್ಕರಿಸುವ ಮೊದಲೇ (ವೀದಿಯಿಲ್) ಬೀದಿಗಳಲ್ಲಿ (ವೇಳ್ವಿಂ ವಿಟಿವುಂ ಎನ್ರುಂ ಅರಾದ ಊರ್) ಯಾಗಗಳೂ ಉತ್ಸವಗಳೂ ಒಂದು ದಿವಸವೂ ತಪ್ಪದಂತೆ ಇರುತ್ತಿರುವ ಊರಾದ (ನರೈಯೂರ್ ನಾಳುಂ ನಾಮ್ ತೊಟುದುಂ. ನೆಂಜಮೇ ಎಟು) ತಿರುನರೈಯೂರನ್ನು ನಾವು ಅನುದಿನವೂ ಸೇವಿಸೋಣ, ಎಲೈ ಮನಸ್ಸೇ, ಎದ್ದೇಳು.

ಇವನಲ್ಲಿ ದ್ರವ್ಯವೂ ಯೌವ್ವನವೂ ಇದ್ದ ದಿನ ಇವನನ್ನು 'ನೀನೇ ಕಾಮ ದೇವ' ಎಂದು ಹೊಗಳುತ್ತಿದ್ದವರು ವೃದ್ಧನಾಗಿ ಹೋದಾಗ ಅವನನ್ನು ಧಿಕ್ಕರಿಸಿ, ಗೆಳತಿಯರೊಡನೆ, 'ಈ ಮುದಿಯ ಇಲ್ಲೇಕೆ ಬಂದ ? ಕೇಳಿ' ಎಂದು ಹೇಳುವ ಮುನ್ನ ತಿರುನರೈಯೂರ್ ಕ್ಷೇತ್ರದಲ್ಲಿ ಹೋಗಿ ಅವನನ್ನು ಸೇವಿಸೋಣ ಎನ್ನುತ್ತಾರೆ. ಪರಮಪದದಲ್ಲಿ ಆಗುವ ನಿತ್ಯಾನುಭವವನ್ನು ಹೊಂದುವವರೆಗೂ ಅದಕ್ಕೆ ಸಾಟಿಯಾಗಿರುವ ತಿರುನರೈಯೂರನ್ನು ಸೇರಿ ಅನುಭವಿಸೋಣ.

**ಕನಿಶೇರ್‌ನ್ದು ಇಲಂಗು ನಲ್‌ವಾಯವರ್ ಕಾದನ್‌ಮೈ ವಿಟ್ಟಿಡ**
**ಕುನಿಶೇರ್‌ನ್ದು ಉಡಲಂ ಕೋಲಿಲ್ ತಳರ್‌ನ್ದು**
**ಇಳೈಯಾದ ಮುನ್**
**ಪನಿಶೇರ್ ವಿಶುಂಬಿಲ್ ಪಾಲ್ ಮದಿಕೊಳ್ ವಿಡುತ್ತಾನ್**
**ಇಡಂ**
**ನನಿಶೇರ್ ನರೈಯೂರ್ ನಾಮ್ ತೊಟುದುಂ ಎಟು ನೆಂಜಮೇ**
**॥೯॥**

(ಕನಿ ಶೇರ್‌ನ್ದು ಇಲಂಗು) ಪಕ್ವವಾದ ತೊಂಡೆಯ ಹಣ್ಣಿನಂತೆ ಪ್ರಕಾಶಿಸುವ (ನಲ್‌ವಾಯವರ್) ಸುಂದರವಾದ ಅಧರವನ್ನುಳ್ಳ ಹೆಂಗಳೆಯರು (ಕಾದನ್ ಮೈವಿಟ್ಟಿಡ) ಅವರ ಪ್ರೇಮವನ್ನು ಬಿಟ್ಟುಬಿಡುವ ರೀತಿ (ಉಡಲುಂ ಕುನಿ ಶೇರ್‌ನ್ದು) ದೇಹವು ಗೂನಾಗಿ ಬಾಗಿ (ಕೋಲಿಲ್ ತಳರ್‌ನ್ದು ಇಳೈಯಾದ ಮುನ್)

ಕೋಲನ್ನು ಹಿಡಿದುಕೊಂಡು ತಡವರಿಸುವ ಮೊದಲೇ (ವಿಶುಂಬಿಲ್) ಆಕಾಶದಲ್ಲಿ (ಪಾಲ್) ಹಾಲನ್ನು ಹೋಲುತ್ತಾ (ಪನಿಶೇರ್) ತಂಪನ್ನು ಹೊಂದಿರುವವನಾದ (ಮದಿಕೊಳ್) ಚಂದ್ರನ ದುಃಖವನ್ನು (ವಿಡುತ್ತಾನ್ ಇಡಂ) ಹೋಗಲಾಡಿಸಿದ ಪರಮಾತ್ಮನು ಇರುತ್ತಿರುವಂಥ ಜಾಗವಾದುದೂ, (ನನಿ ಶೇರ್) ಹಿರಿಮೆಯನ್ನುಳ್ಳದೂ ಆದ (ನರೈಯೂರ್ ನಾಮ್ ತೊಟುದುಂ ಎಟು ನೆಂಜಮೇ) ತಿರುನರೈಯೂರನ್ನು, ಎಲೈ ಮನಸ್ಸೇ, ನಾವು ಸೇವಿಸೋಣ ಎದ್ದೇಳು.

ವೃದ್ಧನಾಗಿ, ದೇಹವು ಬಾಗಿಹೋಗಿ, ಕೊಲನ್ನು ಹಿಡಿಯುವ ಶಕ್ತಿ ಇಲ್ಲದವನಾಗಿ ತತ್ತರಿಸುವ ಮುನ್ನವೇ ಆ ದಿವ್ಯಕ್ಷೇತ್ರವನ್ನು ಹೋಗಿ ಸೇವಿಸ ಬೇಕು. ಚಂದ್ರನಿಗೆ ಬಂದ ಕ್ಷಯವನ್ನು ಹೋಗಲಾಡಿಸಿದ ಪರಮಾತ್ಮನಿರುವ ದಿವ್ಯದೇಶ ಅದು. ಪಿರಾಟ್ಟಿಗಾಗಿ ಆ ಕ್ಷೇತ್ರವನ್ನು ಅವನು ಪರಿಗ್ರಹಿಸಿದ ಎಂಬುವ ಹಿರಿಮೆಯನ್ನುಳ್ಳದು ಆ ಕ್ಷೇತ್ರ. ಆ ಕ್ಷೇತ್ರವನ್ನು ಆ ಪಿರಾಟ್ಟಿಯ ಪರಿಕರಭೂತರಾದ ನಾವು ಹೋಗಿ ಆಶ್ರಯಿಸೋಣ.

**ಪಿರೈಶೇರ್ ನುದಲಾರ್ ವೇಣುದಲ್ ನಮ್ಮೈ ಇಲಾದ ಮುನ್**
**ನರೈಶೇರ್ ಪೊಟಿಲ್ ಶೂಟ್ ನರೈಯೂರ್ ತೊಟು ನೆಂಜಮೇ**
**ಎನ್ರ**
**ಕರೈಯೊರ್ ನೆಡುವೇಲ್ ಮಂಗೈಯರ್ ಕೋನ್**
**ಕಲಿಕನ್ರಿಶೊಲ್**
**ಮರವಾದು ಉರೈಪ್ಪವರ್ ವಾನವರ್ಕ್ಕು ಇನ್ ಅರಶಾವರೇ**
**॥೧೦॥**

(ಪಿರೈಶೇರ್ ನುದಲಾರ್) ಚಂದ್ರಕಲೆಯನ್ನು ಹೋಲುವ ನೆತ್ತಿಯನ್ನುಳ್ಳ ಹೆಂಗಳೆಯರು (ನಮ್ಮೈ) ನಮ್ಮ ವಿಷಯದಲ್ಲಿ (ವೇಣುದಲ್ ಇಲಾದಮುನ್) ಆದರವನ್ನು ಬಿಡುವುದಕ್ಕೆ ಕಾರಣವಾದ ಮುದಿತನವು ಬರುವ ಮುನ್ನವೇ (ನೆಂಜಮೇ) ಓ ಮನವೇ, (ನರೈಶೇರ್ ಪೊಟಿಲ್ ಶೂಟ್ ನರೈಯೂರ್ ತೊಟು ಎನ್ರ) ಜೇನು ಸ್ರವಿಸುವ ತೋಪುಗಳಿಂದ ಸುತ್ತುವರಿಯಲ್ಪಟ್ಟ ತಿರುನರೈಯೂರನ್ನು ಸೇವಿಸು ಎಂದು ಉಪದೇಶಿಸಿದವರೂ, (ಕರೈಆರ್ ನೆಡುವೇಲ್) ರಕ್ತದ ಕಲೆಯು ಕಟ್ಟಿರುವ ನೀಳವಾದ ವೇಲಾಯುಧವನ್ನುಳ್ಳವರೂ (ಮಂಗೈಯರ್ ಕೋನ್ ಕಲಿಕನ್ರಿ) ತಿರುಮಂಗೈನಾಟ್ಟಿಗೆ ನಿರ್ವಾಹಕರೂ

ಆದ ಆಳ್ವಾರ್ರವರ (ಶೊಲ್) ಈ ಶ್ರೀ ಸೂಕ್ತಿಗಳನ್ನು (ವಾರವಾದು ಉರೈಪ್ಪ ವರ್) ಮರೆಯದೆ ಓದುವವರು (ವಾನವರ್ಕು ಇನ್ ಅರಶು ಆವರ್) ನಿತ್ಯಸೂರಿ ಗಳಿಗೂ ಮೇಲ್ಪಟ್ಟವರಾಗುತ್ತಾರೆ.

ಸ್ತ್ರೀಗಳಿಂದ ಪರಿಭವ ಒದಗುವ ಮುನ್ನವೇ ತಿರುನರೈಯೂರಿನಲ್ಲಿ ಹೋಗಿ ಆಶ್ರಯಿಸಿ ಎಂದು ಆಳ್ವಾರ್ ಅವರು ಹಾಡಿರುವ ಈ ಪ್ರಬಂಧವನ್ನು ಅಭ್ಯಸಿಸುವವರು ಯಾವಾಗಲೂ ಪಂಚವಿಂಶತಿ ವಾರ್ಷಿಕರಾದ ನಿತ್ಯಸೂರಿ ಗಳಿರುವ ದೇಶಕ್ಕೂ ನಿಯಾಮಕರಾಗುವರು.

---

### ಆರನೆಯ ಪತ್ತು-ಐದನೆಯ ತಿರುಮೊಳಿ

# 'ಕಲಂಗ ಮುನ್ನೀರ್'

## ಪ್ರವೇಶ

ತಿರುನರೈಯೂರನ್ನು ಹೋಗಿ ಆಶ್ರಯಿಸಿದರೆ ಸಾಕು ಅಲ್ಲಿ ನಿತ್ಯವಾಸ ಮಾಡುತ್ತಿರುವ ಸ್ವಾಮಿ ಸಮಸ್ತಹಿತವನ್ನೂ ಅನುಗ್ರಹಿಸುತ್ತಾನೆ. ಅವನಾದರೂ ದೇವತೆಗಳಿಗೆ ಉಪಕಾರಕನಾಗಿ ಆಶ್ರಿತರಿಗೆ ಯಾವಾಗಲೂ ಒದಗುವ ಸ್ವಭಾವ ದವನಾಗಿದ್ದಾನೆ. ಅವನು ಅಲ್ಲಿ ನಿತ್ಯವಾಸ ಮಾಡುತ್ತಿರುವುದರಿಂದ ಆ ದೇಶ ಮುಕ್ತಪ್ರಾಪ್ಯವಾದ ಪರಮಪದಕ್ಕೆ ಸಮನಾದುದಾಗಿವೆ. ಈ ದಶಕದಲ್ಲಿ ಆಳ್ವಾರ್ ಅವರು ಆ ದೇಶದ ಹಿರಿಮೆಯನ್ನು ಹೇಳಿಕೊಂಡು ಭಾವಾವಿಷ್ಟ ರಾಗುತ್ತಾರೆ. ಸ್ತ್ರೀಯರ ಬೆಶೆಯಿಂದ ಉಂಟಾಗುವ ಪರಿಭವ ಪರಿಹಾರಾರ್ಥ ವಾಗಿ ಅಲ್ಲದೆ ಕೇವಲ ಸ್ವರೂಪಾನುಗುಣವಾಗಿ ಆ ದಿವ್ಯದೇಶವನ್ನು ಆಶ್ರಯಿಸಿ ದರೆ ನಮಗಿರುವ ವಿರೋಧಗಳೆಲ್ಲಾ ಹೊರಟು ಹೋಗಿ ನಿತ್ಯಕೈಂಕರ್ಯಾಂತ ವಾದ, ಎಲ್ಲ ಪ್ರಾಪ್ತಿಯೂ ಉಂಟಾಗುವುದು ಎಂದು ಹೇಳಿ ಈಶ್ವರನ ಗುಣ ವಿಶೇಷಗಳನ್ನು ಅನುಸಂಧಾನ ಮಾಡುತ್ತಾರೆ.

**ಕಲಂಗ ಮುನ್ನೀರ್ ಕಡೈನ್ದು ಅಮುದಂಕೊಂಡು**
**ಇಮೈಯೋರ್**
**ತುಳಂಗಲ್ ತೀರ ನಲ್‌ಹು ಶೋತಿಚ್ಚುಡರಾಯ**
**ವಲಂಗೈ ಆಟಿ ಇಡಕ್ಕೈ ಶಂಗಂ ಉಡೈಯಾನ್ ಊರ್**
**ನಲಂಗೊಳ್ ವಾಯ್‌ಮೈ ಅಂದಣರ್ ವಾಟುಂ ನರೈಯೂರೇ**
**॥೧॥**

(ಮುನ್ನೀರ್ ಕಲಂಗ ಕಡೈಂದು) ಸಮುದ್ರವು ಕಲಕಿ ಹೋಗುವಂತೆ ಮಥಿಸಿ (ಅಮುದಂ ಕೊಂಡು) ಅದರಿಂದ ಅಮೃತವನ್ನು ತೆಗೆದುಕೊಂಡು (ಇಮೈಯೋರ್ ತುಳಂಗಂ ತೀರನಲ್‌ಹು) ದೇವತೆಗಳ ಆತಂಕವು ತೀರುವಂತೆ ಅವರುಗಳಿಗೆ ಕೊಟ್ಟು ದಯೆತೋರಿದವನೂ, (ಶೋತಿಚ್ಚುಡರಾಯ) ಪರಂಜ್ಯೋತಿ ಸ್ವರೂಪಿಯಾದವನೂ, (ವಲಂಗೈಆಟಿ ಇಡಕ್ಕೈ ಶಂಗಂ ಉಡೈಯಾನ್) ಬಲಹಸ್ತದಲ್ಲಿ ಚಕ್ರವನ್ನೂ ಎಡಹಸ್ತದಲ್ಲಿ ಶಂಖವನ್ನೂ ಧರಿಸಿರುವವನೂ ಆದ ಸರ್ವೇಶ್ವರನ (ಊರ್) ದಿವ್ಯದೇಶವು ಯಾವುದು ಎಂದರೆ (ನಲಂಕೊಳ್ ವಾಯ್‌ಮೈ) ನಲ್ಮೆಯನ್ನುಳ್ಳ ಸತ್ಯವಾದಿತ್ವವನ್ನುಳ್ಳವರಾದ (ಅಂದಣರ್ ವಾಟುಂ ನರೈಯೂರ್) ಬ್ರಾಹ್ಮಣರು ವಾಸಮಾಡುತ್ತಿರುವ ಸ್ಥಾನವಾದ ತಿರುನರೈಯೂರ್ ಎಂಬುದೇ.

'ಅಹಂಕಾರಿಗಳಾದ ದೇವತೆಗಳಿಗೂ ಅಸಾಧ್ಯವಾದ ಕೆಲಸವನ್ನು ಮಾಡಿ ಉಪಕರಿಸಿದ ಸ್ವಾಮಿ ಪರತಂತ್ರರಾದ ನಮಗೆ ಉಪಕರಿಸುವುದಿಲ್ಲವೋ'— ಎಂಬುದು ಇಲ್ಲಿ ಧ್ವನಿತವಾಗುತ್ತದೆ. ಸಮುದ್ರದ ತಳದಿಂದ ಮಣ್ಣು ಕೆದಕಿ ಮೇಲೆಲ್ಲಾ ಎರಚಿ ಹೋಗುವಂತೆ ಸಮುದ್ರವನ್ನು ಮಥಿಸಿದ ಅವನು. ಅಸುರ ರಿಂದ ಪರಾಭವಕ್ಕೊಳಗಾಗಿದ್ದ ದೇವತೆಗಳಿಗೆ ಅಮೃತವನ್ನು ಕೊಟ್ಟನವನು. 'ಈಶ್ವರೋऽಹಂ' ಎಂದಿದ್ದವರಿಗಾಗಿ ತಾನೇ ಈ ಕೆಲಸ ಅವನು ಮಾಡಿದುದು. ಈ ಅಸಾಧ್ಯವಾದ ಕೆಲಸವನ್ನು ಮಾಡಿದವನು ತಾನೇ ಎಂಬುದು ಬೆಳೆಗುವಂತೆ ದಿವ್ಯ ತೇಜೋರೂಪಿಯಾಗಿ ದಿವ್ಯಾಯುಧಗಳನ್ನು ಧರಿಸಿಕೊಂಡಿರುವ ಆಸ್ವಾಮಿ ನಿತ್ಯವಾಸ ಮಾಡುವ ದಿವ್ಯದೇಶ ಇದು. ಅಲ್ಲಿರುವ ಬ್ರಾಹ್ಮಣರು ಯಥಾಭೂತ ವಾದಿಯಾದ ವೇದವನ್ನು ಕರಗತ ಮಾಡಿಕೊಂಡಿರುವರು. ಅವರೂ ಯಥಾ ಭೂತವಾದಿಗಳೇ ಆಗಿದ್ದಾರೆ.

ಮುನ್ನೈಯಾರ್ ಶೀಯಮಹ್ ಆಹಿ ಅವುಣನ್
ಮುರಣ್‌ಮಾರ್ವಂ
ಪುನ್ನೈವಾಳ್ ಉಹಿರಾಲ್ ಪೋಟ್‌ಪಡ ಈರ್‌ನ್ದ
ಪುನಿದನ್ ಊರ್
ಶಿನ್ನೈಯಾರ್ ತೇ ಮಾಶೆಮ್‌ತಳಿರ್ ಕೋದಿ ಕುಯಿಲ್
ಕೂವುಂ
ನನ್ನೈಯಾರ್ ಶೋಲೈ ಶೂಟ್‌ನ್ದ ಅಟಿಹಾಯು ನರೈಯೂರೇ
॥೨॥

(ಮುನ್ನೈ ಆರ್‌ಶೀಯಮಹ್ ಆಹಿ) ಯುದ್ಧ ಮಾಡುವುದರಲ್ಲಿ ಸಾಮರ್ಥ್ಯವನ್ನುಳ್ಳ ಶ್ರೀ ನರಸಿಂಹಮೂರ್ತಿಯಾಗಿ ಅವತರಿಸಿ (ಅವುಣನ್ ಮುರಣ್ ಮಾರ್ವಂ) ಹಿರಣ್ಯಕಶಿಪುವಿನ ಕಠಿಣವಾದ ಎದೆಯನ್ನು (ಪುನ್ನೈ) ಕೋಮಲವಾಗಿ ಸುಂದರ ವಾದುದೂ (ವಾಳ್) ಪ್ರಕಾಶಿಸುತ್ತಿರುವುದೂ ಆದ (ಉಹಿರಾಲ್) ನಖಗಳಿಂದ (ಪೋಟ್‌ಪಡ) ಎರಡು ಹೋಳಾಗಿ ಬೀಳುವಂತೆ (ಈರ್‌ನ್ದ) ಸೀಳಿಹಾಕಿದ (ಪುನಿದನ್) ಪರಮ ಪವಿತ್ರನಾದ ಪರಮಾತ್ಮನ (ಊರ್) ದಿವ್ಯದೇಶವು ಯಾವುದು ಎಂದರೆ (ಕುಯಿಲ್) ಕೋಗಿಲೆಗಳು (ಶಿನ್ನೈ ಆರ್ ತೇ ಮಾ) ಎಲೆ ಗಳಿಂದ ಸಮೃದ್ಧವಾದ ಸಿಹಿ ಮಾವಿನ ಮರಗಳ (ಶೆಮ್ ತಳಿರ್) ಕೆಂದಳಿರು ಗಳನ್ನು (ಕೋದಿ) ಆಸ್ವಾದಿಸಿ (ಕೂವುಮ್) ಹಾಡುವಂಥದೂ (ನನ್ನೈ ಆರ್ ಶೋಲೈ ಶೂಟ್‌ನ್ದ) ಹೂವಿನ ಮೊಗ್ಗುಗಳ ಸಮೃದ್ಧಿಯನ್ನುಳ್ಳ ತೋಪು ಗಳಿಂದ ಸುತ್ತುವರಿಯಲ್ಪಟ್ಟುದೂ (ಅಟಿಹು ಆಯು) ಸೌಂದರ್ಯವನ್ನುಳ್ಳುದೂ ಆದ (ನರೈಯೂರ್) ತಿರುನರೈಯೂರ್ ಎಂಬುದೇ ಆಗಿದೆ.

ಪ್ರಹ್ಲಾದ ಕೇವಲ ಅಸುರ ಪ್ರಕೃತಿಯ ಹೊಟ್ಟೆಯಲ್ಲಿ ಹುಟ್ಟಿದರೂ ಸಹ ತನ್ನ ಹೆಸರನ್ನು ಹೇಳಿದ ಮಾತ್ರಕ್ಕೇ ಮತ್ತು ಹಾಗೆ ಹೇಳಿದ ಸಮಯ ದಲ್ಲಿಯೇ ಬಂದು ಅವನಿಗೆ ಒದಗಿದನೆಂಬುವ ಮಹಾಗುಣವನ್ನು ಕೊಂಡಾಡು ತ್ತಾರೆ. ಹಿರಣ್ಯಾಸುರ ಅನಭಿಭವನೀಯನಾಗಿದ್ದ. ವರಬಲದಿಂದ ಬಲಿಷ್ಠ ವಾಗಿದ್ದ ಅವನ ಎದೆಯನ್ನು ಸೀಳಿಹಾಕಿದ ಸ್ವಾಮಿ. ಆಶ್ರಿತನಿಗೆ ಪ್ರತಿಜ್ಞಾ ಸಮಕಾಲದಲ್ಲಿಯೇ ಒದಗಿದನೆಂಬ ಹಿರಿಮೆಯನ್ನುಳ್ಳವನು ವಾಸಿಸುತ್ತಿರುವ ದಿವ್ಯದೇಶ ಅದು. ಮುಕ್ತರು ಸಾಮಗಾನ ಮಾಡುವಂತೆ ಮಾಂದಳಿರನ್ನು ಮೆದ್ದ

ಕೋಗಿಲೆಗಳು ಗಾನಮಾಡುತ್ತಿರುವ ದೇಶ ಅದು, ಅಲ್ಲಿರುವ ತೋಪುಗಳಲ್ಲಿ ನಿತ್ಯ ವಸಂತವೇ ಇರುವಂತೆ ಕಂಡುಬರುವುದು.

**ಆನೈ ಪುರವಿ ತೇರೊಡು ಕಾಲಾಳಣಿಕೊಂಡ**
**ಶೇನೈ ತೊಕೈಯೈ ಶಾಡಿ ಇಲಂಗೈಶೆತ್ತಾನೂರ್**
**ಮೀನೈ ತಟುವಿ ವೀಟ್ಟ್ನ್ದಿಟುಂ ಮಳ್ಳೈಕರ್**
**ಅಲಮಂದು**
**ನಾನಪ್ಪುದರಿಲ್ ಆಮ್ಬೈ ಒಳಿಕ್ಕುಂ ನರೈಯೂರೇ** ॥೩॥

(ಆನೈ) ಆನೆಗಳೂ (ಪುರವಿ) ಕುದುರೆಗಳೂ (ತೇರೊಡು) ರಥಗಳೂ (ಕಾಲಾಳ್) ಪದಾತಿಗಳೂ (ಅಣಿಕೊಂಡ) ವ್ಯವಸ್ಥೆಗೊಂಡ (ಶೇನೈತೊಕೈ ಮೈ ಶಾಡಿ) ಸೇನೆಯ ಸಮೂಹವನ್ನು ಧ್ವಂಸಮಾಡಿ (ಇಲಂಗೈ ಶೆತ್ತಾನ್) ಲಂಕೆಯನ್ನು ನಾಶಪಡಿಸಿದ ಪರಮಾತ್ಮನ (ಊರ್) ದಿವ್ಯದೇಶವು ಯಾವುದು ಎಂದರೆ— (ಮೀನೈ ತಟುವಿ) ದೊಡ್ಡ ಮೀನುಗಳನ್ನು ಹಿಡಿಯುವುದಕ್ಕಾಗಿ ಎರಡು ಕೈಗಳಿಂದಲೂ ಹಿಡಿದಾಗ (ಮೀಟನ್ದು) ಅವು ಇವರನ್ನೇ ತಳ್ಳಲು ಕೆಳಗೆ ಬಿದ್ದವ ರಾಗಿ (ಎಟುಂ) ಮತ್ತೆ ಅವುಗಳನ್ನು ಹಿಡಿಯುವ ಆಶೆಯಿಂದ ಎದ್ದು ನಿಂತಿರುವ (ಮಳ್ಳೈಕರ್) ಉಳುಮೆಗಾರರಿಗೆ (ಅಲಮಂದು) ಹೆದರಿ (ಆಮ್ಬೈ) ಆಮೆ ಯಾದುದು (ನಾನಂ ಪುದರಿಲ್) ಪಕ್ಕದ ಅರಿಶಿನದ ಪೊದರಿನಲ್ಲಿ (ಒಳಿಕ್ಕುಂ) ಅವಿತುಕೊಳ್ಳುವಂಥ ಜಾಗವಾದ (ತಿರುನರೈಯೂರ್) ತಿರುನರೈಯೂರೇ.

ಭಗವಂತನು ನಮಗೆ ಒದಗುವುದಾದರೂ ಅವನು ತನ್ನ ದೇವಿಗೆ ಒದಗಿದ ಹಾಗೆಯೇ ಒದಗುವನು ಎಂದು ಇಲ್ಲಿ ಅನುಭವಿಸುತ್ತಾರೆ: ರಾವಣನ ಸೈನ್ಯ ಯುದ್ಧಕ್ಕೆ ಯಾವ ಕ್ರಮದಲ್ಲಿ ಹೊರಟು ಬಂದಿತೋ ಅದೇ ಕ್ರಮವನ್ನು ಇಲ್ಲಿ ಹೇಳುತ್ತಾರೆ. ಬೆಟ್ಟಗಳೋಪಾದಿ ಇದ್ದವಂತೆ ಆ ಆನೆಗಳು, ಚತುರಂಗ ಬಲ ಸಮೇತನಾಗಿ ಬಂದ ರಾವಣನನ್ನು ಮರ್ದಿಸಿದ ದಶರಥಾತ್ಮಜನು ಇರುತ್ತಿರುವ ದಿವ್ಯಕ್ಷೇತ್ರ ಇದು.

**ಉರಿಯಾರ್ ವೆಣ್ಣೈ ಉಂಡು ಉರಲೋಡುಂ ಕಟ್ಟುಂಡು**
**ವೆರಿ ಆರ್ ಕೂಂದಲ್ ಪಿನ್ನೈ ಪೊರುಟ್ಟು ಆನ್ ವೆನ್ರಾನ್**
**ಊರ್**

**ಪೊರಿಯಾರ್ ಮಂಜ್ಞೈ ಪೂಂಪೊಟಿಲ್ ಶೋರುಂ ನಡಮಾಡ**
**ನರುನಾಣ್ಮಲರ್ ಮೇಲ್ ವಂಡಿಶೈ ಪಾಡುಂ ನರೈಯೂರೇ**
**॥೪॥**

(ಉರಿ ಆರ್) ನಿಲುವುಗಳಲ್ಲಿ ತುಂಬಿಟ್ಟಿದ್ದ (ವೆಣ್ಣೆಯ್ ಉಂಡು) ಬೆಣ್ಣೆಯನ್ನು ಬಾಚಿಕೊಂಡು ತಿಂದು (ಉರಲೋಡುಂ ಕಟ್ಟುಂಡು) ಆ ತಪ್ಪಿಗಾಗಿ ಒರಳಿನೊಡನೆ ಸೇರಿಸಿ ಕಟ್ಟಿಹಾಕಲ್ಪಟ್ಟವನೂ, (ವೆರಿ ಆರ್ ಕೂಂದಲ್ ಪಿನ್ನೈಪೊರುಟ್ಟು) ಪರಿಮಳಭರಿತವಾದ ಕೇಶಪಾಶವನ್ನುಳ್ಳ ನಪ್ಪಿನ್ನೈ ದೇವಿಗಾಗಿ (ಆನ್ ವೆನ್ರಾನ್) ಏಳು ವೃಷಭಗಳನ್ನು ಜಯಿಸಿದ ಪರಮಾತ್ಮನ (ಊರ್) ದಿವ್ಯದೇಶವು ಯಾವು ದೆಂದರೆ—(ಪೊರಿ ಆರ್) ಚುಕ್ಕೆಗಳು ತುಂಬಿರುವ (ಮಂಜ್ಞೈ) ನವಿಲುಗಳು (ಪೂಂಪೊಟಿಲ್ ತೋರುಂ ನಡಮ್ ಆಡ) ಹೂತೋಟಗಳಲ್ಲೆಲ್ಲಾ ನರ್ತಿಸಿ ಕೊಂಡು ಸಂಚರಿಸುವಂಥದೂ, (ವಂಡು) ದುಂಬಿಗಳು (ನರು ನಾಣ್‍ಮಲರ್ ಮೇಲ್) ನರಗುಂಪನ್ನುಳ್ಳ ಸದ್ಯೋವಿಕಸಿತವಾದ ಹೂಗಳಮೇಲೆ ಇದ್ದು ಕೊಂಡು (ಇಶೈಪಾಡುಂ) ಹಾಡುತ್ತಿರುವಂಥದೂ ಆದ (ನರೈಯೂರೇ) ತಿರು ನರೈಯೂರೇ ಆಗಿದೆ.

ಹಿಂದಿನ ಪಾಶುರಗಳಲ್ಲಿ ಇಷ್ಟಪ್ರಾವಣ್ಯವನ್ನೂ ಅನಿಷ್ಟ ನಿವೃತ್ತಿಯನ್ನೂ ಅವನು ಮಾಡಿದ ಬಗೆಯನ್ನು ಹೇಳಿದರು. ಈ ಪಾಶುರದಲ್ಲಿ ಅವನು ಹೇಗೆ ಆಶ್ರಿತರ ಕರಸ್ಪರ್ಶವಿರುವ ದ್ರವ್ಯವನ್ನೇ ಬಯಸುವನೆಂಬುದನ್ನು ಹೇಳಿ ಅವನ ಸೌಶೀಲ್ಯವನ್ನು ವರ್ಣಿಸಿದ್ದಾರೆ. ನಿಲುವಿನಲ್ಲಿ ಕುಣಿಕೆಯನ್ನೂ ಹಾಕಿ ಭದ್ರ ಪಡಿಸಿಟ್ಟ ಬೆಣ್ಣೆಯನ್ನು ಅವನು ಯಾವುದೋ ಮಾಯದಲ್ಲಿ ಭುಜಿಸಿದುದು, 'ದೈವವೇ ಕೊಂಡು ಹೋಯಿತೋ' ಎಂಬಂತೆ ಆಯಿತಂತೆ. ಅನುಕೂಲರ ಕರಸ್ಪರ್ಶವಿರುವ ಬೆಣ್ಣೆಯನ್ನು ಭುಜಿಸಲು ಹೇಗೆ ಅವನು ಬದ್ಧನೋ ಹಾಗೆಯೇ ಅನುಕೂಲರಿಂದ ಕಟ್ಟಿಹಾಕಿಸಿಕೊಳ್ಳಲೂ ಅವನು ಬದ್ಧನೇ ಆಗಿದ್ದಾನೆ.

**ವಿಡೈ ಏಳ್‍ವೆನ್ರು ಮೆನ್‍ತೋಳ್ ಆಯ್‍ಚ್ಚಿಕ್ಕು ಅನ್ಪನಾಯ್**
**ನಡೈಯಾಲ್ ನಿನ್ರಮರುದಂ ಶಾಯ್‍ತ್ತ ನಾತನ್ ಊರ್**
**ಪೆಡೈಯೊಡು ಅನ್ನಂ ಪೆಯ್‍ವಳೈಯಾರ್ ತಮ್‍ಪಿನ್ ಶೆನ್ರು**
**ನಡೈಯೊಡು ಇಯದಿ ನಾಣಿ ಒಳಿಕ್ಕುಂ ನರೈಯೂರೇ ॥೫॥**

(ಏಟ್‌ವಿಡೈವೆನ್ರು) ಸಪ್ತವೃಷಭಗಳನ್ನು ಅಡಗಿಸಿ (ವೇನ್‌ತ್ತೋಳ್ ಆಯರ್‌ಚ್ಚಿಕ್ಕು ಅನ್ಬನಾಯ್) ಮೃದುವಾದ ತೋಳುಗಳ ಚೆಲುವನ್ನುಳ್ಳ ನಪ್ಪಿನ್ನೈಪಿರಾಟ್ಟಿಗೆ ನಾಯಕನಾಗಿದ್ದವನೂ, (ನಿನ್ರಮರುದಂ) ದೃಢವಾಗಿ ನಿಂತಿದ್ದ ಅರ್ಜುನ ವೃಕ್ಷಗಳೆರಡನ್ನೂ (ನಡೈಯಾಲ್ ಶಾಯ್‌ತ್ತ ನಾತನ್) ತೆವಳಿಕೊಂಡು ಹೋಗುವ ನಡೆಯಿಂದಲೇ ಮುರಿದು ಕೆಳಗೆ ಬೀಳಿಸಿದವನೂ ಆದ ನಮ್ಮನಾಥನ (ಊರ್) ದಿವ್ಯದೇಶವು ಯಾವುದೆಂದರೆ—(ಅನ್ನಂ) ಹಂಸಗಳು (ಪೆಡೈಯೊಡು) ತಮ್ಮ ದಯಿತೆಯರೊಡನೆ ಕೂಡಿ (ಪೆಯ್‌ವಳೈಯಾರ್ ತಮ್‌ಪಿನ್ ಶೆನ್ರು) ಅನರ್ಘವಾದ ಬಳೆಗಳನ್ನು ತೊಟ್ಟಿದ್ದ ಹೆಂಗಸರ ಹಿಂದೆ ಹೋಗಿ (ನಡೈಯೊಡು ಇಯದಿ) ಅವರುಗಳ ನಡೆಯನ್ನು ಅನುಕರಿಸಲು ಯೋಚಿಸಿದವಾಗಿ, ಹಾಗೆ ನಡೆಯಲು ತಮಗೆ ಸಾಧ್ಯವಾಗದ ಕಾರಣ (ನಾಣಿ) ನಾಚಿಕೆಗೊಂಡವಾಗಿ (ಒಳಿಕ್ಕುಂ) ತಮ್ಮನ್ನು ಮರೆಸಿಕೊಳ್ಳುವಂಥ ದೇಶವಾದ (ನರೈಯೂರೆ) ತಿರುನರೈಯೂರೇ ಆಗಿದೆ.

ಆಶ್ರಿತರ ಕಟ್ಟಿಗೆ ಒಳಗಾಗಿದ್ದಾಗಲೂ ವಿರೋಧಿ ನಿರಸನವನ್ನು ಆ ಸ್ವಾಮಿ ಮಾಡಿದನೆಂಬುದನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ನಪ್ಪಿನ್ನೈದೇವಿಯ ಮೇಲಿನ ಪ್ರೇಮದ ಕಾರಣ ಕ್ರೂರ ಸ್ವಭಾವದ ಸಪ್ತವೃಷಭಗಳನ್ನೂ ಲೀಲೆಯಿಂದ ಅವನು ಅಡಗಿಸಿದನು. ಅಸುರಾವೇಶದ ಕಾರಣ ಅಲುಗಾಡದೆ ಭದ್ರವಾಗಿ ನಿಂತಿದ್ದ ಅರ್ಜುನ ವೃಕ್ಷಗಳನ್ನು ಬುಡಸಹಿತ ಕಿತ್ತುಹಾಕಿದ ಸರ್ವರಕ್ಷಕನು ಇರುತ್ತಿರುವ ದೇಶ ಅದು. ಅಲ್ಲಿರುವ ಸ್ತ್ರೀಯರ ನಡಿಗೆಯ ಚೆಲುವನ್ನು ಕಂಡು ಹಂಸಗಳು ತಾವೂ ಹಾಗೆಯೇ ನಡೆಯಬೇಕೆಂದು ಅವರ ಹಿಂದೆ ಹೋಗುತ್ತವೆ. ಆದರೆ ಆ ನಡಿಗೆಯ ಚೆಲುವು ತಮಗೆ ಬರದೆ ಇದ್ದ ಕಾರಣ ಲಜ್ಜೆಗೊಂಡು ಆ ಹಂಸಗಳು ತಮ್ಮನ್ನು ಮರೆಸಿಕೊಂಡು ನಿಲ್ಲುತ್ತವೆಯಂತೆ. ಅಂಥ ದಿವ್ಯದೇಶ ಅದು.

**ಪಹುವಾಯ್ ವನ್‌ಪೇಯ್‌ಕೊಂಗೈ ಶುವೈತ್ತು**
**ಆರ್‌ಉಯಿರ್ ಉಂಡು**
**ಪುಹುವಾಯ್ ನಿನ್ರ ಪೋತಕಮ್ ವೀಟಿ ಪೊರುದಾನ್ ಊರ್**
**ನೆಹುವಾಯ್ ನೆಯ್‌ದಲ್‌ಪೂ ಮದು ಮಾಂದಿ ಕಮಲತ್ತಿನ್**
**ನೆಹುವಾಯ್ ಮಲರ್‌ಮೇಲ್ ಅನ್ನಂ ಉರಂಗುಂ**
**ನರೈಯೂರೇ ॥೬॥**

(ಪಹುವಾಯ್) ಬಹಳ ದೊಡ್ಡ ಬಾಯಿಯುನ್ನುಳ್ಳವಳೂ (ವನ್) ಕ್ರೂರವಾದ ಮನಸ್ಸನ್ನುಳ್ಳವಳೂ ಆದ (ಪೇಯರ್‌ಕೊಂಗೈ) ರಕ್ಕಸಿಯಾದ ಪೂತನಿಯು ಸ್ತನವನ್ನು (ಶುವೈತ್ತು) ಚೆನ್ನಾಗಿ ಹೀರಿ (ಅರ್ ಉಯಿರ್ ಉಂಡು) ಅವಳ ಪ್ರಿಯುವಾದ ಪ್ರಾಣವನ್ನು ಮುಗಿಸಿದವನೂ, (ಪುಹುವಾಯ್) ಕಂಸನ ಅರಮನೆಯು ಮಹಾದ್ವಾರದ ಬಾಗಿಲಿನಲ್ಲಿ (ನಿನ್ರು) ಮದವನ್ನುಂಟುಮಾಡಿಸಿ ನಿಲ್ಲಿಸಲ್ಪಟ್ಟಿದ್ದ (ಪೋತಕಂ) ಕುವಲಯಾ ಪೀಡವೆಂಬ ಆನೆಯು (ವೀಟಿ) ಸತ್ತು ಬೀಳುವಂತೆ (ಪೊರುದಾನ್) ಕಾದಿದ್ದವನೂ ಆದ ಪರಮಾತ್ಮನ (ಊರ್) ದಿವ್ಯದೇಶವು ಯಾವುದೆಂದರೆ—(ಅನ್ನಂ) ಹಂಸಗಳು (ನೆಹುವಾಯ್ ನೆಯ್‌ದಲ್ ಪೂಮದು) ವಿಕಸಿತವಾದ ಕನ್ನೈದಿಲೆಯ ಹೂಗಳಲ್ಲಿ ಮಕರಂದವನ್ನು (ಮಾಂದಿ) ಪಾನ ಮಾಡಿ (ಕಮಲತ್ತಿನ್ ನಹುವಾಯ್ ಮಲರ್‌ಮೇಲ್) ಅರಳಿದ ಕಮಲ ಪುಷ್ಪಗಳ ಮೇಲೆ (ಉರಂಗುಂ) ನಿದ್ರಿಸುವಂಥದಾದ (ನರೈಯೂರ್) ತಿರುನರೈಯೂರೇ ಆಗಿದೆ.

ನಂದಗೋಕುಲದಲ್ಲಿಯೂ ಮಧುರಾ ನಗರದಲ್ಲಿಯೂ ಸ್ವಾಮಿಯು ಮಾಡಿದ ಅತಿಮಾನುಷಚೇಷ್ಟಿತಗಳನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಪೂತನಿಯು ತನ್ನ ದೇಹದ ಪ್ರಮಾಣಕ್ಕೆ ಅನುಗುಣವಾಗಿ ಬಹಳ ದೊಡ್ಡ ಬಾಯಿಯುನ್ನು ಹೊಂದಿದ್ದಳು. ಇವನೇ ಹತ್ತಿರ ಬಂದರೂ ಅವನಿಗೆ ಶರಣಾಗದಂತಹ ಕಠಿಣವಾದ ಮನಸ್ಸನ್ನವಳು ಹೊಂದಿದ್ದಳು. ಅವಳ ಸ್ತನ್ಯದೊಡನೆ ಅವಳ ಪ್ರಾಣವನ್ನೂ ಸ್ವಾಮಿ ಹೀರಿಕೊಂಡನು. ಬೆಟ್ಟವು ಮುರಿದು ಬೀಳುವ ಹಾಗೆ ಪರ್ವತೋಪಮವಾದ ಕುವಲಯಾಪೀಡ ಸತ್ತುಬೀಳುವ ಹಾಗೆ ಕಾದಿದ ಗಂಡುಗಲಿ ಇರುವ ದಿವ್ಯದೇಶ ಇದು.

**ಮುಂದುನೂಲುಂ ಮುಪ್ಪುರಿನೂಲುಂ ಮುನ್ ಈನ್ದ**
**ಅಂದಣಾಳನ್ ಪಿಳ್ಳೈಯೈ ಅನ್ನಾನ್ರು ಅಳಿತ್ತಾನೂರ್**
**ಪೊಂದಿಲ್ ವಾಟಿಯುಂ ಪಿಳ್ಳೈಕ್ಕಾಹಿ ಪುಳ್ ಓಡಿ**
**ನಂದು ವಾರುಂ ಪೈಂಪುನಲ್ ವಾವಿ ನರೈಯೂರೇ** ॥೭॥

(ಮುಪ್ಪುರಿನೂಲುಂ) ಯಜ್ಞೋಪವೀತವನ್ನೂ (ಮುಂದುನೂಲುಂ) ಅನಾದಿಯಾದ ವೇದಾಕ್ಷರರಾಶಿಯನ್ನೂ (ಮುನ್ ಈನ್ದ) ಮೊದಲು ತನಗೆ ಕೊಟ್ಟ (ಅನ್ದಣಾಳನ್) ಸಾಂದೀಪಿನಿ ಎಂಬುವ ಬ್ರಾಹ್ಮಣನ (ಪಿಳ್ಳೈಯೈ) ಮಗನನ್ನು

(ಅನ್ನಾನ್ರು) ಗುರುದಕ್ಷಿಣೆ ಸಮರ್ಪಿಸುವ ಆ ಕಾಲದಲ್ಲಿ (ಅಳಿತ್ತಾನೂರ್) ಮತ್ತೆ ತಂದುಕೊಟ್ಟ ಭಗವಂತನ ದಿವ್ಯದೇಶವು ಯಾವುದು ಎಂದರೆ—(ಪೊಂದಿಲ್) ಮರದ ಪೊಟರೆಗಳಲ್ಲಿ (ವಾಟುಂಪಿಳ್ಳೈಕ್ಕಾಹಿ) ವಸಿಸುತ್ತಿರುವ ಮರಿಗಳ ಆಹಾರಕ್ಕಾಗಿ (ಪುಳ್) ಪಕ್ಷಿಗಳು (ಓಡಿನಂದು ವಾರುಂ) ಓಡಿಬಂದು ನಳ್ಳಿಗಳನ್ನು ಬಾಚಿಕೊಂಡು ಹೋಗುವಂತಹ (ಪೈಂಪುನಲ್‌ವಾವಿ) ತಿಳಿಯಾದ, ನೀರನ್ನುಳ್ಳ ತಟಾಕಗಳನ್ನುಳ್ಳ (ನರೈಯೂರ್) ತಿರುನರೈಯೂರೇ ಆಗಿದೆ.

ಸತ್ತುಹೋಗಿದ್ದವನನ್ನು ಬದುಕಿಸಿ ಅವನನ್ನು ಅವನ ಶರೀರದೊಡನೆ ತಂದುಕೊಟ್ಟ ಅಘಟಿತ ಘಟನಾ ಸಮರ್ಥನು ಆಸ್ವಾಮಿ ಎಂದು ಅವನ ಸರ್ವ ಶಕ್ತಿತ್ವವನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ. ಅಪೌರುಷೇಯವಾದ ವೇದವನ್ನೂ ಆ ವೇದಾಧ್ಯಯನಕ್ಕೆ ಅಧಿಕಾರವನ್ನುಂಟು ಮಾಡುವ ಉಪನಯನಾದಿ ಸಂಸ್ಕಾರವನ್ನೂ ಮಾಡಿಕೊಟ್ಟ ಆಚಾರ್ಯ ಸಾಂದೀಪಿನಿ, ಅವನ ಮಗನನ್ನು ಸಾಗರವು ನುಂಗಿಬಿಟ್ಟಿತ್ತು. ಆ ಮಗನನ್ನು ತಂದುಕೊಡಬೇಕೆಂದು ಗುರುದಕ್ಷಿಣೆಯನ್ನು ಗುರು ಕೇಳಿದಾಗ ಅವನನ್ನು ಮತ್ತೆ ತಂದುಕೊಟ್ಟ ಸರ್ವೇಶ್ವರ ಇರುವ ದಿವ್ಯದೇಶ ಇದು.

**ವೆಳ್ಳೈಪುರವಿತ್ತೇರ್ ವಿಶಯೆರ್ಕ್ಕಾಯ್ ವಿರಲ್‌ವಿಯೂಹಂ**
**ವಿಳ್ಳ, ಶಿಂದುಕ್ಕೋನ್ ವಿಟ, ಊರ್‌ನ್ದ ವಿಮಲನೂರ್**
**ಕೊಳ್ಳೈಕೊಟು ಮೀನ್‌ಉಣ್ ಕುರುಕು ಓಡಿ ಪೆಡೈಯೊಡುಂ**
**ನಳ್ಳ ಕಮಲಂ ತೇರಲ್ ಉಹುಕ್ಕುಂ ನರೈಯೂರೇ ॥೮॥**

(ವೆಳ್ಳೈಪುರವಿ) ಬಿಳಿಯ ಕುದುರೆಗಳನ್ನು ಹೂಡಿದ (ತೇರ್) ರಥವನ್ನುಳ್ಳ (ವಿಶಯರ್ಕ್ಕು ಆಯ್) ಅರ್ಜುನನಿಗಾಗಿ (ವಿರಲ್ ವಿಯೂಹಂವಿಳ್ಳ) ದರ್ಪವನ್ನುಳ್ಳ ಸೇನೆಗಳ ಸಮೂಹಗಳು ನಾಶವಾಗುವ ಹಾಗೆಯೂ, (ಶಿಂದುಕೋನ್) ಸಿಂಧುದೇಶದ ರಾಜನಾದ ಜಯದ್ರಥನು (ವಿಟ) ಮುಗಿದುಹೋಗುವಂತೆಯೂ (ಊರ್‌ನ್ದ) ರಥವನ್ನು ನಡೆಸಿದ (ವಿಮಲನ್) ಪರಿಶುದ್ಧನಾದ ಪರಮಾತ್ಮನ ದಿವ್ಯದೇಶವು ಯಾವುದು ಎಂದರೆ—(ಕೊಳ್ಳೈಕೊಟು) ಕೊಳ್ಳೆಹೊಡೆಯುವರಂತೆ ಪುಷ್ಟವಾದ (ಮೀನ್ ಉಣ್) ಮೀನುಗಳನ್ನು ಹಿಡಿದು ತಿನ್ನುವ (ಕುರುಕು) ಬಕಪಕ್ಷಿಗಳು (ಓಡಿ) ಓಡಿಹೋಗಿ (ಪೆಡೆಯೊಡುಂ) ತಮ್ಮ ತಮ್ಮ ದಯಿತೆಯ

ರೊಡನೆ ಕೂಡಿ (ನಳ್ಳ ಕಮಲಂ) ಅರಳಿದ ದಳಗಳನ್ನುಳ್ಳ ತಾವರೆಯ ಹೂವಿನಲ್ಲಿ (ತೇರಲ್) ಮಧುವನ್ನು (ಉಹುಕ್ಕುಂ) ಪಾನವಾಡುವಂತಹ (ನರೈಯೂರ್) ನರೈಯೂರೇ ಆಗಿರುವುದು.

ಹೀಗೆ ಸರ್ವಶಕ್ತನಾದ ಪರಮಾತ್ಮನು ಆಶ್ರಿತನ ಕೈಯಾಳಾಗಿ ವರ್ತಿಸಿದ ಸೌಲಭ್ಯವನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ. ಭಾರತ ಸಂಗ್ರಾಮದಲ್ಲಿ ಆ ಪರಮಾತ್ಮನು ಪಾರ್ಥಸಾರಥಿಯಾಗಿ ಹದಿನೆಂಟು ಅಕ್ಷೌಹಿಣಿಯ ಸೇನಾ ಸಮೂಹವು ಸಂಪೂರ್ಣವಾಗಿ ನಾಶವಾಗುವಂತೆ ಅರ್ಜುನನ ರಥವನ್ನು ನಡೆಸಿದನು. ಜಯದ್ರಥನನ್ನು ಅರ್ಜುನ ತನ್ನ ಪ್ರತಿಜ್ಞೆಗನುಗುಣವಾಗಿ ವಧಿಸುವುದಕ್ಕಾಗುವಂತೆ ಅವನಿಗೆ ಒದಗಿದ ಆ ಸರ್ವೇಶ್ವರ. ಅಂಥ ಲೋಕನಾಥನು ನಿತ್ಯವಾಸ ಮಾಡುತ್ತಿರುವ ದಿವ್ಯದೇಶ ತಿರುನರೈಯೂರ್.

**ಪಾರ್ೈ ಊರುಂ ಪಾರಂ ತೀರ ಪಾರ್ತನ್ ತನ್**
**ತೇರ್ೈ ಊರುಂ ತೇವತೇವನ್ ಶೇರುಮ್ ಊರ್**
**ತಾರ್ೈ ಊರುಂ ತಣ್ತಳಿರ್ವೇಲಿ ಪುಡೈಶೂೞ**
**ನಾರ್ೈ ಊರುಂ ನಲ್ವಯಲ್ ಶೂೞ್ನ್ದ ನರೈಯೂರೇ ॥೯॥**

(ಪಾರ್ೈ ಊರುಂ) ಭೂಮಿಯ ಮೇಲೆ ಊರಿರುವ (ಪಾರಂ ತೀರ) ಭಾರವು ತೊಲಗಿ ಹೋಗುವಂತೆ (ಪಾರ್ತನ್ ತನ್ ತೇರ್ೈ ಊರುಂ) ಅರ್ಜುನನ ರಥವನ್ನು ನಡೆಸಿದವನಾದ (ತೇವತೇವನ್) ದೇವಾಧಿದೇವನು (ಶೇರುಂ ಊರ್) ನಿತ್ಯವಾಸ ಮಾಡುತ್ತಿರುವ ದಿವ್ಯದೇಶವು ಯಾವುದು ಎಂದರೆ—(ತಾರ್ೈ ಊರುಂ) ಮಕರಂದದ ಪ್ರವಾಹವು ಹರಿಯುತ್ತಿರುವ (ತಣ್ತಳಿರ್) ತಂಪಾದ ಚಿಗುರುಗಳಿಂದ ತುಂಬಿದ (ವೇಲಿ) ಬೇಲಿಗಳು (ಪುಡೈಶೂೞ) ನಾಲ್ಕು ಕಡೆಯೂ ಸುತ್ತುವರಿದಿರುವುದೂ, (ನಾರ್ೈ ಊರುಂ) ನಾರಪಕ್ಷಿಗಳು ಸಂಚರಿಸುತ್ತಿರುವಂಥದೂ, (ನಲ್ವಯಲ್ಶೂೞ್ನ್ದ) ಒಳ್ಳೆಯ ಗದ್ದೆಗಳಿಂದ ಸುತ್ತುವರಿಯಲ್ಪಟ್ಟಿರುವುದೂ ಆದ (ನರೈಯೂರ್) ತಿರುನರೈಯೂರೇ ಆಗಿರುವುದು.

ಕೃಷ್ಣಾವತಾರಕ್ಕೆ ಪ್ರಧಾನ ಪ್ರಯೋಜನವಾದ ಭೂಭಾರಾವತರಣವನ್ನು ಇಲ್ಲಿ ನಿರೂಪಿಸಿದ್ದಾರೆ. ಸರ್ವಂಸಹೆಯಾದ ಭೂಮಿಗೂ ಸಹಿಸುವುದಕ್ಕಾಗದಂತೆ ಸ್ವಾಮಿದ್ರೋಹಿಗಳ ಭಾರ ಅತ್ಯಧಿಕವಾಗಿತ್ತು. 'ತಮೀಶ್ವರಾಣಾಂ ಪರಮಂ

ಮಹೇಶ್ವರಂ' ಎಂಬುವಂತೆ ತನ್ನ ಹಿರಿಮೆ ಇದ್ದಾಗ್ಗೂ ಆಶ್ರಿತನಿಗಾಗಿ ಸಾರಥ್ಯ ಮಾಡಿ ಆ ಭೂಭಾರ ಇಳಿಯುವಂತೆ ಮಾಡಿದನವನು. ಅಂಥ ಸ್ವಾಮಿ ಇರುತ್ತಿರುವ ದಿವ್ಯದೇಶ ಈ ತಿರುನರೈಯೂರು.

**ತಾಮತ್ತುಳಪಂ ನೀಳ್‌ಮುಡಿ ಮಾಯನ್ ತಾನ್ ನಿನ್ರ**
**ನಾಮತ್ತಿರಳ್ ಮಾಮಾಳಿಕೈ ಶೂೞ್‌ನ್ದ ನರೈಯೂರ್‌ಮೇಲ್**
**ಕಾಮಕ್ಕದಿರ್ ವೇಲ್‌ವಲ್ಲಾನ್ ಕಲಿಯನ್ ಒಲಿಮಾಲೈ**
**ಶೇ ಮತ್ತು ಣೈ ಆಮ್ ಶೆಪ್ಪುಮವರ್ಕ್ಕು ತಿರುಮಾಲೇ ॥೧೦॥**

(ತುಳಪಂ ತಾಮಂ) ತುಳಸಿಯ ಮಾಲೆಯನ್ನು (ನೀಳ್‌ಮುಡಿ) ನೀಳವಾದ ಮುಡಿಯಲ್ಲಿ ಧರಿಸಿದವನಾದ (ಮಾಯನ್ ತನ್) ಸರ್ವೇಶ್ವರನು (ನಿನ್ರ) ನಿತ್ಯವಾಸ ಮಾಡುತ್ತಿರುವುದೂ, (ನಾಮಂ) ಪ್ರಸಿದ್ಧಿಯನ್ನು ಹೊಂದಿದವು ಗಳಾಗಿ (ತಿರಳ್) ಒಂದರೊಡನೊಂದು ಸೇರಿಕೊಂಡಿರುವ (ಮಾಮಾಳಿಹೈ) ದೊಡ್ಡದೊಡ್ಡ ಮನೆಗಳಿಂದ (ಶೂೞ್‌ನ್ದ) ಸುತ್ತುವರಿಯಲ್ಪಟ್ಟುದೂ ಆದ (ನರೈಯೂರ್ ಮೇಲ್) ತಿರೇ ನರೈಯೂರನ್ನು ಉದ್ದೇಶಿಸಿ (ಕಾಮಂ ಕದಿರ್ ವೇಲ್‌ವಲ್ಲಾನ್) ಅತಿಶಯವಾದ ತೇಜಸ್ಸನ್ನುಳ್ಳ ವೇಲಾಯುಧವನ್ನು ಕೈಲಿ ಹಿಡಿಯಬಲ್ಲವರಾದ (ಕಲಿಯನ್ ಒಲಿಮಾಲೈ) ತಿರುಮಂಗೈ ಆಳ್ವಾರ್‌ರವರು ಅನುಗ್ರಹಿಸಿದ ಈ ನುಡಿಮಾಲೆಯನ್ನು (ಶೆಪ್ಪುಮವರ್ಕ್ಕು) ಓದಿ ಅನುಸಂಧಾನ ಮಾಡುವವರಿಗೆ (ತಿರುಮಾಲ್) ಶ್ರಿಯಃಪತಿಯಾದ ಸರ್ವೇಶ್ವರನು (ಶೇಮಂ ತುಣೈ ಆಮ್) ಯಾವಾಗಲೂ ರಕ್ಷಕನಾಗುವ ಸಹಾಯ ಭೂತನಾಗುತ್ತಾನೆ.

ಶ್ರೀತುಲಸೀ ಮಾಲೆಯಿಂದ ಅಲಂಕೃತನೂ, ಆಧಿರಾಜ್ಯ ಸೂಚಕವಾದ ದಿವ್ಯಕಿರೀಟವನ್ನು ಧರಿಸಿರುವವನೂ, ಆಶ್ಚರ್ಯಗುಣಚೇಷ್ಟಿತನೂ ಆದ ಸ್ವಾಮಿ ನೆಲಸಿರುವ ದಿವ್ಯದೇಶ ಈ ತಿರುನರೈಯೂರ್. ಅಲ್ಲಿರುವ ಸಾಂದ್ರವಾದ ಮಾಳಿಗೆ ಮನೆಗಳು ಒಂದೊಂದೂ 'ಇದು ಇಂಥ ಮನೆ' 'ಇದು ಇಂಥ ಮನೆ'— ಎಂಬುವ ಪ್ರಸಿದ್ಧಿಯನ್ನು ಹೊಂದಿರುವುದಂತೆ. ಅಂಥ ದಿವ್ಯದೇಶವನ್ನು ವಿಷಯವನ್ನಾಗಿ ಉಳ್ಳುದು ಈ ದಿವ್ಯಪ್ರಬಂಧ. ಈ ಪಾಶುರಗಳನ್ನು ಅನುಸಂಧಾನ ಮಾಡುವವನನ್ನು ಆ ಸರ್ವೇಶ್ವರ ಎಂದೂ ಕೈಬಿಡದೆ ರಕ್ಷಿಸುತ್ತಾನೆ.

# ಅಂಬರಮ್

## ಪ್ರವೇಶ

ಆಶ್ರಿತವಿರೋಧಿ ನಿರಸನ ಶೀಲನಾದ ಪರಮಾತ್ಮನು ಇರುತ್ತಿರುವ ಪ್ರದೇಶ ತಿರುನರೈಯೂರ್ ಎಂದು ಅನುಸಂಧಾನ ಮಾಡಿದರು. 'ನಮಗೆ ಅಂಥ ಭಕ್ತಿಯೂ ಇಲ್ಲ; ಆದರವೂ ಇಲ್ಲ. ಇಂಥ ನಾವು ಹೇಗೆ ಆಶ್ರಯಿಸು ವುದು ?'—ಎಂದು ಸಂದೇಹಿಸಿದ ಮನಸ್ಸನ್ನು ಕುರಿತು ಆಶ್ವಾಸನೆ ನೀಡುತ್ತಾ ಇತರರಿಗೂ ಉಪದೇಶವನ್ನು ನೀಡುತ್ತಿದ್ದಾರೆ. ಚೋಳರಾಜ 'ಶೆಂಬಿಯನ್‌ಕೋ ಶೆಂಗಣಾನ್' ಎಂಬುವನು ದುರ್ಮಾನಿಯಾಗಿಯೂ ಸ್ನೇಹವಿಲ್ಲದವನೂ ಆಗಿದ್ದವನು. ಅನ್ಯದೇವತಾ ಭಜನದಿಂದ ತನ್ನ ಅಭಿಮತವನ್ನು ಪಡೆದುಕೊಳ್ಳ ಲಾಗದ ಅವನು ತನ್ನ ಅಭಿಮಾನವನ್ನು ಬಿಟ್ಟು ಇಲ್ಲಿ ಬಂದು ಭಗವಂತನ ಪಾದ ಗಳಲ್ಲಿ ಶರಣಾಗಿ ಐಹಿಕಾಮುಷ್ಮಿಕಗಳೆರಡನ್ನೂ ಪಡೆದುಕೊಂಡನು. ಆದುದರಿಂದ ಆ ಊರನ್ನು ಆಶ್ರಯಿಸಿ ಉಜ್ಜೀವಿಸಿ ಎಂದು ಇಲ್ಲಿ ಉಪದೇಶಿಸುತ್ತಿದ್ದಾರೆ.

**ಅಂಬರಮುಂ ಪೆರುನಿಲನುಂ ತಿಶೈಹಳೆಟ್ಟುಮ್**
**ಅಲೈಕಡಲುಂ ಕುಲವರೈಯುಂ ಉಂಡ ಕಣ್ಣನ್**
**ಕೊಂಬಮರುಂ ವಡಮರತ್ತಿನ್ ಇಲೈಮೇಲ್**
**ಪಳ್ಳಿಕೊಂಡಿನಾನ್ ತಿರುವಡಿಯೇ ಕೂಡಹಿರ್ಪೀರ್**
**ವಮ್ಬವಿಳುಮ್ ಶೆಣ್ಬಹತ್ತಿನ್ ವಾಶಮ್ ಉಂಡು**
**ಮಣಿವಂಡು ವಕುಳತ್ತಿನ್ ಮಲರ್‌ಮೇಲ್‌ವೈಹು**
**ಶೆಮ್ಬಿಯನ್ ಕೋಚ್ಚೆಂಗಣಾನ್ ಶೇರ್‌ನ್ದ ಕೋಯಿಲ್**
**ತಿರುನರೈಯೂರ್ ಮಣಿಮಾಡಂ ಶೇರ್‌ಮಿನ್‌ಹಳೇ ॥೧॥**

(ಅಂಬರಮುಂ) ಆಕಾಶವನ್ನೂ (ಪೆರುನಿಲನುಂ) ಹರಡಿಕೊಂಡಿರುವ ಭೂಮಿ ಯನ್ನೂ (ತಿಶೈಹಳ್ ಎಟ್ಟುಂ) ಎಂಟು ದಿಕ್ಕುಗಳನ್ನೂ (ಅಲೈಕಡಲುಂ) ಅಲೆಗಳೇಳುತ್ತಿರುವ ಸಮುದ್ರಗಳನ್ನೂ (ಕುಲಂವರೈಯುಂ) ಕುಲಪರ್ವತ ಗಳನ್ನೂ (ಉಂಡಕಣ್ಣನ್) ಉಂಡ ಕಂಠವನ್ನುಳ್ಳವನೂ (ಕೊಂಬು ಅಮರುಂ)

ಚಿಗುರುಗಳನ್ನು ಹೊಂದಿರುವ (ವಡ ಮರತ್ತಿನ್) ಆಲದ ಮರದ (ಇಲೈಮೇಲ್) ಚಿಗುರಿನ ಮೇಲೆ (ಪಳ್ಳಿಕೊಡಿನಾನ್) ಶಯಿನಿಸಿಕೊಂಡವನೂ ಆದ ಸರ್ವೇಶ್ವರನ (ತಿರುವಡಿಯೇ ಕೂಡಹಿರ್ಪೀರ್) ಶ್ರೀಪಾದಗಳನ್ನು ಸೇರಬೇಕೆಂದಿರುವ ಮುಮುಕ್ಷುಗಳೇ, (ವಣಿವಂಡು) ಸುಂದರವಾದ ದುಂಬಿಗಳು (ವಂಬು ಅವಿಟುಮ್ ಶೆಣ್ಬಹತ್ತಿನ್ ವಾಶಂ ಉಂಡು) ಆಗ ತಾನೇ ಅರಳಿದ ಚಂಪಕ ಕುಸುಮಗಳ ಪರಿಮಳವನ್ನು ಹೀರಿ, ಅನಂತರ (ವಕುಳತ್ತಿನ್ ಮಲರ್ ಮೇಲ್ ವೈಹು) ವಕುಳ ಪುಷ್ಪಗಳ ಮೇಲೆ ನೆಲಸಿರುವಂಥದೂ, (ಶೆಂಬಿಯನ್‌ಕೋ ಶೆಂಗಣಾನ್ ಶೇರ್‌ನ್ದ ಕೋಯಿಲ್) ಶೆಂಬಿಯನ್ ಕೋ ಶೆಂಗಣಾನ್ ಎಂಬ ಹೆಸರಿನ ಚೋಳರಾಜನು ಸೇವೆಯನ್ನು ಸಲ್ಲಿಸಿದ ದಿವ್ಯದೇಶವಾದುದೂ ಆದ (ತಿರುನರೈಯೂರ್ ಮಣಿಮಾಡಂ ಶೇರ್‌ಮಿನ್‌ಗಳ್) ತಿರುನರೈಯೂರಿನಲ್ಲಿರುವ ದಿವ್ಯಸನ್ನಿಧಿಯನ್ನು ಹೋಗಿ ಸೇರುವವರಾಗಿ.

ಮಾರ್ಕಂಡೇಯ ಮಹರ್ಷಿಗೆ ತನ್ನ ಮಾಯೆಯನ್ನು ತೋರಿಸಿದ ಸರ್ವೇಶ್ವರ. ಆ ಪ್ರಳಯ ಮಹಾರ್ಣವದಲ್ಲಿ ಕೊಚ್ಚಿ ಹೋಗುತ್ತಿದ್ದ ಋಷಿಗೆ ಒಂದು ಕೋಮಲವಾದ ವಟವೃಕ್ಷವನ್ನು ತೋರಿ ಆ ವಟವೃಕ್ಷದ ಚಿಗುರೆಲೆಯ ಮೇಲೆ ಪವಡಿಸಿರುವ ಶಿಶುವಿನ ರೂಪನ್ನೂ ತೋರಿದ. ಆ ಶಿಶುವಿನ ಉಸಿರಿನಿಂದ ಒಳಕ್ಕೆ ಎಳೆಯಲ್ಪಟ್ಟ ಮಾರ್ಕಂಡೇಯ ಶಿಶುವಿನ ಉದರದಲ್ಲಿ ಸರ್ವ ಲೋಕಗಳನ್ನೂ ಕಂಡು ಬೆರಗಾದ. ಅಂಥ ಅಘಟನ ಘಟನಾ ಸಮರ್ಥನು ಇರುತ್ತಿರುವ ದಿವ್ಯದೇಶ ಇದು. ಚಂಪಕಪುಷ್ಪದ ಗಂಧವನ್ನು ಆಘ್ರಾಣಿಸಿದ ದುಂಬಿಗಳು ಅದರ ಪ್ರಭಾವವನ್ನು ಹೋಗಲಾಡಿಸಿಕೊಳ್ಳಲು ವಕುಳ ಕುಸುಮಗಳ ಮೇಲೆ ತಂಗಿರುವುವಂತೆ ! ಇದರಿಂದ ಆ ಊರಿನವರು ವರ್ಜನೀಯವಾದ ಪ್ರಾಕೃತ ಭೋಗಗಳನ್ನು ಅನುಭವಿಸಿಯೂ ಸ್ವರೂಪನಾಶ ಹೊಂದದೆ ಭಗವದ್ಭೋಗದಿಂದ ಆ ದೋಷವನ್ನು ಹೋಗಲಾಡಿಸಿಕೊಳ್ಳುವರೆಂಬುದು ಧ್ವನಿತವಾಗುತ್ತದೆ. ಏಕೆಂದರೆ ಆ ದೇಶದಲ್ಲಿರುವ ಸ್ವಾಮಿ, 'ಶೆಯ್ದಾರೇಲ್ ನನ್ರು ಶೆಯ್ದಾರ್' ಎಂದು ಹೇಳುವವನಾಗಿದ್ದಾನೆ.

**ಕೊಟು ಕಯಲ್ ಆಯ್‌ ನೆಡುವೆಳ್ಳಂ ಕೊಂಡಕಾಲವ್**
**ಕುಲವರೈಯಿನ್ ಮೀದು ಓಡಿ ಅಂಡತ್ತಪ್ಪಾಲ್**

ಎಟುನ್ದು ಇನಿದು ವಿಳೈಯಾಡುಂ ಈಶನ್ ಎನ್ದೈ
ಇಣೈ ಅಡಿಕ್ಕೀೞ್ ಇನಿದು ಇರುಪ್ಪೀರ್ ಇನವಂಡು ಆಲುಂ
ಉಟುಂ ಶೆರುವಿನ್ ಮಣಿಕೊಣರ್ನ್ದು ಕರೈಮೇಲ್ ಶಿನ್ದಿ
ಉಲ ಹೆಲ್ಲಾಂ ಶನ್ದನಮುಮ್ ಅಹಿಲುಂಕೊಳ್ಳ
ಶೆಟುಂಪೊನ್ನಿ ವಳಮ್ಕೊಡುಕ್ಕುಂ ಶೋೞನ್‌ಶೇರ್‌ನ್ದ
ತಿರುನರೈಯೂರ್ ಮಣಿಮಾಡಮ್ ಶೇರ್ಮಿನ್‌ಹಳೇ ॥೨॥

(ನೆಡುವೆಳ್ಳಂ ಕೊಂಡಕಾಲಂ) ಪ್ರಳಯಕಾಲದ ಜಲ ಪ್ರವಾಹವು ಲೋಕವನ್ನೆಲ್ಲಾ ಆಕ್ರಮಿಸಿದ ಸಮಯದಲ್ಲಿ (ಕೋಟು ಕಯಲ್ ಆಯ್) ದೊಡ್ಡ ಮತ್ಸ್ಯವಾಗಿ (ಕುಲವರೈಯಿನ್ ಮೀದು ಓಡಿ) ಕುಲಪರ್ವತಗಳ ಮೇಲೆ ಹಾಯ್ದು ಸಂಚರಿಸಿ (ಅಪ್ಪಾಲ್) ಅದಕ್ಕೂ ಮೇಲೆ (ಅಂಡತ್ತು ಎಟುನ್ದು) ಅಂಡಭಿತ್ತಿಯವರೆಗೂ ಚಿಮ್ಮಿ (ಇನಿದು ವಿಳೈಯಾಡುಂ) ಸುಖವಾಗಿ ಆಟವಾಡಿದ (ಈಶನ್ ಎಂದೈ) ನಮ್ಮ ಸ್ವಾಮಿಯ (ಇಣೈಅಡಿಕೀೞ್ ಇನಿದು ಇರುಪ್ಪೀರ್) ಪಾದಗಳೆರಡರ ಅಡಿಯಲ್ಲಿ ಸುಖವಾಗಿ ಬಾಳುತ್ತಿರುವವರೇ, (ಇನಂ ವಂಡು) ಹಿಂಡು ಹಿಂಡಾಗಿ ನೆರೆವ ದುಂಬಿಗಳು (ಆಲುಂ) ಚರಿಸುತ್ತಿರುವಂತಹ (ಶೆಟುಪೊನ್ನಿ) ಸುಂದರವಾದ ಕಾವೇರಿಯು (ಉಟುವರ್ ಶೆರುವಿನ್ ಕರೈಮೇಲ್) ಉಳುಮೆ ಮಾಡುತ್ತಿರುವ ಗದ್ದೆಗಳ ಹರಹಿನ ಮೇಲೆ (ಮಣಿಕೊಣರ್ನ್ದು ಶಿನ್ದಿ) ರತ್ನಗಳನ್ನು ತಂದುಹರಡಿಯೂ, (ಉಲಹು ಎಲ್ಲಾಂ) ಸಕಲ ಜನಗಳೂ (ಶಂದನಮುಂ ಅಹಿಲುಂ) ಗಂಧ ಮತ್ತು ಅಗರುಗಳ ಕೊರಡುಗಳನ್ನು (ಕೊಳ್ಳ) ಕೊಳ್ಳೆ ಕೊಳ್ಳೆಯಾಗಿ ತೆಗೆದುಕೊಳ್ಳುವುದಕ್ಕಾಗುವಂತೆ (ವಳಂ ಕೊಡುಕ್ಕುಂ) ಸಮೃದ್ಧವಾಗಿ ತಂದು ಹಾಕುವಂತಹದೂ, (ಶೋೞನ್‌ಶೇರ್‌ನ್ದ) ಚೋಳರಾಜನು ಕೈಂಕರ್ಯವನ್ನು ಸಲ್ಲಿಸುವಂಥದೂ ಆದ (ತಿರುನರೈಯೂರ್ ಮಣಿಮಾಡಂ ಶೇರ್‌ಮಿನ್‌ಹಳ್) ತಿರುನರೈಯೂರಿನಲ್ಲಿರುವ ದಿವ್ಯಸನ್ನಿಧಿಯನ್ನು ಹೋಗಿ ಸೇರುವಂಥವರಾಗಿ.

ಹಿಂದಿನ ಪಾಶುರದಲ್ಲಿ ಪ್ರಳಯಕಾಲದಲ್ಲಿ ಪರಮಾತ್ಮನು ಎಳೆಯ ಆಲದೆಲೆಯ ಮೇಲೆ ಶಯನಿಸಿದುದನ್ನು ಅನುಸಂಧಾನ ಮಾಡಿದರು. ಈ ಪಾಶುರದಲ್ಲಿ ಆ ಪ್ರಳಯ ಜಲದಲ್ಲಿ ಚಿಮ್ಮಿ ವಿಹರಿಸಿದ ಮತ್ಸ್ಯಾವತಾರ

ರೂಪಿಯನ್ನು ಅನುಸಂಧಾನ ಮಾಡಿದ್ದಾರೆ. ಆ ಮಾಯಾಮತ್ಸ್ಯವು ದೃಢವಾದ ಮತ್ಸ್ಯವಾಗಿ ಕುಲಪರ್ವತಗಳ ಮೇಲೆ ಹೋಗಿ ಅಂಡಭಿತ್ತಿಯವರೆಗೂ ಚಿಮ್ಮಿ ತನ್ನಿಚ್ಛೆ ಬಂದಂತೆ ಲೀಲಾರಸವನ್ನು ಅನುಭವಿಸುವಂಥ ಸ್ವತಂತ್ರನಾಗಿತ್ತು. ಆ ಸ್ವಾಮಿ ತಾನೇ ನಮಗೆ ಆಶ್ರಯಣೀಯನು! ನಮಗೆ ತಕ್ಕುವಾದ ಆ ಸ್ವಾಮಿಯ ಪಾದಾರವಿಂದಗಳನ್ನಾಶ್ರಯಿಸಿ ಆನಂದನಿರ್ಭರರಾಗಿ ಇರಬೇಕೆಂದು ಬಯಸುವವರೇ, ನೀವು ದರ್ಶನೀಯವಾದ ಕನಕಸರಿತ್ತು, ಸಮೃದ್ಧಿಗಳನ್ನು ತಂದುಕೊಡುವ ತಿರುನರೈಯೂರಿನಲ್ಲಿರುವ ದಿವ್ಯಸನ್ನಿಧಿಯಲ್ಲಿ ಅವನನ್ನು ಆಶ್ರಯಿಸಿ. ಭಗವಂತನ ವಿಲಾಸ ಚೇಷ್ಟಿತಕ್ಕೆ ಕಡಿಮೆ ಇಲ್ಲದಂತೆ ಕಾವೇರಿಯೂ ಸ್ವೈರಸಂಚಾರ ಮಾಡುವ ಆ ದಿವ್ಯದೇಶವು ಇವರಿಗೆ ಉದ್ದೇಶ್ಯವಾಗಿರುವಂತೆ ಕಂಡುಬರುತ್ತದೆ.

**ಪವ್ವನೀರ್ ಉಡೈ ಆಡೈ ಆಹಶುತ್ತಿ ಪಾರ್ ಅಹಲಮ್**
**ತಿರುವಡಿ ಆ ಪವನನಮ್ ಮೆಯ್ ಆ**
**ಶೆವ್ವಿಮಾತಿರಮ್ ಎಟ್ಟುಂ ತೋಳ್ ಆ**
**ಅಂಡಂ ತಿರುಮುಡಿ ಆ ನಿನ್ರಾನ್ ಪಾಲ್ ಶೆಲ್ಲಹಿರ್ಪೀರ್**
**ಕವ್ವೈ ಮಾ ಕಳಿರು ಉಂದಿ ವೆಣ್ಣೆ ಏತ್ತ**
**ಕಟಲ್ ಮನ್ನರ್ ಮಣಿಮುಡಿಮೇಲ್ ಕಾಕೆಂಏರ**
**ಶೆಯ್‌ವಾಳ್ ವಲಂಕೊಂಡ ಶೋಟಿನ್ ಶೀರ್‌ನ್ದ**
**ತಿರುನರೈಯೂರ್ ಮಣಿಮಾಡಂ ಶೇರ್ಮಿನ್‌ಹಳೇ ॥೩॥**

(ಪವ್ವಂನೀರ್) ಸಾಗರದ ಜಲವನ್ನು (ಉಡೈ ಆಡೈ) ಸೊಂಟಕ್ಕೆ ಕಟ್ಟಿಕೊಳ್ಳುವ ಪೀತಾಂಬರ (ಆಹಶುತ್ತಿ) ಆಗುವಂತೆ ಸುತ್ತಿಕೊಂಡು (ಪಾರ್ ಅಹಲಂ) ಹರಡಿರುವ ಭೂಮಿಯನ್ನೆಲ್ಲಾ (ತಿರುವಡಿ ಆ) ಶ್ರೀಪಾದಗಳನ್ನಾಗಿ ಹೊಂದಿ (ಪವನಮ್ ಮೆಯ್ ಆ) ವಾಯುವನ್ನು ದಿವ್ಯಶರೀರವನ್ನಾಗಿ ಹೊಂದಿ (ಶೆವ್ವಿಮಾತಿರಮ್) ಸುಂದರವಾದ ಎಂಟು ದಿಕ್ಕುಗಳನ್ನೂ (ಎಟ್ಟುಂತೋಳ್ ಆ) ಎಂಟು ಭುಜಗಳನ್ನಾಗಿ ಹೊಂದಿ (ಅಂಡಂ ತಿರುಮುಡಿ ಆ) ಅಂಡಭಿತ್ತಿಯನ್ನು ಶಿರಸ್ಸನ್ನಾಗಿ ಹೊಂದಿ (ನಿನ್ರಾನ್‌ಪಾಲ್) ನಿಂತಿರುವ ಸರ್ವೇಶ್ವರನ ಬಳಿ (ಶೆಲ್ಲಹಿರ್ಪೀರ್) ಸಾರಬೇಕೆಂದು ಬಯಸುತ್ತಿರುವವರೇ, (ಕವ್ವೈ) ದರ್ಪದೊಡನೆ

ಮದಿಸಿದ (ಮಾ ಕಳಿರು ಉಂದಿ) ದೊಡ್ಡ ದೊಡ್ಡ ಆನೆಗಳನ್ನು ತಳ್ಳಿಕೊಂಡು ಬಂದು (ವೆಣ್ಣೆ) ವೆಣ್ಣೆ ಎಂಬ ಜಾಗದಲ್ಲಿ (ಏತ್ತ) ಎದುರಾಗಿ ಆಕ್ರಮಿಸಲು ಬಂದ, (ಕಟಿಲ್‌ಮನ್ನರ್) ವೀರಕಡಗಗಳನ್ನು ಧರಿಸಿದ್ದ ರಾಜರುಗಳ (ಮಣಿ ಮುಡಿಮೇಲ್) ಶ್ರೇಷ್ಠವಾದ ಶಿರಸ್ಸುಗಳ ಮೇಲೆ (ಕಾಕಂಏರ) ಕಾಗೆಗಳು ಎರಗಿ ಜೀವಿಸುವುದಕ್ಕಾಗುವಂತೆ (ತೆಯ್‌ವಂ ವಾಳ್ ವಲಂ ಕೊಂಡ) ದಿವ್ಯವಾದ ಕತ್ತಿಯ ಬಲವನ್ನು ತೋರಿದ (ಶೋಟಿನ್ ಶೇರ್‌ನ್ದ) ಚೋಳರಾಜನು ಕೈಂಕರ್ಯಮಾಡುವಂಥದಾದ (ತಿರುನರೈಯೂರ್ ಮಣಿಮಾಡಂ ಶೇರ್‌ಮಿನ್ ಹಳ್) ತಿರುನರೈಯೂರ್‌ನಲ್ಲಿರುವ ದಿವ್ಯಸನ್ನಿಧಿಯನ್ನು ಸೇರಿ.

ಜಗದಾಕಾರನಾಗಿರುವ ಆ ಸರ್ವೇಶ್ವರನಿಗೆ ಸಮುದ್ರ ಜಲವೇ ಉಡುವ ಪೀತಾಂಬರವಾಗಿದೆ. ವಿಸ್ತಾರವಾದ ಭೂಮಿಯೇ ಪಾದಗಳು ; ವಾಯು ದಿವ್ಯಶರೀರ ; ಎಂಟು ದಿಕ್ಕುಗಳು ಎಂಟು ಭುಜಗಳು. ಅಂಡಭಿತ್ತಿಯೇ ಶಿರಸ್ಸು. ಇಂಥ ಪ್ರಭುವನ್ನು ಸೇರಲು ಬಯಸುವವರಾದ ನೀವು ತಿರುನರೈ ಊರನ್ನು ಸೇರಿ ನಿಮ್ಮ ಮನೋರಥವನ್ನು ಪಡೆಯುವವರಾಗಿ.

**ಪೈಂಗಣ್ ಆಳ್ ಅರಿ ಉರುವಾಯ್ ವೆರುವ ನೋಕ್ಕಿ**
**ಪರುವರತ್ತೋಳ್ ಇರಣಿಯನೈ ಪತ್ತಿವಾಂಗಿ**
**ಅವ್‌ಕೈವಾಳ್ ಉಹಿರ್ ನುದಿಯಾಲ್ ಅವನದು ಆಹಂ**
**ಅವ್‌ಕುರುತಿ ಪೊಂಗುವಿತ್ತಾನ್ ಅಡಿಕ್ಕೀಟ್ ನಿರ್ಪೀರ್**
**ವೆಮ್‌ಕಣ್ ಮಾಕಳಿರು ಉಂದಿ ವೆಣ್ಣೆಏತ್ತ**
**ವಿರಲ್‌ಮನ್ನರ್ ತಿರಲ್ ಅಟಿಯ ವೆಮ್‌ಮಾ ಉಯ್‌ತ್ತ**
**ಶೆಂಗಣಾನ್ ಕೋಚ್ಚೋಟಿನ್ ಶೇರ್‌ನ್ದ ಕೋಯಿಲ್**
**ತಿರುನರೈಯೂರ್ ಮಣಿಮಾಡಂಶೇರ್ಮಿನ್‌ಗಳೇ ॥೪॥**

(ಪೈಂಗಣ್) ಅರುಣನೇತ್ರಗಳನ್ನುಳ್ಳ (ಆಳ್‌ಅರಿ ಉರುವಾಯ್) ಶ್ರೀನೃಸಿಂಹ ರೂಪಿಯಾಗಿ (ವೆರುವನೋಕ್ಕಿ) ಎದುರಾಳಿಗಳು ಹೆದರುವಂತೆ ನೋಟವನ್ನು ಬೀರಿ (ವರಂ ಪರುತೋಳ್) ಪಡೆದ ವರಗಳಿಂದ ಕೊಬ್ಬಿದ ತೋಳುಗಳನ್ನುಳ್ಳ (ಇರಣಿಯನೈ ಪತ್ತಿವಾಂಗಿ) ಹಿರಣ್ಯಕಶಿಪುವನ್ನು ಹಿಡಿದುಕೊಂಡು (ಅವ್ ಕೈ ವಾಳ್ ಉಹಿರ್ ನುದಿಯಾಲ್) ಸುಂದರವಾದ ಹಸ್ತಗಳಲ್ಲಿ ಪ್ರಕಾಶಿಸುತ್ತಿದ್ದ

ನಖಗಳ ಅಗ್ರದಿಂದ (ಅವನದು ಆಹಂ) ಆ ಹಿರಣ್ಯಕಶಿಪುವಿನ ಶರೀರದಿಂದ (ಅವರ್‌ಕುರುದಿ ಪೊಂಗುವಿತ್ತಾನ್) ರಕ್ತಪ್ರವಾಹವು ಹರಿಯುವಂತೆ ಮಾಡಿದವನಾದ ಸ್ವಾಮಿಯ (ಅಡಿಕ್ಕೀಟ್ ನಿರ್ಪೀರ್) ಪಾದಗಳಡಿಯಲ್ಲಿ ನಿಲ್ಲಲು ಆಶೆ ಉಳ್ಳವರುಗಳೇ, (ವೆಮ್‌ಕಣ್ ಮಾ ಕಳಿರು ಉಂದಿ) ಜ್ವಲಿಸುವ ಕಣ್ಣುಗಳನ್ನುಳ್ಳ ದೊಡ್ಡದೊಡ್ಡ ಆನೆಗಳನ್ನು ತಳ್ಳಿಕೊಂಡು ಬಂದು (ವೆಣ್ಣೆ ಏತ್ತ) ವೆಣ್ಣೆ ಎಂಬುವೆಡೆಯಲ್ಲಿ ಎದುರಿಸಿ ಬಂದ (ವಿರಲ್ ಮನ್ನರ್ ತಿರಲ್ ಅಟಿಯ) ಶೂರರಾದ ಅರಸರುಗಳ ದರ್ಪವೆಲ್ಲಾ ಅಡಗಿ ಹೋಗುವಂತೆ (ವೆವರ್ ಮಾ ಉಯ್‌ತ್ತ) ಭಯಂಕರವಾದ ಕುದುರೆಗಳನ್ನು ನಡೆಸಿ ಜಯವನ್ನು ಪಡೆದವನಾದ (ಶೆಂಗಣಾನ್ ಕೋ ಶೋಟಿನ್) ಚೋಳರಾಜನು (ಶೇರ್‌ನ್ದ ಕೋಯಿಲ್ ತಿರುನರೈಯೂರ್ ಮಣಿಮಾಡಮ್ ಶೇರ್‌ಮಿನ್‌ಹಳ್) ಬಂದು ಸೇವೆಸಲ್ಲಿಸುವಂತಹ ತಿರುನರೈಯೂರ್‌ನಲ್ಲಿರುವ ದಿವ್ಯಸನ್ನಿಧಿಯನ್ನು ಬಂದು ಸೇರುವವರಾಗಿ.

ಹಿಂದಿನ ಪಾಶುರದಲ್ಲಿ ಪರಮಾತ್ಮನ ಜಗದಾಕಾರತ್ವವನ್ನು ಅನುಸಂಧಾನ ಮಾಡಿದರು. ಈ ಪಾಶುರದಲ್ಲಿ 'ವ್ಯಾಪ್ತಿಂ ಚ ಭೂತೇಷ್ವಖಿಲೇಷುಚಾತ್ಮನಃ' ಎಂದು ಹೇಳಿದಂತೆ ಆ ಜಗದಾಕಾರತ್ವಕ್ಕೆ ಉಪಯುಕ್ತವಾಗಿರುವಂತಹ ವ್ಯಾಪಕತ್ವವನ್ನು ನೆನಪಿಗೆ ತರಲು ಶ್ರೀನೃಸಿಂಹಾವತಾರದ ಅನುಸಂಧಾನವನ್ನು ಮಾಡಿದ್ದಾರೆ. ಜಾತ್ಯುಚಿತವಾದ ದಿವ್ಯನೇತ್ರಗಳೇ ಜ್ವಲಸುತ್ತಿರಲು ಅವುಗಳಿಂದ ಭಯಾಗ್ನಿಯನ್ನು ಹೊತ್ತಿಸುವಂತೆ ನೋಟಗಳನ್ನು ಶ್ರೀನೃಸಿಂಹನು ಬೀರಿದನಂತೆ. ವರ ಬಲದಿಂದ ಮದಿಸಿದ್ದ ಹಿರಣ್ಯಕಶಿಪುವನ್ನು ಹಿಡಿದು ತನ್ನ ಮಡಿಲಿನ ಮೇಲಿಟ್ಟುಕೊಂಡು ನಿಶಿತವಾದ ತನ್ನ ನಖಾಗ್ರಗಳಿಂದ ಅವನ ದೇಹವನ್ನು ಬಗೆದು ರಕ್ತದ ಪ್ರವಾಹವನ್ನು ಹರಿಯಿಸಿದ ಆ ಸರ್ವೇಶ್ವರನ ಪಾದಗಳನ್ನು ಸೇರಲು ಬಯಸುವ ಅನನ್ಯಭಕ್ತರೇ, ನೀವೂ ಸಹ ಭಗವಂತನ ಅನುಗ್ರಹದಿಂದ ಶತ್ರುನಿರಸನ ಮಾಡಿದ ಚೋಳರಾಜನು ತಿರುನರೈಯೂರ್ ಕ್ಷೇತ್ರಕ್ಕೆ ಬಂದು ಆ ಭಗವಂತನನ್ನು ಆಶ್ರಯಿಸಿದಂತೆ, ಆ ಕ್ಷೇತ್ರಕ್ಕೆ ಹೋಗಿ ಆಶ್ರಯಿಸಿ— ಎಂದು ಆಳ್ವಾರ್ ಅವರು ಸೂಚಿಸುತ್ತಾರೆ.

**ಅನ್ರು ಉಲಹಂ ಮೂನ್ರಿನ್ನೈಯುಂ ಅಳೆಂದು, ವೇರೋರ್**
**ಅರಿಉರುವಾಯ್ ಇರಣಿಯನದು ಆಹಂ ಕೀಂಡು**

ವೆನ್ರು ಅವನ್ನೈ ವಿಣ್ ಉಲಹಿಲ್ ಶೆಲ ಉಯ್ತ್ತಾರ್ಕ್ಕ್
ವಿರುಂಡು ಆವೀರ್, ಮೇಲೆಟುನ್ದ್ದು ವಿಲಂಗಲ್ ಪಾಯ್ನ್ದ್ದು
ಪೊನ್ ಶಿದರಿ ಮಣಿಕೊಣರ್ನ್ದ್ದು ಕರೈಮೇಲ್ ಶಿಂದಿ
ಪುಲವ್ ಪರಂದು ನಿಲಂಪರಿಕ್ಕುವ್ ಪೊನ್ನಿ ನಾಡನ್
ತೆನ್ ತಮಿಟಿನ್ ವಡಪುಲವ್ ಕೋನ್ ಶೇರ್ನ್ದ
ತಿರುನರೈಯೂರ್ ಮಣಿಮಾಡಂ ಶೇರ್ಮಿನ್ ಗಳೇ ॥೫॥

(ಅನ್ರು ಉಲಹಂ ಮೂನ್ರಿನ್ನೈಯುಂ) ಹಿಂದೊಂದು ಕಾಲದಲ್ಲಿ ಮೂರು ಲೋಕಗಳನ್ನೂ (ಅಳಂದು) ತ್ರಿವಿಕ್ರಮನಾಗಿ ಅಳೆದುಕೊಂಡವನೂ, (ವೇರು ಓರ್ ಅರಿ ಉರುವಾಯ್) ವಿಲಕ್ಷಣವಾದ ನರಸಿಂಹ ರೂಪಿಯಾಗಿ (ಇರಣಿಯನದು ಆಹಂ ಕೀಂಡು ವೆನ್ರು) ಹಿರಣ್ಯಕಶಿಪುವಿನ ದೇಹವನ್ನು ಎರಡು ಹೋಳಾಗಿ ಸೀಳಿ ಜಯಶಾಲಿಯಾದವನಾಗಿ (ಅವನ್ನೈ ವಿಣ್ ಉಲಹಿಲ್ ಶೆಲ ಉಯ್ತ್ತಾರ್ಕ್ಕ್) ಆ ಹಿರಣ್ಯಕಶಿಪು ವೀರಸ್ವರ್ಗವನ್ನು ಸೇರುವಂತೆ ಮಾಡಿದವನೂ ಆದ ಸರ್ವೇಶ್ವರನನ್ನು (ವಿರುಂದು ಆ ವೀರ್) ಬಯಸುವವರಾದ ಉತ್ತಮರೇ, (ಮೇಲೆ ಎಟುಂದು ವಿಲಂಗಲ್ ಪಾಯ್ನ್ದ್ದು) ಪ್ರವಾಹದಿಂದ ಹೊಮ್ಮಿ ಅಡಚಣೆಯಾಗಿದ್ದ ಬೆಟ್ಟಗಳನ್ನು ಹಾಯ್ದುಬಂದು (ಪೊನ್ ಶಿದರಿ) ಚಿನ್ನವನ್ನು ಎಲ್ಲೆಲ್ಲಿಯೂ ಚೆಲ್ಲಿಕೊಂಡು, ಅದಕ್ಕೂ ಮೇಲೆ, (ಮಣಿಕೊಣರ್ನ್ದ್ದು) ಅನೇಕ ರತ್ನಗಳನ್ನು ಕೊಚ್ಚಿಕೊಂಡುಬಂದು (ಕರೈಮೇಲೆ ಶಿಂದಿ) ದಡದ ಮೇಲೆ ಹರಡಿ (ಪುಲವ್ ಪರಂದು) ಅಕ್ಕ ಪಕ್ಕದ ಜಾಗವನ್ನೆಲ್ಲಾ ವ್ಯಾಪಿಸಿ, ಹೀಗೆ (ನಿಲಂ ಪರಕ್ಕುಂ ಪೊನ್ನಿನಾಡನ್) ಭೂಮಿಯನ್ನೆಲ್ಲಾ ಹರಡಿಕೊಂಡಿರುವ ಕಾವೇರೀ ನದಿ ಇರುವ ನಾಡಿಗೆ ನಾಯಕನೂ, (ತೆನ್ ತಮಿಟಿನ್) ದಕ್ಷಿಣದಿಕ್ಕಿನಲ್ಲಿರುವ ದೇಶಕ್ಕೆ ರಾಜನೂ, (ವಡಪುಲವ್ ಕೋನ್) ಉತ್ತರ ದಿಕ್ಕಿನಲ್ಲಿರುವ ನಾಡಿಗೂ ರಾಜನೂ ಆದ (ಶೋಟಿನ್ ಶೇರ್ನ್ದ ತಿರುನರೈಯೂರ್ ಮಣಿಮಾಡಂ ಶೇರ್ಮಿನ್ ಹಳೇ) ಚೋಳರಾಜನು ಬಂದು ಸೇವೆಸಲ್ಲಿಸುತ್ತಿರುವ ತಿರುನರೈಯೂರ್‌ನ ದಿವ್ಯಸನ್ನಿಧಿಯನ್ನು ಬಂದು ಸೇರುವವರಾಗಿ.

ಮೂರುಲೋಕಗಳನ್ನೂ ತನ್ನ ಕಾಲಿನ ಕೆಳಗೆ ಇಟ್ಟುಕೊಂಡ ಸ್ವಾಮಿ ನಾಡಿನಲ್ಲೆಲ್ಲೂ ಕಂಡುಬರದ ವಿಲಕ್ಷಣವಾದ ಶ್ರೀನೃಸಿಂಹನಾಗಿ ಆವಿರ್ಭವಿಸಿ

ದೇವಶತ್ರುವೂ ಆಶ್ರಿತವಿರೋಧಿಯೂ ಆದ ಹಿರಣ್ಯಕಶಿಪುವನ್ನು ತನ್ನ ಸ್ವಹಸ್ತದಿಂದಲೇ ವಧಿಸಿ ವೀರಸ್ವರ್ಗಕ್ಕೆ ಕಳುಹಿಸಿದ. 'ಅವನಿಗೆ ಪ್ರಿಯರಾಗಲು ಬಯಸುವ ಭಕ್ತೋತ್ತಮರೇ, ನೀವು ಪಾಂಡ್ಯದೇಶ, ಚೋಳಮಂಡಲ ಮೊದಲಾದವನ್ನೂ ತಾನೇ ಆಳಿದ ಆ ಚೋಳನು ತನ್ನ ಆತ್ಮೋಜ್ಜೀವನಕ್ಕಾಗಿ ಯಾವ ತಿರುನರ್ೖಯೂರ್ ಕ್ಷೇತ್ರವನ್ನು ಆಶ್ರಯಿಸಿದನೋ ಅದನ್ನೇ ಪ್ರೀತಿಯಿಂದ ಹೋಗಿ ಆಶ್ರಯಿಸಿ'— ಎನ್ನುತ್ತಾರೆ ಆಳ್ವಾರ್ ಅವರು.

> ತನ್ನಾಲೇ ತನ್ನುರುವವನ್ ಪಯನ್ದ ತಾನಾಯನ್
> ತಯಂಗು ಒಳಿಶೇರ್ ಮೂ ಉಲಹುಂ ತಾನಾಯ್ ವಾನಾಯನ್
> ತನ್ನಾಲೆತನ್ ಉರುವಿಲ್ ಮೂರ್ತಿಮೂನ್ರಾಯನ್
> ತಾನ್ ಆಯನ್ ಆಯಿನಾನ್ ಶರಣೆನ್ರು ಉಯನ್ ವೀರ
> ಮಿನ್‌ನಾಡು ವೇಲ್‌ಏಂದು ವಿಳಂದವೇಳ್ಳಿ
> ವಿಣ್ ಏರ ತನಿವೇಲ್ ಉಯ್‌ತ್ತು ಉಲಹಂ ಆಂಡ
> ತೆನ್‌ನಾಡನ್ ಕುಡಕೊಂಗನ್ ಶೋಳನ್
> ಶೇರ್‌ನ್ದ ತಿರುನರೈಯೂರ್ ಮಣಿಮಾಡಂ ಶೇರ್ಮಿನ್‌ಗಳೇ
>
> ॥೬॥

(ತನ್ನಾಲೇ) ಸ್ವೇಚ್ಛೆಯಿಂದ (ತನ್‌ಉರುವವನ್ ಪಯನ್ದ) ತನ್ನ ದಿವ್ಯಮಂಗಳ ವಿಗ್ರಹವನ್ನು ಮಾಡಿಕೊಂಡ (ತಾನ್‌ಆಯನ್) ದಿವ್ಯಾತ್ಮ ಸ್ವರೂಪವುಳ್ಳವನಾಗಿ (ತಯಂಗು ಒಳಿಶೇರ್ ಮೂವುಲಹುಂ ತಾನಾಯ್) ಪ್ರಕಾಶವನ್ನುಳ್ಳ ಮೂರು ಲೋಕಗಳನ್ನೂ 'ತಾನೇ' ಎಂದು ಹೇಳುವಂತೆ ಅಡಗಿಸಿಕೊಂಡವನೂ, (ವಾನ್‌ಆಯ್) ಪರಮಪದಕ್ಕೆ ನಿರ್ವಾಹಕನಾಗಿ, (ತನ್ನಾಲೇ ತನ್‌ಉರುವಿಲ್ ಮೂನ್ರು ಮೂರ್ತಿ ಆಯ್) ತನ್ನ ಸಂಕಲ್ಪದಿಂದಲೇ ತನ್ನ ಸ್ವರೂಪದಿಂದ ಮೂರು ಮೂರ್ತಿಗಳನ್ನು ಆವಿರ್ಭಾವಗೊಳಿಸಿದವನೂ ಆಗಿ (ತಾನ್ ಆಯನ್ ಆಯಿನಾನ್) ತಾನೇ ಗೋಪಾಲಕೃಷ್ಣನಾಗಿಯೂ ಅವತರಿಸಿದವನಾದ ನಮ್ಮ ಸ್ವಾಮಿಯನ್ನೇ (ಶರಣ್ ಎನ್ರು ಉಯ್‌ವೀರ್) ಶರಣನೆಂದು ಎಣಿಸಿ ಉಜ್ಜೀವಿಸಲಿಚ್ಛಿಸುವವರೇ, (ಮಿನ್ ಆಡು ವೇಲ್‌ಏಂದಿ) ಮಿಂಚಿನಂತೆ ಕಾಂತಿಯುಳ್ಳ

ವೇಲಾಯುಧವನ್ನು ಧರಿಸಿದ (ವಿಳಂದೈವೇಳ್ಳೆ ವಿಣ್ಏರ) 'ವಿಳಂದೈವೇಳ್ಳೆ' ಎಂಬುವ ರಾಜನು ವೀರಸ್ವರ್ಗವನ್ನೇರುವಂತೆ (ತನಿವೇಲ್ ಉಯರ್ತ್ತು) ಅಸಮ ವಾದ ವೇಲಾಯುಧವನ್ನು ಪ್ರಯೋಗಿಸಿ (ಉಲಹಂ ಆಂಡ ತೆನ್‌ನಾಡನ್) ಲೋಕಗಳನ್ನು ಆಳುತ್ತಾ ಬಂದ ದಕ್ಷಿಣದೇಶದ ರಾಜನಾಗಿ (ಕುಡಕೊಂಗನ್) ಮೇಲ್ದಿಕ್ಕಿನಲ್ಲಿರುವ ಕೊಂಗುನಾಡಿಗೂ ನಿರ್ವಾಹಕನಾದ (ಶೋಟಿನ್ ಶೇರ್‌ನ್ದ ಕೋಯಿಲ್ ತಿರುನರೈಯೂರ್ ಮಣಿಮಾಡಂ ಶೇರ್‌ಮಿನ್‌ಹಳ್) ಚೋಳ ರಾಜನು ಬಂದು ಸೇವೆ ಸಲ್ಲಿಸುತ್ತಿರುವ ತಿರುನರೈಯೂರಿನಲ್ಲಿರುವ ದಿವ್ಯಸನ್ನಿಧಿ ಯನ್ನು ಬಂದು ಸೇರುವವರಾಗಿ.

'ಅನನ್ಯಾಧಿಪತಿಃ' ಎಂದೂ 'ಸ್ವೇಮಹಿಮ್ನಿ ಪ್ರತಿಷ್ಠಿತಃ' ಎಂದೂ 'ಇಚ್ಛಾಗೃಹೀತಾಭಿಮತೋರುದೇಹಃ' ಎಂದೂ ಹೇಳುವಂತೆ ಇತರ ವಿಸಜಾತೀ ಯನಾಗಿ ತನ್ನ ಸ್ವರೂಪಾದಿಗಳನ್ನು ತನ್ನ ಸಂಕಲ್ಪಕ್ಕನುಸಾರ ಉಳ್ಳವನು ಆ ಸರ್ವೇಶ್ವರ. ತನ್ನ ಸ್ವರೂಪ, ಸ್ಥಿತಿ ಮೊದಲಾದವು ತನ್ನ ಇಚ್ಛೆಗಧೀನವಾಗಿಯೇ ಉಳ್ಳವನವನು. ಕೃತಕ, ಅಕೃತಕ, ಕೃತಕಾಕೃತಕ ಎಂದು ಮೂರು ಬಗೆಯಾಗಿ ಹೇಳಲ್ಪಡುವ ಲೀಲಾವಿಭೂತಿಯೆಲ್ಲವನ್ನೂ ತನ್ನ ಅಧೀನದಲ್ಲಿ ಹೊಂದಿರುವವ ನವನು. ಲೀಲಾವಿಭೂತಿಯನ್ನೂ ನಿತ್ಯವಿಭೂತಿಯನ್ನೂ ತನ್ನ ಶರೀರವನ್ನಾಗಿ ಉಳ್ಳವನವನು. ಆ ಲೀಲಾವಿಭೂತಿಯು ಸೃಷ್ಟಿ ಮೊದಲಾದವುಗಳಿಗೆ ಅನು ರೂಪವಾದ ಮೂರು ರೂಪಗಳನ್ನುಳ್ಳವನು ಅವನು. ತನ್ನ ರೂಪದಲ್ಲಿಯೇ ಇದ್ದು ಪಾಲನಮಾಡುವುದು, ಬ್ರಹ್ಮರುದ್ರರುಗಳಿಗೆ ಅಂತರಾತ್ಮನಾಗಿ ಸೃಷ್ಟಿ ಪ್ರಲಯಗಳನ್ನು ಮಾಡುವುದು—ಹೀಗೆ ಮೂರು ಕಾರ್ಯಗಳಿಗೂ ಸಮನಾಗುವ ಮೂರು ರೂಪಗಳನ್ನು ತನ್ನ ಸಂಕಲ್ಪದಿಂದಲೇ ಹೊಂದಿದವನು ಅವನು. ಲೀಲಾ ವಿಭೂತಿಯಲ್ಲಿ ತನಗೇ ವಿಭೂತಿಭೂತರಾದವರಲ್ಲಿ ಕೆಲವರು, 'ಇವನು ನನ್ನ ಮಗ' ಎಂದು ಅಭಿಮಾನಿಸುವಂತೆ ಕೃಷ್ಣನಾಗಿ ಬಂದು ಅವತರಿಸಿದ ಆ ಸರ್ವೇಶ್ವರ. ಅಂಥ ಕೃಷ್ಣನೇ ನಮಗೆ ರಕ್ಷಕ, ನಮಗೆ ಗತಿ ಎಂದು ತಿಳಿದು ಅವನನ್ನು ಆಶ್ರಯಿಸಿ ಉಜ್ಜೀವಿಸಲಿಚ್ಛಿಸುವವರೇ, ನೀವು ಆ ಚೋಳರಾಜನು ಬಂದು ಆಶ್ರಯಿಸಿದ ತಿರುನರೈಯೂರ್ ಕ್ಷೇತ್ರವನ್ನು ಸೇರಿ ಆ ಸರ್ವೇಶ್ವರನನ್ನು ಅಲ್ಲಿ ಆಶ್ರಯಿಸಿ ಧನ್ಯರಾಗಿ–ಎಂದು ಆಳ್ವಾರ್ ಹೇಳುತ್ತಾರೆ.

**ಮುಲೈತಡತ್ತ ನಂಜುಂಡು ತುಂಜಪೇಯ್ಚ್ಚಿ**
**ಮುದುತುವರ್ೖ ಕುಲಪತಿಯಾಯ್ ಕಾಲಿಪ್ಪಿನ್ನೇ**
**ಇಲ್ಲೈತಡತ್ತ ಕುಟಲೂದಿ ಆಯರ್ ಮಾದರ್**
**ಇನವಳೈಕೊಂಡಾನ್ ಅಡಿಕ್ಕೀಟ್ ಎಯ್ದ ಹಿರ್ಪೀರ್**
**ಮಲೈತಡತ್ತ ಮಣಿ ಕೊಣರ್ನ್ದು ವೈಯಂಉಯ್ಯ**
**ವಳಂಕೊಡುಕ್ಕುಂ ವರು ಪುನಲುಂ ಪೊನ್ನಿನಾಡನ್**
**ಶಿಲತ್ತಡಕ್ಕೈ ಕುಲಚ್ಚೊೞಟಿನ್ ಶೇರ್ನ್ದಕೋಯಿಲ್**
**ತಿರುನರ್ೖಯೂರ್ ಮಣಿಮಾಡಂ ಶೇರ್ಮಿನ್‌ಹಳೇ ॥೭॥**

(ಪೇಯ್ಚ್ಚಿ ತುಂಜ ತಡಮುಲೈ ನಂಜು ಉಂಡು) ರಾಕ್ಷಸಿಯಾದ ಪೂತನಿಯು ಸತ್ತುಬೀಳುವಂತೆ ಅವಳ ವಿಶಾಲವಾದ ಸ್ತನದಲ್ಲಿದ್ದ ವಿಷವನ್ನು ಉಂಡವನೂ, (ಮುದು ತುವರ್ೖ ಕುಲಪತಿ ಆಯ್) ಪ್ರಾಚೀನವಾದ ದ್ವಾರಕಿಗೆ ನಾಯಕನಾಗಿ ಅವತರಿಸಿ (ಕಾಲಿಪಿನ್ನೇ) ಪಶುಗಳ ಹಿಂದೆ (ತಡ ಇಲೈ ಕುಟಿಲ್ ಊದಿ) ದೊಡ್ಡ ಎಲೆಗಳಿಂದ ಮಾಡಲ್ಪಟ್ಟ ಕೊಳಲನ್ನು ಊದಿಕೊಂಡು ಹೋದವನೂ, (ಆಯರ್ ಮಾದರ್‌ವಳೈ ಇನಮ್ ಕೊಂಡಾನ್) ಗೋಪಸ್ತ್ರೀಯರ ಬಳೆಗಳ ಸಮೂಹವನ್ನು ಆಟದಲ್ಲಿ ಅಪಹರಿಸಿದವನೂ ಆದ ನಮ್ಮ ಸ್ವಾಮಿಯ (ಅಡಿಕ್ಕೀಟ್ ಎಯ್ದ ಹಿರ್ಪೀರ್) ಶ್ರೀಚರಣಗಳ ಅಡಿಯನ್ನು ಸೇರಿ ಆಶ್ರಯಿಸಲಿಚ್ಛಿಸುವವರೇ, (ಮಲೈತಡತ್ತ) ಪರ್ವತ ಪ್ರಾಂತಗಳಲ್ಲಿರುವ (ಮಣಿ ಕೊಣರ್ನ್ದು) ರತ್ನಗಳನ್ನು ರಾಶಿರಾಶಿಯಾಗಿ ತಳ್ಳಿಕೊಂಡು ಬಂದು (ವೈಯಂ ಉಯ್ಯವಳಂ ಕೊಡುಕ್ಕುಂ) ಲೋಕವೆಲ್ಲಾ ಉಜ್ಜೀವಿಸುವ ಹಾಗೆ ಅತ್ಯಧಿಕವಾಗಿ ಕೊಡುತ್ತಿರುವುದೂ (ವರು ಪುನಲ್ ಅಮ್ ಪೊನ್ನಿನಾಡನ್) ಪ್ರವಹಿಸಿ ಬರುವ ತೀರ್ಥದಿಂದ ಸುಂದರ ವಾಗಿರುವುದೂ ಆದ ಕಾವೇರಿ ಇರುವ ನಾಡಿಗೆ ನಿರ್ವಾಹಕನಾಗಿ (ಶಿಲೈ ತಡಕ್ಕೈ) ಬಿಲ್ಲನ್ನು ತನ್ನ ವಿಶಾಲವಾದ ಹಸ್ತದಲ್ಲಿ ಉಳ್ಳವನಾದ (ಕುಲಂ ಶೋಟಿನ್) ಶ್ರೇಷ್ಠನಾದ ಚೋಳರಾಜನು (ಶೇರ್ನ್ದ ಕೋಯಿಲ್ ತಿರುನರ್ೖಯೂರ್ ಮಣಿಮಾಡಂ ಶೇರ್ಮಿನ್‌ಹಳ್) ಬಂದು ಸೇವೆ ಸಲ್ಲಿಸುತ್ತಿರುವ ತಿರುನರ್ೖಯೂರಿನಲ್ಲಿರುವ ದಿವ್ಯಸನ್ನಿಧಿಯನ್ನು ಬಂದು ಸೇರುವವರಾಗಿ.

ಮುರುಕ್ಕು ಇಲಂಗು ಕನಿತುವರ್‌ವಾಯ್ ಪಿನ್ನೈಕೇಳ್ವನ್
ಮುನ್ ಎಲ್ಲಾಮ್ ಮುನ್ ಅವಿಯ ಶೆನ್ರು ವೆನ್ರಿ
ಶೆರುಕ್ಕಳತ್ತು ತಿರಲಟಿಯೆ ಶೆತ್ತವೇಂದನ್
ಶಿರಮ್ ತುಣಿತ್ತಾನ್ ತಿರುವಡಿ ನುಮ್ ಶೆನ್ನಿವೈಪ್ಪೀರ್
ಇರುಕ್ಕಿಲಂಗು ತಿರುಮೊಟಿ ವಾಯ್ ಎಣ್‌ಶೋಳ್ ಈಶರ್ಕ್ಕು
ಎಟಿಲ್ ಮಾಡಂ ಎಟುಪದು ಶೆಯ್‌ದು
ಉಲಹಮಾಂಡ
ತಿರುಕ್ಕುಲತ್ತು ವಳಚ್ಚೋಟನ್ ಶೇರ್‌ನ್ದಕೋಯಿಲ್
ತಿರುನರ್ಯೈಯೂರ್ ಮಣಿಮಾಡಂ ಶೇರ್ಮಿನ್‌ಹಳೇ ॥೮॥

(ಮುರುಕ್ಕು ಇಲಂಗು ಕನಿ) ಮುರುಕ್ಕಂ ಹೂವಿನಂತೆಯೂ ಪಕ್ವವಾದ ತೊಂಡೆ ಹಣ್ಣಿನಂತೆಯೂ (ತುವರ್‌ವಾಯ್) ಕೆಂಪಾದ ಅಧರವನ್ನುಳ್ಳ (ಪಿನ್ನೈಕೇಳ್ವನ್) ನಪ್ಪಿನ್ನೈದೇವಿಗೆ ನಾಯಕನಾದವನೂ, (ಮುನ್) ಹಿಂದೊಂದು ಕಾಲದಲ್ಲಿ (ಮನ್ ಎಲ್ಲಾಂ ಅವಿಯ) ಕ್ಷತ್ರಿಯರುಗಳೆಲ್ಲರೂ ನಾಶವಾಗುವಂತೆ (ವೆನ್ರಿ ಶೆರುಕಳತ್ತು ಶೆನ್ರು) ಜಯವನ್ನುತರುವ ಯುದ್ಧರಂಗಕ್ಕೆ ಹೋಗಿ (ಶೆತ್ತಂ ವೇಂದನ್) ದ್ವೇಷಿಯಾದ ಕಾರ್ತವೀರ್ಯಾರ್ಜುನನ (ತಿರಲ್ ಅಟಿಯ) ದರ್ಪವು ನಾಶವಾಗುವಹಾಗೆ (ಶಿರಮ್ ತುಣಿತ್ತಾನ್) ಅವನ ಶಿರಸ್ಸನ್ನು ಕತ್ತರಿಸಿ ಹಾಕಿದವನೂ ಆದ ಸರ್ವೇಶ್ವರನ (ತಿರುವಡಿ ನುಮ್ ಶೆನ್ನಿವೈಪ್ಪೀರ್) ಪವಿತ್ರವಾದ ಪಾದಗಳನ್ನು ನಿಮ್ಮ ಶಿರಸ್ಸಿನಲ್ಲಿ ಇಟ್ಟುಕೊಳ್ಳಲು ಬಯಸುವವರೇ, (ಇರುಕ್ಕು) ವೇದದಲ್ಲಿ (ಇಲಂಗು ತಿರುಮೊಟಿ) ಶ್ರೇಷ್ಠವಾದ ಪುರುಷಸೂಕ್ತವೇ ಮೊದಲಾದ ಭಾಗಗಳನ್ನು (ವಾಯ್) ಬಾಯಿಯಲ್ಲಿಯೇ ಉಳ್ಳವನೂ, (ಎಣ್‌ತೋಳ್) ಎಂಟು ಭುಜಗಳನ್ನುಳ್ಳವನೂ ಆದ (ಈಶರ್ಕ್ಕು) ಪರಮಶಿವನಿಗೆ (ಎಟಿಲ್) ಸುಂದರವಾದ (ಎಟುಪದು ಮಾಡಂ) ಎಪ್ಪತ್ತು ಆಲಯಗಳನ್ನು (ಶೆಯ್‌ದು ಉಲಹಂ ಆಂಡ) ನಿರ್ಮಾಣ ಮಾಡಿಸಿ ಲೋಕವನ್ನು ಪರಿಪಾಲನೆ ಮಾಡಿದ (ತಿರುಕ್ಕುಲತ್ತುವಳಂ) ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದವನಾಗಿ ಅಪಾರ ಸಂಪತ್ತನ್ನುಳ್ಳ (ಶೋಟನ್ ಶೇರ್‌ನ್ದಕೋಯಿಲ್ ತಿರುನರ್ಯೈಯೂರ್ ಮಣಿಮಾಡಂ ಶೇರ್‌ಮಿನ್‌ಹಳೇ) ಚೋಳರಾಜನು ಬಂದು ಸೇವೆ ಸಲ್ಲಿಸುತ್ತಿರುವ ತಿರುನರ್ಯೈಯೂರಿನಲ್ಲಿರುವ ದಿವ್ಯಸನ್ನಿಧಿಯನ್ನು ಬಂದು ಸೇರುವವರಾಗಿ.

ನಪ್ಪಿನ್ನೈಪಿರಾಟ್ಟಿಗೆ ವಲ್ಲಭನಾದವನೂ, ಪರಶುರಾಮಾವತಾರವನ್ನು ಹಿಂದೊಮ್ಮೆ ಮಾಡಿ ದುಷ್ಟ ಕ್ಷತ್ರಿಯರೆಲ್ಲರನ್ನೂ ದಮನ ಮಾಡಿದವನೂ ಆದ ಸರ್ವೇಶ್ವರನ ಶ್ರೀಪಾದಗಳನ್ನು ಶಿರಸ್ಸಿನಲ್ಲಿ ಧರಿಸಲು ಬಯಸುವ ಭಕ್ತೋತ್ತಮರನ್ನು ತಿರುನರೈಯೂರಿನ ದಿವ್ಯಕ್ಷೇತ್ರಕ್ಕೆ ಬಂದು ಅವನನ್ನು ಸೇವಿಸಲು ಆಹ್ವಾನಿಸುತ್ತಿದ್ದಾರೆ ಆಳ್ವಾರ್ ಅವರು. ಅಷ್ಟಭುಜಗಳನ್ನುಳ್ಳವನೂ, ಬಾಯಿಯಲ್ಲಿ ಪುರುಷ ಸೂಕ್ತಾದಿಗಳನ್ನು ಉಚ್ಚರಿಸುತ್ತಿರುವವನೂ ಆದ ಪರಮ ಶಿವನಿಗೆ ದರ್ಶನೀಯವಾದ ಎಪ್ಪತ್ತು ಮಂದಿರಗಳನ್ನು ಚೋಳರಾಜ ನಿರ್ಮಾಣ ಮಾಡಿಸಿದನಂತೆ. ಆದರೂ ತನ್ನ ಮೋಕ್ಷವೆಂಬ ಅಭಿಮತ ಸಿದ್ಧಿಸದ ಕಾರಣ ಆ ಅಭಿಮತ ಸಿದ್ಧ್ಯರ್ಥವಾಗಿ ಅವನು ಬಂದು ಆಶ್ರಯಿಸುವ ದಿವ್ಯಕ್ಷೇತ್ರ ಇದು ಎಂದು ಆ ಕ್ಷೇತ್ರದ ಮತ್ತು ಅಲ್ಲಿರುವ ಸ್ವಾಮಿಯ ಹಿರಿಮೆಯನ್ನು ಕೊಂಡಾಡಿದ್ದಾರೆ.

**ತಾರಾಳನ್ ತಣ್ ಅರಂಗಂ ಆಳನ್**
**ಪೂಮೇಲ್ ತನಿ ಆಳನ್ ಮುನಿಯಾಳರ್ ಏತ್ತ ನಿನ್ರ**
**ಪೇರಾಳನ್ ಆಯಿರಂ ಪೇರುಡೈಯ ಆಳನ್**
**ಪಿನ್ನೈಕ್ಕುಮಣವಾಳನ್ ಪೆರುಮೈ ಕೇಳ್ಪೀರ್**
**ಪಾರಾಳರ್ ಅವರಿವರ್ ಎನ್ರು ಅಟುನ್ದೈ ಏತ್ತ**
**ಪಡೈಮನ್ನರ್ ಉಡಲ್ ತುಣಿಯ ಪರಿಮಾ ಉಯ್ತ್ತ**
**ತೇರಾಳನ್ ಕೋಚ್ಚೋೞನ್ ಶೇರ್ನ್ದ ಕೋಯಿಲ್**
**ತಿರುನರೈಯೂರ್ ಮಣಿಮಾಡಂ ಶೇರ್ಮಿನ್ ಹಳೇ**

॥೯॥

(ತಾರ್ ಆಳನ್) ಮಾಲೆಯನ್ನು ಧರಿಸಿರುವವನೂ, (ತಣ್ ಅರಂಗಂ ಆಳನ್) ತಂಪಾದ ಶ್ರೀರಂಗಕ್ಷೇತ್ರವನ್ನಾಳುವವನೂ, (ಪೂಮೇಲ್ ತನಿ ಆಳನ್) ತಾವರೆಯ ಹೂವಿನಲ್ಲಿ ಆವಿರ್ಭವಿಸಿದವಳೂ ಅಸಮಾನಳೂ ಆದ ಶ್ರೀ ದೇವಿಯನ್ನಾಳುವವನೂ, (ಮುನಿಯಾಳರ್ ಏತ್ತ ನಿನ್ರ ಪೇರಾಳನ್) ಮಹರ್ಷಿಗಳು ಸ್ತೋತ್ರಮಾಡುವಂತಹ ಹಿರಿಮೆಯನ್ನುಳ್ಳವನೂ, (ಆಯಿರಂ ಪೇರ್ ಉಡೈಯ ಆಳನ್) ಸಹಸ್ರ ನಾಮಗಳನ್ನು ವಾಚಕವನ್ನಾಗಿ ಉಳ್ಳ ಸ್ವಾಮಿಯಾದವನೂ (ಪಿನ್ನೈಕ್ಕುಮಣವಾಳನ್) ನಪ್ಪಿನ್ನೈಪಿರಾಟ್ಟಿಗೆ ವಲ್ಲಭನೂ ಆದ ನಮ್ಮ

ಸ್ವಾಮಿಯ (ಪೆರುಮೈ ಕೇಳ್ಪೀರ್) ಹಿರಿಮೆಯನ್ನು ಕೇಳಲು ಬಯಸುವ ಭಕ್ತರು ಗಳೇ, (ಅವರಿವರ್ ಎನ್ರು ಪಾರ್ ಆಳರ್) ಅವರು ಇವರು ಎಂದು ಪ್ರಸಿದ್ಧ ರಾಗಿದ್ದುಕೊಂಡು ಭೂಮಿಯನ್ನು ಆಳುವವರಾಗಿ (ಅಟುನ್ದೈಯಿತ್ತ) ತಿರುವ ಟುನ್ದೂರಿನಲ್ಲಿ ಬಂದು ಎದುರಿಸಿದವರಾದ (ಪಡೈಮನ್ನರ್ ಉಡಲ್ ತುಣಿಯ) ಆಯುಧಪಾಣಿಗಳಾದ ರಾಜರುಗಳ ಶರೀರಗಳು ಭಿನ್ನ ಭಿನ್ನವಾಗುವಂತೆ (ಪರಿಮಾ ಉಯತ್ತ ತೇರ್ ಆಳನ್) ಕುದುರೆಗಳ ಪಡೆಗಳನ್ನು ನಡೆಸಿದವನೂ ರಥಗಳನ್ನು ನಡೆಸಿದವನೂ ಆದ (ಕೋಚ್ಚೋಟನ್ ಶೇರ್‌ನ್ದ ಕೋಯಿಲ್ ತಿರುನರೈಯೂರ್ ಮಣಿಮಾಡಮ್ ಶೇರ್‌ಮಿನ್ ಹಳೇ) ಚೋಳರಾಜನು ಬಂದು ಸೇವೆ ಸಲ್ಲಿಸುತ್ತಿರುವ ತಿರುನರೈಯೂರಿನ ದಿವ್ಯಕ್ಷೇತ್ರವನ್ನು ಬಂದು ಸೇರುವವರಾಗಿ.

ಉಭಯ ವಿಭೂತಿಗಳ ರಕ್ಷಣೆಗಾಗಿ ಅದ್ವಿತೀಯವಾದ ಶ್ರೀ ವೈಜಯಂತೀ ಮಾಲೆಯನ್ನು ಧರಿಸಿರುವವನೂ, ಜಗದ್ರಕ್ಷಣೆಗೆ ಕುರುಹಾಗಿ ಶ್ರೀರಂಗ ಕ್ಷೇತ್ರ ವನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡವನೂ, ಕಮಲವಾಸಿನಿಯೂ, ಅದ್ವಿತೀಯಳೂ ಆದ ಶ್ರೀದೇವಿಗೆ ವಲ್ಲಭನೂ, ಸನಕಾದಿ ಮಹರ್ಷಿಗಳ ಸ್ತುತಿ ಗಳಿಗೆ ಪಾತ್ರನೂ, ಎಲ್ಲರೂ ತನ್ನನ್ನು ಸ್ತುತಿಸುವುದಕ್ಕಾಗುವಂತೆ ಸಹಸ್ರ ನಾಮಗಳ ನ್ನುಳ್ಳವನೂ, ನಪ್ಪಿನ್ನೈದೇವಿಗೆ ವಲ್ಲಭನೂ ಆದ ಸರ್ವೇಶ್ವರನ ಹಿರಿಮೆಯನ್ನು ದಿವ್ಯಸೂರಿಗಳು ಕೊಂಡಾಡುವುದನ್ನು ಕೇಳಬೇಕೆಂದು ನೀವು ಬಯಸುವಿರಾದರೆ ತಿರುನರೈಯೂರ್ ಕ್ಷೇತ್ರಕ್ಕೆ ಬಂದು ಸೇರಿ ಕೊಳುವವರಾಗಿ ಎಂದು ಆಳ್ವಾರ್ ಕರೆಯುತ್ತಿದ್ದಾರೆ.

**ಶೀರ್‌ನೊಟಿವಾಯ್ ನಾಲ್‌ವೇದವಾಣರ್ ವಾಟುಮ್**
**ತಿರುನರೈಯೂರ್ ಮಣಿಮಾಡಂ ಶೇರ್‌ಕಣ್‌ಮಾಲ್ಟೈ**
**ಪ್ಪೋರ್‌ನ್ಮುಟಿ ಒನ್ರಿಲ್ಲಾದ ಮೆಯ್‌ನ್ಮೈ ಆಳನ್**
**ಪುಲಮಂಗೈ ಕುಲವೇಂದನ್ ಪುಲನೈ ಆರ್‌ನ್ದ**
**ಅಶ್‌ನೊಟಿವಾಯ್ ಕಲಿಕನ್ರಿ ಇನ್ಬಪ್ಪಾಡಲ್**
**ಪಾಡುವಾರ್ ವಿಯನುಲಹಿಲ್ ನಮನಾರ್‌ಪಾಡಿ**
**ವೇನ್‌ನೊಟಿ ಕೇಟ್ಟಂಜಾದೇ ಮೆಯ್‌ನ್ಮೈ ಶೊಲ್ಲಿಲ್**
**ವಿಣ್ಣವರ್ಕ್ಕು ವಿರುಂದಾಹುಂ ಪೆರುಂದಕ್ಕೋರೇ ॥೧೦॥**

(ಶೆವಳ್ ಮೊಳಿವಾಯ್) ಸತ್ಯವಾದಿಗಳಾದವರೂ (ನಾಲ್‌ವೇದಂ ವಾಣರ್) ಚತುರ್ವೇದಗಳನ್ನೂ ಅಧಿಕರಿಸುವವರಾದ ಶ್ರೀ ವೈಷ್ಣವರುಗಳು (ವಾಟುವಳ್) ಬಾಳುತ್ತಿರುವ ಸ್ಥಾನವಾದ (ತಿರುನರೈಯೂರ್ ಮಣಿಮಾಡಂ ಶೆವ್‌ಕಣ್ ಮಾಲೈ) ತಿರುನರೈಯೂರ್ ಕ್ಷೇತ್ರದಲ್ಲಿ ಮಣಿಮಾಡದಲ್ಲಿ ಇರುವ ಪುಂಡರೀಕಾಕ್ಷನಾದ ಸರ್ವೇಶ್ವರನನ್ನು ಕುರಿತಂತೆ (ಪೊಯ್ಯ್ ಮೊಳಿ ಒನ್ರು ಇಲ್ಲಾದ) ಹುಸಿಯಾದ ಮಾತೊಂದೂ ಇಲ್ಲದಿರುವ (ಮೆಯ್ಯ್‌ಮ್ಮೈಯ ಆಳನ್) ಸತ್ಯವಚನವನ್ನೇ ಉಳ್ಳವರೂ, (ಪುಲಂ ಮಂಗೈ ಕುಲಂವೇಂದನ್) ಸುಂದರವಾದ ತಿರುಮಂಗೈ ನಾಡಿಗೆ ನಿರ್ವಾಹಕರಾದವರೂ (ಪುಲಮೈ ಆರ್‌ನ್ದ ಅಮ್ ಮೊಳಿವಾಯ್) ಪಾಂಡಿತ್ಯಪೂರ್ಣವಾದ ಸುಂದರವಾದ ಶ್ರೀ ಸೂಕ್ತಿಗಳನ್ನು ಬಾಯಿಯಲ್ಲಿ ಉಳ್ಳವರೂ ಆದ (ಕಲಿಕನ್ರಿ) ತಿರುಮಂಗೈ ಆಳ್ವಾರ್ ಅವರ (ಇನ್‌ಬವಳ್ ಪಾಡಲ್) ಆನಂದಮಯವಾದ ಈ ಪಾಶುರಗಳನ್ನು (ವಿಯನ್ ಉಲಹಿಲ್) ಈ ವಿಶಾಲವಾದ ಪ್ರಪಂಚದಲ್ಲಿ (ಪಾಡುವಾರ್) ಹಾಡುವವರು (ಮೆಯ್ಯ್‌ಮ್ಮೈಯ ಶೊಲ್ಲಿಲ್) ನಿಜವನ್ನೇ ಹೇಳುವುದಾದರೆ (ನಮನಾರ್‌ಪಾಡಿ) ಯಮಲೋಕದಲ್ಲಿ ಉಂಟಾಗುವ (ವೆವ್ ಮೊಳಿ ಕೇಟ್ಟು ಅಂಜಾದೇ) ಕ್ರೂರವಾದ ಮಾತುಗಳನ್ನು ಕೇಳಿ ಹೆದರುವ ಸಂಭವವೇ ಇಲ್ಲದೆ (ವಿಣ್ಣವರ್ಕ್ಕು ವಿರುಂದು ಆಹುಂ ಪೆರುಂದಕ್ಕೋರ್) ನಿತ್ಯಸೂರಿಗಳು ಆದರಿಸಿ ಕೊಂಡಾಡುವಂತಹ ಹಿರಿಮೆಯನ್ನು ಹೊಂದುವವರಾಗುವರು.

ವೇದವಿದಗ್ರೇಸರರೂ ಯಥಾ ಭೂತವಾದಿಗಳೂ ಆದ ವಿಪ್ರರು ವರ್ತಿಸುವ ದಿವ್ಯಕ್ಷೇತ್ರ ತಿರುನರೈಯೂರ್. ಅಲ್ಲಿರುವ ಪುಂಡರೀಕಾಕ್ಷನಾದ ಸರ್ವೇಶ್ವರನನ್ನು ಆಳ್ವಾರ್ ಅವರು ಹಾಡಿದ್ದಾರೆ. ಆ ವೇದಗಳ ಶಬ್ದದಂತೆಯೇ ಇರುವ ಶಬ್ದ ಸಂದರ್ಭವನ್ನುಳ್ಳವರು ಆಳ್ವಾರ್ ಅವರು. ದರ್ಶನೀಯವಾದ ತಿರುಮಂಗೈ ಕ್ಷೇತ್ರಕ್ಕೆ ಅವರು ನಿರ್ವಾಹಕರು. ಜ್ಞಾನಪೂರ್ಣವಾದ ಶ್ರೀ ಸೂಕ್ತಿಗಳು ಇವು. ಇದನ್ನು ಅಧಿಕರಿಸುವವರು ಯಮಭಟರ ಕ್ರೂರವಾದ ಶಬ್ದಗಳನ್ನು ಕೇಳಿ ಹೆದರುವ ಸಂದರ್ಭವನ್ನೇ ಹೊಂದುವುದಿಲ್ಲ. ನಿತ್ಯಸೂರಿಗಳೂ ಆದರಿಸಿ ಕೊಂಡಾಡುವಂತೆ ಅವರಿಗೆ ಪ್ರಿಯರಾದ ಅತಿಥಿಗಳಾಗುತ್ತಾರೆ ಅವರು.

# ಆಳುಮ್ ಪಣಿಯುಂ

## ಪ್ರವೇಶ

ಪ್ರಯೋಜನಾಂತರದಲ್ಲಿ ಆಸಕ್ತಿ ಉಳ್ಳವರನ್ನೂ ದೇವತಾಂತರಗಳ ಅನ್ವಯ ಉಳ್ಳವರನ್ನೂ ಆ ಸರ್ವೇಶ್ವರ ತನ್ನನ್ನೇ ಆಶ್ರಯಿಸುವಂತೆ ಮಾಡಿ ಅವರನ್ನು ಪರಿಶುದ್ಧರನ್ನಾಗಿಸಿ ಉಜ್ಜೀವಿಸುವನೆಂದು ಹೇಳಿ ಅಂಥ ಮಹಾ ಮಹಿಮನು ನರೈಯೂರ್ ಮಣಿಮಾಡಕ್ಕೋಯಿಲ್‌ನಲ್ಲಿ ಸನ್ನಿಹಿತನಾಗಿದ್ದಾನೆಂದು ತಿಳಿಸಿ ಅವನನ್ನು ಸೇರಲು ಉಪದೇಶಿಸಿದರು ಹಿಂದಿನ ದಶಕದಲ್ಲಿ. ತಮ್ಮ ಮನಸ್ಸಿಗೇ ತಿಳಿಯ ಹೇಳುವ ನೆಪದಲ್ಲಿ ಪರೋಪದೇಶಪ್ರವೃತ್ತರಾದರು; 'ಚೋಳರಾಜನು ಆಶ್ರಯಿಸಿದ್ದನ್ನು ಅನೇಕ ಸಲ ಹೇಳಿದಿರಿ. ಅವನು ದೃಷ್ಟವಾದ ಪ್ರಯೋಜನವನ್ನು ಬಯಸುವವನಷ್ಟೇ ? ಸಂಸಾರ ಭಯಭೀತರು ಅವನನ್ನು ಆಶ್ರಯಿಸಿ ಅನುಭವಿಸುವುದಕ್ಕಾಗುವುದೋ ?'—ಎಂದು ಜನ ಕೇಳುವುದಾದರೆ ಆಳ್ವಾರ್ ಹೇಳುತ್ತಾರೆ—'ನನ್ನ ಸ್ವರೂಪಕ್ಕೆ ಅನುರೂಪವಾದ ಕೈಂಕರ್ಯದಲ್ಲಿ ರುಚಿಯನ್ನೂ ಉಂಟು ಮಾಡಿ ಅದಕ್ಕೆ ವಿರೋಧಿಯಾದುದನ್ನೂ ಹೋಗಲಾಡಿಸಿದ ಅವನನ್ನು ಬಿಟ್ಟು ಬೇರೆ ರಕ್ಷಕರು ಇಲ್ಲ. ಆದುದರಿಂದ ಅವನು ನಿತ್ಯವಾಸ ಮಾಡುವ ಸ್ಥಳವೇ ಆಶ್ರಯಣೀಯ ಸ್ಥಲ'—ಎಂದು ತಮ್ಮ ಮನಸ್ಸಿಗೇ ಮತ್ತೆ ಹೇಳಿಕೊಳ್ಳುತ್ತಾರೆ.

ಆಳುಂಪಣಿಯುಂ ಅಡಿಯೇನೈ ಕೊಂಡಾನ್ ವಿಣ್ಣ ನಿಶಾಶರರೈ
ತೋಳುಂ ತಲೈಯುಂ ತುಣಿವು ಎಯ್‌ದ ಶುಡುವೆಮ್
ಶಿಲೈವಾಯ್ ಶರಂ ತುರನ್ದಾನ್
ವೇಳುಂ ಶೇಯುಂ ಅನೈಯಾರುಂ ವೇಲ್‌ಕಣಾರುಂ
ಪಯಿಲ್ ವೀದಿ
ನಾಳುಂ ವಿಳವಿನ್ ಒಲಿಶಿಮಾ ನರೈಯೂರ್ ನಿನ್ರ ನಂಬಿಯೇ
॥೧॥

(ಅಡಿಯೇನ್ನೈ ಆಳುಂ ಪಣಿಯುಂ ಕೊಂಡಾನ್) ನನ್ನನ್ನು ಶೇಷಭೂತನನ್ನಾಗಿಯೂ ನಿತ್ಯಕಿಂಕರನನ್ನಾಗಿಯೂ ಸಂಕಲ್ಪಿಸಿ ಪಡೆದುಕೊಂಡವನೂ (ವಿಣ್ಣನಿಶಾಶರರೈ) ಪ್ರತಿಕೂಲರಾದ ರಾಕ್ಷಸರುಗಳ (ತೋಳುಂ ತಲೈಯುಂ ತುಣಿವು ಎಯ್ದ) ತೋಳುಗಳನ್ನೂ ತಲೆಗಳನ್ನೂ ಛಿನ್ನಭಿನ್ನವಾಗುವಂತೆ (ಶುಡುವೆಮ್ ಶಿಲೈವಾಯ್ ಶರಂ ತುರನ್ದಾನ್) ಅತ್ಯಂತ ಕಠೋರವಾದ ಬಿಲ್ಲಿನಿಂದ ಬಾಣಗಳನ್ನು ಪ್ರಯೋಗಿಸಿದವನೂ ಆದ ನಮ್ಮ ಸ್ವಾಮಿಯು ಯಾರೆಂದರೆ—(ವೇಳುಂ ಶೇಯುಂ ಅನ್ನೈಯಾರುಂ) ಮನ್ಮಥನಿಗೂ ಸುಬ್ರಹ್ಮಣ್ಯ ಸ್ವಾಮಿಗೂ ಸದೃಶರಾದ ಸುಂದರರಾದ ಪುರುಷರುಗಳೂ (ವೇಲ್‌ಕಣ್ಣಾರುಮ್) ವೇಲಾಯುಧವನ್ನು ಹೋಲುವ ಕಣ್ಣುಗಳನ್ನುಳ್ಳ ಸ್ತ್ರೀಯರುಗಳೂ (ಪಯಿಲ್ ವೀದಿ) ವಾಸಿಸುತ್ತಿರುವ ಬೀದಿಗಳನ್ನುಳ್ಳದಾಗಿ (ನಾಳುಂ ವಿಟಿವಿನ್ ಒಲಿ ಓವಾ) ದಿನ ದಿನವೂ ಉತ್ಸವದ ಕೋಲಾಹಲಗಳು ಸದಾ ಇರುತ್ತಿರುವ (ನರೈಯೂರ್ ನಿನ್ರ ನಂಬಿ) ತಿರುನರೈಯೂರಿನಲ್ಲಿ ನಿತ್ಯವಾಸ ಮಾಡುತ್ತಿರುವ ನಂಬಿಯೇ.

'ನಾನು ಸ್ವತಂತ್ರನು ; ನನಗೇ ಸೇರಿದವನು'—ಎಂಬುವ ಬುದ್ಧಿಯನ್ನು ಆ ಕರುಣಾಳು ಮೊಟ್ಟಮೊದಲು ಹೋಗಲಾಡಿಸಿ—'ನಾನು ನನಗೆ ಸೇರಿದವನಲ್ಲ ; ನಾನು ಆ ಪರಮಾತ್ಮನಿಗೇ ಶೇಷಭೂತನಾದವನು'—ಎಂಬುವ ಪರಶೇಷತಾ ಬುದ್ಧಿಯನ್ನುಂಟುಮಾಡಿದನು. ಅನಂತರ ಆ ಶೇಷತ್ವದ ಫಲವಾದ ದಾಸ್ಯದಲ್ಲಿ ರುಚಿಯನ್ನು ನನಗೆ ಉಂಟು ಮಾಡಿದನು. ಹೀಗೆ ಭಗವಂತನ ದಾಸ್ಯದಲ್ಲಿ ಆಶೆಯನ್ನು ಹೊಂದದ ಆಸುರ ಪ್ರಕೃತಿಗಳನ್ನು ಭಗವಂತನು ಶಿಕ್ಷಿಸುವ ಪ್ರಕಾರಗಳನ್ನು ಹೇಳುತ್ತಾರೆ ಆಳ್ವಾರ್ ಅವರು. 'ನ ನಮೇಯಂ ತು ಕಸ್ಯಚಿತ್' ಎಂದು ಬಹಳ ಕಠಿಣವಾದ ನಿಲುವನ್ನು ಹೊಂದಿದವರನ್ನು ನಾಶ ಮಾಡುತ್ತಾನೆ ಅವನು. ಆಗಲೂ ತೋಳುಗಳನ್ನು ಕತ್ತರಿಸುವುದು, ಕಾಲುಗಳನ್ನು ಕತ್ತರಿಸುವುದು ಮೊದಲಾದ ಪ್ರಕಾರಗಳಲ್ಲಿ ಕಾಲಯಾಪನೆಮಾಡಿ ಹಾಗೆಯೂ ಅವರು ದಾರಿಗೆ ಬರದೆ ಇದ್ದರೆ, 'ದೀಪ್ತಪಾವಕಸಂಕಾಶೈಃ' ಎಂಬುವಂತೆ ಶತ್ರುಶರೀರಗಳಲ್ಲಿ ಅಗ್ನಿಯಾಗಿ ಪ್ರವೇಶಿಸುವ ಅಂಬುಗಳನ್ನು ಪ್ರಯೋಗಿಸುತ್ತಾನೆ.

ತಿರುನರೈಯೂರಿನ ಚೆಲುವನ್ನು ವರ್ಣಿಸುತ್ತಾ ದಿನದಿನವೂ ಅಲ್ಲಿ ಉತ್ಸವಗಳ ಸಂಭ್ರಮವಿರುವುದೆಂದು ನಿರೂಪಿಸುತ್ತಾರೆ. ಅಲ್ಲಿ ನಿತ್ಯವಾಸ ಮಾಡುವ

ಸ್ವಾಮಿ ನನ್ನನ್ನು ಆಳಾಗಿ ಸ್ವೀಕರಿಸಿದುದಷ್ಟೇ ಅಲ್ಲದೆ ನನ್ನಿಂದ ಕೈಂಕರ್ಯವನ್ನೂ ಮಾಡಿಸಿಕೊಂಡನೆಂದು ಸಂತೋಷದಿಂದ ಹೇಳುತ್ತಾರೆ ಆಳ್ವಾರ್ ಅವರು.

ಮುನಿಯಾಯ್‌ವಂದು ಮೂವೆಟ್ಟುಕಾಲ್
ಮುಡಿಶೇರ್ ಮನ್ನರ್ ಉಡಲ್ ತುಣಿಯ
ತನಿವಾಯ್ ಮೞುವಿನ್‌ಪಡೈ ಆಂಡ
ತಾರಾರ್ ತೋಳಾನ್ ವಾರ್ ಪುರವಿಲ್
ಪನಿಶೇರ್ ಮುಲ್ಲೈ ಪಲ್ ಅರುಂಬ
ಪಾನಲ್ ಒರುಪಾಲ್ ಕಣ್‌ಕಾಟ್ಟ
ನನಿಶೇರ್ ಕಮಲಂ ಮುಹಂ ಕಾಟ್ಟುಂ
ನಱೈಯೂರ್ ನಿನ್ರ ನಂಬಿಯೇ ॥೨॥

(ಮುನಿಯಾಯ್‌ವಂದು) ಪರಶುರಾಮ ಮುನಿಯಾಗಿ ಅವತರಿಸಿ (ಮೂವೆಟ್ಟು ಕಾಲ್) ಇಪ್ಪತ್ತೊಂದು ಸಲ (ಮುಡಿಶೇರ್ ಮನ್ನರ್ ಉಡಲ್ ತುಣಿಯ) ಕಿರೀಟಧಾರಿಗಳಾದ ಕ್ಷತ್ರಿಯರುಗಳ ಶರೀರಗಳು ನಾಶವಾಗುವ ಹಾಗೆ (ತನಿವಾಯ್ ಮೞುವಿನ್‌ಪಡೈ ಆಂಡ) ಅಸಮಾನವಾದ ತೀಕ್ಷ್ಣತೆಯನ್ನುಳ್ಳ ಕೊಡಲಿಯ ಆಯುಧವನ್ನು ಧರಿಸಿದವನೂ, (ತಾರ್ ಆರ್‌ತೋಳಾನ್) ಮಾಲೆಗಳಿಂದ ಭೂಷಿತವಾದ ತೋಳುಗಳನ್ನುಳ್ಳವನೂ ಆದ ಪರಮಾತ್ಮನು (ವಾರ್ ಪುರವಿಲ್ ಒರುಪಾಲ್) ವಿಶಾಲವಾದ ತೋಪುಗಳಿರುವ ಪ್ರದೇಶದಲ್ಲಿ ಒಂದು ಕಡೆ (ಪನಿಶೇರ್‌ಮುಲ್ಲೈ) ಇಬ್ಬನಿಗಳಿಂದ ಕೂಡಿದ ಮೊಲ್ಲೆಯ ಹೂಗಳಾದವು (ಪಲ್ ಅರುಂಬ) ಆ ಊರಿನಲ್ಲಿರುವ ಲಲನೆಯರ ದಂತಪಂಕ್ತಿಯಂತೆ ಮೊಗ್ಗುಗಳಾಗಿ ಅರಳುವಂಥದೂ '(ಪಾನಲ್ ಒರುಪಾಲ್) ಕಪ್ಪಾದ ಕುವಲಯಗಳು ಮತ್ತೊಂದು ಕಡೆ (ಕಣ್‌ಕಾಟ್ಟ) ಆ ಲಲನೆಯರ ನೇತ್ರಗಳನ್ನು ಹೋಲಿ ಅಲರುವಂಥದೂ, (ಒರುಪಾಲ್) ಮತ್ತೊಂದೆಡೆಯಲ್ಲಿ (ನನಿಶೇರ್ ಕಮಲಂ) ಸಮೃದ್ಧಿಯಾಗಿರುವತಾವರೆ ಹೂಗಳು (ಮುಹಂ ಕಾಟ್ಟುಂ) ಆ ಲಲನೆಯರ ಮುಖವನ್ನು ಹೋಲಿ ವಿಕಸಿಸಿರುವಂಥದೂ ಆದ (ನಱೈಯೂರ್) ತಿರುನಱೈಯೂರಿನಲ್ಲಿ (ನಿನ್ರ) ನಿತ್ಯವಾಸ ಮಾಡುವ (ನಂಬಿ) ಸ್ವಾಮಿಯಾಗಿದ್ದಾನೆ.

ನಿಶಾಚರರನ್ನಷ್ಟೇ ಅಲ್ಲದೆ ಅತಿಮಾತ್ರವಾಗಿ ಹಿಂಸಕರಾದ ರಾಜರುಗಳನ್ನೂ ನಿಗ್ರಹಿಸಿದ ಪರಶುರಾಮನ ಅನುಸಂಧಾನವನ್ನು ಇಲ್ಲಿ ಮಾಡಿದ್ದಾರೆ. ಆನೃಶಂಸ್ಯವೇ ಪ್ರಧಾನವಾದ ಋಷಿ ವಂಶದಲ್ಲಿ ಜನಿಸಿದ ಪರಶುರಾಮನು ಆ ಆನೃಶಂಸ್ಯವನ್ನೇ ವ್ರತವನ್ನಾಗಿ ಉಳ್ಳವರಿಗೆ ನಿರ್ದಯವಾಗಿ ಹಿಂಸೆ ಮಾಡಿದವರನ್ನು ಶಿಕ್ಷಿಸಲು ಮುಂದಾದನು. ಇಪ್ಪತ್ತೊಂದು ಬಾರಿ ಕ್ಷತ್ರಿಯ ವಂಶವನ್ನೇ ಕತ್ತರಿಸಿಹಾಕಿ ಧೂಳೀಪಟಮಾಡಿದ ಅದ್ವಿತೀಯವಾದ ಬಾಯನ್ನುಳ್ಳ ಪರಶುವನ್ನು ಆಯುಧವನ್ನಾಗಿ ನಿರ್ವಹಿಸಿದನವನು. ಅದಕ್ಕಾಗಿ ವಿಶೇಷವಾದ ಮಾಲೆಯನ್ನು ತೊಟ್ಟು ಜಗದ್ರಕ್ಷಣದೀಕ್ಷಿತನಾದವನು ಅಘನು.

> ತೆಳ್ಳಾರ್ ಕಡಲ್‌ವಾಯ್ ವಿಡವಾಯ
> ಶಿನವಾಳರವಿಲ್ ತುಯಿಲಮರ್‌ನ್ದು
> ತುಳ್ಳಾವರು ಮಾನ್‌ವೀಟ ವಾಳಿ ತುರನ್ದಾನ್
> ಇರನ್ದಾನ್ ಮಾವಲಿ ಮಣ್
> ಪುಳ್ಳಾರ್ ಪುರವಿಲ್ ಪೂಕಾವಿ
> ಪುಲನ್‌ಕೊಳ್‌ಮಾದರ್ ಕಣ್‌ಕಾಟ್ಟ
> ನಳ್‌ಆರ್ ಕಮಲಂ ಮುಕಂಕಾಟ್ಟುಂ
> ನರೈಯೂರ್ ನಿನ್ರ ನಂಬಿಯೇ ॥೩॥

(ತೆಳ್ ಆರ್ ಕಡಲ್‌ವಾಯ್) ತಿಳಿಯಾದ ಬಿಳುಪು ಹೆಚ್ಚಾಗಿರುವ ಕ್ಷೀರಾಬ್ಧಿಯಲ್ಲಿ (ವಿಡಂವಾಯ) ವಿಷವನ್ನುಗುಳುತ್ತಿರುವ ಬಾಯಿಯುಳ್ಳವನಾಗಿ (ಶಿನಮ್) ಪ್ರತಿಕೂಲರ ಬಗೆಗೆ ಕೋಪವನ್ನು ಕೆದರುವ (ವಾಳ್) ಪ್ರಕಾಶಯುಕ್ತನಾದ (ಅರವಿಲ್) ಆದಿಶೇಷನ ಮೇಲೆ (ತುಯಿಲ್ ಅಮರ್‌ನ್ದು) ಶಯನಿಸಿ ಕೊಂಡಿರುವವನೂ, (ತುಳ್ಳಾವರು) ಪಂಚವಟಿಯಲ್ಲಿ ಸುಳಿಸುಳಿದು ಆಟವಾಡುತ್ತಾ ಬಂದ (ಮಾನ್ ವೀಟ) ಮಾರೀಚ ಮಾಯಾಮೃಗವು ಸತ್ತು ಬೀಳುವಂತೆ (ವಾಳಿ ತುರನ್ದಾನ್) ಬಾಣವನ್ನೆಸೆದವನೂ (ಮಾವಲಿಮಣ್ ಇರನ್ದಾನ್) ಮಹಾಬಲಿಯಿಂದ ಭೂಮಿಯನ್ನು ಯಾಚಿಸಿದವನೂ ಆದ ನಮ್ಮ ಸ್ವಾಮಿಯು—(ಪುಳ್ ಆರ್‌ಪುರವಿಲ್) ಪಕ್ಷಿಗಳು ತುಂಬಿರುವ ಹೊರ ತೋಟಗಳಲ್ಲಿ (ಪೂಕಾವಿ) ಸುಂದರವಾದ ಶೆಂಗಟುನೀರ್ ಹೂಗಳು (ಪುಲನ್

ಕೊಳ್ ಮಾದರ್ ಕಣ್) ಸುಂದರಿಯರಾದ ಸ್ತ್ರೀಯರ ಕಣ್ಣುಗಳನ್ನು (ಕಾಟ್ಟಿ) ಹೋಲುತ್ತಿರುವಂಥದೂ, (ನಳ್‌ಆರ್‌ಕಮಲಂ) ದಳಗಳು ವಿಕಸಿತವಾದ ತಾವರೆಗಳು (ಮುಕಂಕಾಟ್ಟುಂ) ಅವರ ಮುಖಗಳನ್ನು ತೋರಿಸಿಕೊಡುವಂಥವೂ ಆದ (ನರೈಯೂರ್ ನಿನ್ರನಂಬಿಯೇ) ತಿರುನರೈಯೂರಿನಲ್ಲಿ ನಿತ್ಯವಾಸ ಮಾಡುತ್ತಿರುವ ನಂಬಿಯೇ ಆಗಿದ್ದಾನೆ.

ಈ ಪಾಶುರದಲ್ಲಿ ಶ್ರೀರಾಮಾವತಾರದ ಹಾಗು ಶ್ರೀ ವಾಮನಾವತಾರದ ಅನುಸಂಧಾನವನ್ನು ಮಾಡುವವರಾಗಿ ಅವುಗಳಿಗೆ ಮೂಲಸ್ಥಾನವಾದ ಕ್ಷೀರಾಬ್ಧಿ ಶಯನನ ಅನುಸಂಧಾನವನ್ನೂ ಮಾಡಿದ್ದಾರೆ. ನಿರಂತರವಾದ ಭಗವದನುಭವದಿಂದ ಆದಿಶೇಷನ ಪ್ರಕಾಶ ಉಜ್ವಲವಾಗಿದೆಯಂತೆ. ಆದಿಶೇಷನ ಮೇಲೆ ಶಯಿನಿಸಿರುವ ಸ್ವಾಮಿ ರಾವಣಾದಿಗಳು ಹುಟ್ಟಿಕೊಂಡಾಗ ಆ ಶಯನವನ್ನು ಬಿಟ್ಟು ಬಂದು ಅವತರಿಸುವನು. ಅಲ್ಲಲ್ಲಿ ಸುಳಿದು ಮರೆಯಾಗುತ್ತಿದ್ದ ಮಾಯಾ ಮೃಗವು ತನ್ನ ಬಾಣಕ್ಕೆ ಲಕ್ಷ್ಯವಾಗಿ ಬೀಳುವಂತೆ ಬಾಣವನ್ನು ಪ್ರಯೋಗಿಸಿದನವನು. ಆ ಬಾಣ ಅವನ ಕೈಯ್ಯಲ್ಲೇ ಇದ್ದಾಗ್ಲೂ ಅತಿಶಯುವಾವುದೂ ಇಲ್ಲದವರು ಹೇಗೋ ಹಾಗೆ ಮಹಾಬಲಿಯ ಬಳಿಗೆ ನಡೆದುಹೋಗಿ ಭೂಮಿಯನ್ನು ಯಾಚಿಸಿದನು. ಸಾಮೋಪಾಯಕ್ಕೆ ಬಗ್ಗದವರ ಮೇಲಷ್ಟೇ ದಂಡನೆ ವಿಧಿಸುವುದು ? ಇಂಥ ಸರ್ವೇಶ್ವರನು ತಿರುನರೈಯೂರಿನಲ್ಲಿ ನಿತ್ಯವಾಸ ಮಾಡುತ್ತಿದ್ದಾನೆ.

ಒಳಿಯಾ ವೆಣ್ಣೆಯ್ ಉಂಡಾನ್ ಎನ್ರು
    ಉರಲೋಡು ಆಯ್‌ಚ್ಚಿ ಒಣ್‌ಕಯಿತ್ತಾಲ್
ವಿಳಿಯಾ ಆರ್‌ಕ್ಕ ಅಪ್ಪುಂಡು
    ವಿಮ್ಮಿ ಅಳುದಾನ್ ಮೆನ್ ಮಲರ್ ಮೇಲ್
ಕಳಿಯಾ ವಂಡು ಕಳ್ ಉಣ್ಣ
    ಕಾಮರ್ ತೆನ್ರಲ್ ಅಲರ್‌ತೂತ್ತ
ನಳಿರ್ ವಾಯ್ ಮುಲ್ಲೈಮುರುವಲಿಕ್ಕುಂ
    ನರೈಯೂರ್ ನಿನ್ರನಂಬಿಯೇ ॥೪॥

(ಒಳಿಯಾ) ಮರೆಯಾಗಿ ನಿಂತು (ವೆಣ್ಣೆಯ್ ಉಂಡಾನ್ ಎನ್ರು) ಬೆಣ್ಣೆಯನ್ನು ಕದ್ದು ಭುಜಿಸಿದ ತಪ್ಪಿಗಾಗಿ (ಆಯ್‌ಚ್ಚಿ) ಯಶೋದಾದೇವಿಯು (ವಿಳಿಯಾ)

ಕೋಪಿಸಿಕೊಂಡು (ಒಣ್‌ಕಯಿತ್ತಾಲ್) ಚೆಲುವಾದ ಹಗ್ಗದಿಂದ (ಉರಲೋಡು ಆರ್‌ಕ್ಕ) ಒರಳಿನೊಡನೆ ಸೇರಿಸಿಕಟ್ಟಲು (ಅಪ್ಪುಂಡು) ಕಟ್ಟಿಗೊಳಗಾದವನಾಗಿ (ವಿಮ್ಮಿ ಅಟುದಾನ್) ಬಿಕ್ಕಿ ಬಿಕ್ಕಿ ಅತ್ತ ಪರಮಾತ್ಮನು—(ಮೆಲ್ ಮಲರ್ ಮೇಲ್) ಮೃದುವಾದ ಸುಕುಮಾರವಾದ ಹೂಗಳ ಮೇಲೆ (ವಂಡು) ದುಂಬಿ ಗಳು (ಕಳಿಯಾ ಕಳ್‌ಉಣ್ಣ) ಸಂತೋಷದಿಂದ ಮಧುಪಾನ ಮಾಡುವಂತಹ, (ಕಾಮರ್ ತೆನ್ರಲ್) ಸುಂದರವಾದ ದಕ್ಷಿಣಾನಿಲವು (ಅಲರ್‌ತೂತ್ತ) ಹೂ ಗಳನ್ನು ಉದುರಿಸುವಂತಹ, (ನಳಿರ್‌ವಾಯರ್ ಮುಲ್ಲೈ) ತಂಪಾದ ಮುಖ ವನ್ನುಳ್ಳ ಮೊಲ್ಲೆ ಹೂಗಳು (ಮುರುವಲಿಕ್ಕುಂ) ನಸು ನಗುವಂತೆ ವಿಕಸಿಸು ವಂಥದೂ ಆದ (ನರೈಯೂರ್ ನಿನ್ರ ನಂಬಿ) ತಿರುನರೈಯೂರಿನಲ್ಲಿ ನಿತ್ಯವಾಸ ಮಾಡುತ್ತಿರುವ ನಂಬಿಯೇ ಆಗಿದ್ದಾನೆ.

ಕ್ಷೀರಾರ್ಣವಶಾಯಿಯನ್ನನುಸಂಧಾನ ಮಾಡಿದ ನಂತರ, 'ಏಷ ನಾರಾಯಣಃ ಶ್ರೀಮಾನ್ ಕ್ಷೀರಾರ್ಣವನಿಕೇತನಃ । ನಾಗಪರ್ಯಂಕ ಮುತ್ಸೃಜ್ಯ ಹ್ಯಾಗತೋ ಮಧುರಾಂ ಪುರೀಂ ॥' ಎಂದು ಹೇಳಿದಂತೆ ಶ್ರೀಕೃಷ್ಣನಾಗಿ ಅವತರಿಸಿ ನಿಯಾಮ್ಯನಾದ ಮಹಾಗುಣವನ್ನು ಇಲ್ಲಿ ಅನುಸಂಧಾನ ಮಾಡು ತ್ತಾರೆ. ಮುಚ್ಚಿಟ್ಟ ಬೆಣ್ಣೆಯನ್ನು ಮರೆಯಾಗಿ ನಿಂತು ಯಾರಿಗೂ ಕಾಣದಂತೆ ಭುಜಿಸಿದನಂತೆ ಕೃಷ್ಣ–'ದೈವವೇ ಕೊಂಡುಹೋಯಿತೋ' – ಎಂದು ಹೇಳು ವಂತಾಯಿತಂತೆ. ಅದಲ್ಲದೆ ಮರೆಮಾಡುವುದಕ್ಕಾಗದ ಬೆಣ್ಣೆಯನ್ನೂ ನೋಡು ನೋಡುತ್ತಿದ್ದಂತೆಯೇ ಭುಜಿಸಿದನಂತೆ ಅವನು. ಇದರಿಂದ ಕುಪಿತಳಾದ ಯಶೋದೆ ಆ ಸ್ವಾಮಿಯ ಮೈಯ್ಯಲ್ಲಿ ಗುರುತು ಬೀಳುವಂತೆ ಹಗ್ಗದಿಂದ ಬಿಗಿಯಾಗಿ ಸೇರಿಸಿ ಒರಳಿನೊಡನೆ ಕಟ್ಟಿಹಾಕಿದಳಂತೆ. ಆ ಹಗ್ಗ ಭಗವಂತನ ದಿವ್ಯಮಂಗಳ ವಿಗ್ರಹದ ಸ್ಪರ್ಶ ಹೊಂದುವ ಭಾಗ್ಯಪಡೆದುದರಿಂದ ಅದನ್ನು —'ಒಣ್‌ಕಯಿತ್ತಾಲ್' ಎಂದರು. ಅನುಕೂಲರ ಸ್ಪರ್ಶವನ್ನು ಹೊಂದಿದ ದ್ರವ್ಯವನ್ನು ಬಿಟ್ಟು ಬೇರೆ ಅವನಿಗೆ ಸಲ್ಲುವುದಿಲ್ಲವಂತೆ. ನಾಗಪಾಶಾದಿ ಗಳನ್ನು ಬಿಡಿಸಿಕೊಳ್ಳುತ್ತಾನೆ ಅವನು. ದುರ್ಯೋಧನಾದಿಗಳ ಕಟ್ಟಿಗೆ ಅವನು ಸಿಕ್ಕುತ್ತಾನೆಯೇ ? ಅನುಕೂಲರು ಕಟ್ಟಿದರೆ ಬಿಡಿಸಿಕೊಂಡು ಹೋಗಲಾರ. 'ಯದಿಶಕ್ನೋಷಿ ಗಚ್ಛ ತ್ವಂ' ಎಂದು ತಾನೇ ಅವಳು ಹೇಳಿದುದು ? ಸರ್ವ ನಿಯಾಮಕನಾದವನು ಅಸಹಾಯಕನಂತೆ ಬಿಕ್ಕಿಬಿಕ್ಕಿ ಅತ್ತನಂತೆ. ಅವನ ಈ

ಪರಮ ಸೌಲಭ್ಯಕ್ಕೆ ಎಣೆಯಾದುದು ಯಾವುದು ? ಅಂಥ ಪರಮ ಸುಲಭನಾದ ಸ್ವಾಮಿ ಕಂಡೆಡೆಯಲ್ಲೆಲ್ಲಾ ಹೂವಿನ ಪರಾಗ ಇರುವ ಸುಂದರವಾದ ತಿರುನರೈ ಯೂರ್ ಕ್ಷೇತ್ರದಲ್ಲಿ ನಿತ್ಯವಾಸ ಮಾಡುವವನಾಗಿದ್ದಾನೆ. ಅಲ್ಲಿ ಹೋಗಿ ಅವನನ್ನು ಸೇವಿಸಿ ಎನ್ನುತ್ತಾರೆ ಆಳ್ವಾರ್ ಅವರು.

ವಿಲ್ಲಾರ್ ವಿಬವಿಲ್ ವಡಮದುರೈ
ವಿರುಂಬಿ ವಿರುಂಬಾ ಮಲ್ ಅಡರ್ತ್ತು
ಕಲ್ಲಾರ್ ತಿರಳ್‌ತೋಳ್ ಕಂಜನೈಕ್ಕಾಯ್‌ನ್ದಾನ್
ಪಾಯ್‌ನ್ದಾನ್ ಕಾಳಿಯನ್ ಮೇಲ್
ಶೊಲ್ಲಾರ್ ಶುರುದಿ ಮರೈ ಓದಿ
ಶೋಮಮುಚ್ಚೆಯ್ಯುಂ ತೊಳಿಲಿನೋರ್
ನಲ್ಲಾರ್ ಮರೈಯೋರ್ ಪಲರ್‌ವಾಙುಂ
ನರೈಯೂರ್ ನಿನ್ರ ನಂಬಿಯೇ ॥೫॥

(ವಿಲ್ ಆರ್ ವಿಬವಿಲ್) ಕಂಸನು ನಡೆಸಿದ ಧನುರ್ಯಾಗದಲ್ಲಿ (ವಡಮದುರೈ ವಿರುಂಬಿ) ವಡಮಧುರೆಗೆ ಹೋಗಲಾಶಿಸಿ ಅಲ್ಲಿಗೆ ಹೋದಾಗ (ವಿರುಂಬಾ) ವಿರೋಧಿಗಳಾದ (ಮಲ್ ಅಡರ್ತ್ತು) ಮಲ್ಲರುಗಳನ್ನು ಮುಗಿಸಿಬಿಟ್ಟು, ಅನಂತರ (ಕಲ್ ಆರ್ ತಿರಳ್ ತೋಳ್ ಕಂಜನೈ ಕಾಯ್‌ನ್ದಾನ್) ಬೆಟ್ಟದಂತೆ ಹೋಲುವ ಕೊಬ್ಬಿದ ತೋಳುಗಳನ್ನುಳ್ಳ ಕಂಸನನ್ನು ಕನಲಿ ಕೊಂದು ಹಾಕಿದವನೂ, (ಕಾಳಿ ಯನ್ ಮೇಲ್ ಪಾಯರ್‌ನ್ದಾನ್) ಕಾಳಿಂಗ ಸರ್ಪದ ಮೇಲೆ ಹಾಯ್ದು ಅವನ ದರ್ಪವನ್ನು ಅಡಗಿಸಿದವನೂ ಆದ ಪರಮಾತ್ಮನು—(ಶೊಲ್ ಆರ್ ಶುರುದಿ) ನಿರ್ದುಷ್ಟವಾದ ಮಾತುಗಳಿಂದ ಕೂಡಿರುವ ವೇದಗಳನ್ನು (ಮರೈ ಓದಿ) ಸಂಪ್ರ ದಾಯಾನುಸಾರ ಅಧಿಕರಿಸಿ (ಶೋಮಮು ಶೆಯ್ಯುಂ ತೊಟಿಲಿನೋರ್) ಸೋಮ ಯಾಗವೇ ಮೊದಲಾದ ಯಾಗಗಳನ್ನು ನಡೆಸುವುದನ್ನೇ ತಮ್ಮ ವ್ಯಾಪಾರ ವನ್ನಾಗಿ ಉಳ್ಳ (ನಲ್ಲಾರ್) ವಿಲಕ್ಷಣರಾದ (ಮರೈಯೋರ್ ಪಲರ್‌ವಾಙುಂ) ಅನೇಕ ವೈದಿಕರುಗಳು ಬಾಳುವಂತ ಸ್ಥಾನವಾದ (ನರೈಯೂರ್ ನಿನ್ರನಂಬಿ) ತಿರುನರೈಯೂರಿನಲ್ಲಿ ನಿತ್ಯವಾಸಮಾಡುವ ನಂಬಿ ಆಗಿದ್ದಾನೆ.

ಹಿಂದಿನ ಪಾಶುರದಲ್ಲಿ ಆ ಸರ್ವೇಶ್ವರನು ಆಶ್ರಿತರಿಗೆ ಭವ್ಯನಾಗಿರುವ ರೀತಿಯನ್ನು ಅನುಸಂಧಾನ ಮಾಡಿದರು. ಈ ಪಾಶುರದಲ್ಲಿ ಆಶ್ರಿತರ ವಿರೋಧಿ

ಗಳ ಮೇಲೆ ತಾನೇ ಹೋಗಿ ಆಕ್ರಮಣ ಮಾಡಿ ಅಂಥವರನ್ನು ಜಯಿಸಬಲ್ಲವನೆಂದು ಅನುಭವಿಸುತ್ತಾ ಕೃಷ್ಣಾವತಾರದ ಲೀಲಾ ಚೇಷ್ಟಿತಗಳ ಅನುಸಂಧಾನ ಮಾಡಿದ್ದಾರೆ.

ಸೋದರಮಾವನಾದ ಕಂಸ ಧನುರ್ಯಾಗವೆಂಬ ವ್ಯಾಜವನ್ನಿಟ್ಟು ಶ್ರೀರಾಮ ಕೃಷ್ಣರನ್ನು ಕರೆಸಿ ಬಾಗಿಲಿನಲ್ಲಿ ಕುವಲಯಾ ಪೀಡವನ್ನು ನಿಲ್ಲಿಸಿದ್ದ. ಆನೆಯು ಅವರನ್ನು ಕೊಂದಿತೆಂದು ದುಃಖ ತೋರಿಸಿ ಕಣ್ಣೀರು ಹಾಕೋಣವೆಂದು ಅವನು ಎಣಿಸಿದ್ದನು. ಅವನು ಮಾಡುವ ವಿರೋಧವನ್ನೆಲ್ಲಾ ಚೆನ್ನಾಗಿ ತಿಳಿದವನೇ ಆಗಿದ್ದರೂ ಸ್ವಾಮಿ ಅದನ್ನು ಲಕ್ಷಿಸದೆ ಧನುರ್ಯಾಗಕ್ಕೆಂದು ಆ ಜಾಗಕ್ಕೆ ಒಲಿದು ಬಂದ. ಎದುರಾದ ವಿರೋಧಿಗಳನ್ನೆಲ್ಲಾ ಕೊಂದು ಹಾಕಿದ. ಕಂಸನ ಎದೆಯ ಮೇಲೆ ಹಾಯ್ದಂತೆ ಕಾಳಿಯನ ತಲೆಯ ಮೇಲೆ ಹಾಯ್ದ. ಇಂಥ ಸ್ವಾಮಿಯೇ ತಿರುನರ್ರೈಯೂರಿನಲ್ಲಿ ನಂಬಿಯಾಗಿ ನಿತ್ಯವಾಸಮಾಡಿ ಎಲ್ಲರಿಗೂ ತನ್ನ ದರ್ಶನವೀಯುತ್ತಿದ್ದಾನೆ.

**ವಳ್ಳಿಕೊಟುನನ್ ಮುದಲಾಯ ಮಕ್ಕಳೊಡು ಮುಕ್ಕಣ್ಣಾನ್**
**ವೆಳ್ಗಿ ಓಡ ವಿರಲ್ವಾಣ್ಣ ವಿಯನ್ ತೋಳ್ವನತ್ತೈ**
**ತುಣಿತ್ತು ಉಹಂದಾನ್**
**ಪಳ್ಳಿಕಮಲತ್ತಿಡೈ ಪಟ್ಟ ಪಹುವಾಯ್ ಅಲವರ್ನ**
**ಮುಹಂನೋಕ್ಕಿ**
**ನಳ್ಳಿ ಊಡುಂ ವಯಲ್ ಶೂಟ್ನ್ದ**
**ನರ್ರೈಯೂರ್ ನಿನ್ರ ನಂಬಿಯೇ ॥೬॥**

(ವಳ್ಳಿಕೊಟುನನ್ ಮುದಲಾಯ) ವಳ್ಳಿಯನಾಥನಾದ ಸುಬ್ರಹ್ಮಣ್ಯನೇ ಮೊದಲಾದ (ಮಕ್ಕಳೊಡು) ಪುತ್ರರ (ಜೊತೆಗೆ ಮುಕ್ಕಣ್ಣಾನ್) ಮುಕ್ಕಣ್ಣನಾದ ರುದ್ರನು (ವೆಳ್ಗಿ ಓಡ) ನಾಚಿ ಓಡಿಹೋಗಲು (ವಿರಲ್ ವಾಣನ್) ಬಲಿಷ್ಠನಾದ ಬಾಣಾಸುರನ (ವಿಯನ್ ತೋಳ್ವನತ್ತೈ) ಹರಡಿಕೊಂಡಿದ್ದ ತೋಳುಗಳೆಂಬ ವನವನ್ನು (ತುಣಿತ್ತು) ಕತ್ತರಿಸಿ ಹಾಕಿ (ಉಹಂದಾನ್) ಸಂತೋಷಿಸಿದ ಪರಮಾತ್ಮನು—(ಕಮಲತ್ತಿಡೈ) ತಾವರೆ ಹೂವಿನಲ್ಲಿ (ಪಳ್ಳಿಪಟ್ಟ) ಹೋಗಿ ಶಯನಿಸಿಕೊಂಡು ಮತ್ತೆ ಬಂದ (ಪಹುವಾಯ್ ಅಲವನ್) ದೊಡ್ಡ ಬಾಯಿಯನ್ನುಳ್ಳ ಗಂಡು ನಳ್ಳಿಯ (ಮುಹಂ ನಳ್ಳಿ ನೋಕ್ಕಿ) ಮುಖವನ್ನು ಹೆಣ್ಣುನಳ್ಳಿಯು

ನೋಡಿ (ಊಡಂ) ಪ್ರಣಯ ಕಲಹವನ್ನು ಮಾಡುವಂತಹ (ವಯಲ್ ಶೂಟ್ನ್ದ) ಗದ್ದೆಗಳಿಂದ ಸುತ್ತುವರಿಯಲ್ಪಟ್ಟ (ನರೈಯೂರ್) ತಿರುನರೈ ಯೂರಿನಲ್ಲಿ (ನಿನ್ರ ನಂಬಿಯೇ) ನಿಂತು ನಿತ್ಯವಾಸಮಾಡುತ್ತಿರುವ ನಂಬಿಯೇ ಆಗಿದ್ದಾನೆ.

ಸರ್ವೇಶ್ವರನಾದ ಪರಮಾತ್ಮನು ಅಸುರಪ್ರಕೃತಿಯವರಾದ ಕಂಸ, ಕಾಳೀಯ ಮೊದಲಾದವರನ್ನು ನಿಗ್ರಹಿಸಿದುದಷ್ಟೇ ಅಲ್ಲದೆ ದೇವನಾದ ರುದ್ರನೇ ಎದುರಿಸಿ ಬಂದಾಗ ಅವನು ಬೆನ್ನು ತೋರಿ ಓಡಿ ಹೋಗುವಂತೆ ಅತಿಮಾನುಷ ಚೇಷ್ಟಿತಗಳನ್ನು ಮಾಡಿದುದನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ತನ್ನ ಭೃತ್ಯವರ್ಗದೊಡನೆ ರುದ್ರದೇವನು ಹಿಮ್ಮೆಟ್ಟಿ ಹೊರಟುಹೋಗಲು ಪರ ಮಾತ್ಮನು ಬಾಣಾಸುರನ ಬಗೆಗೆ—'ಆಶ್ರಯಣೀಯರಲ್ಲದವರನ್ನು ಆಶ್ರಯಿಸಿ ಬಂದನಲ್ಲಾ'— ಎಂದು ಭಾವಿಸಿ ಅವನ ಬಾಹುಗಳನ್ನು ಛೇದಿಸಿ ಹೃಷ್ಟನಾದನು. ದೇವತಾಂತರ ಭಜನಕ್ಕೆ ಪರಿಕರವಾದ ತೋಳುಗಳನ್ನು ಕತ್ತರಿಸಿ ಹಾಕಿದನು. ಅಂಥಮಹಿಮೆಯ ದೇವನು ತಿರುನರೈಯೂರಿನಲ್ಲಿ ನಿತ್ಯವಾಸ ಮಾಡುತ್ತಿದ್ದಾನೆ.

ತನ್ನದಯಿತೆಯಾದ ನಳ್ಳಿಗೆ ಮಧುವನ್ನು ತಂದುಕೊಡುತ್ತೇನೆ ಎಂದು ಗಂಡುನಳ್ಳಿ ತಾವರೆ ಹೂವನ್ನು ಪ್ರವೇಶಿಸಿತಂತೆ. ಅಷ್ಟು ಹೊತ್ತಿಗೆ ಸೂರ್ಯಾಸ್ತವಾಯಿತು. ಆ ಹೂಮುಚ್ಚಿಕೊಂಡುಬಿಟ್ಟಿತು, ರಾತ್ರಿಯೆಲ್ಲಾ ಅಲ್ಲೇಕಳೆದು ಬೆಳಿಗ್ಗೆ ಇನಿಯಳ ಬಳಿಗೆ ಬಂದಿತಂತೆ. ತಾವರೆಯ ಗಂಧವನ್ನೂ ಚೂರ್ಣದ ಲೇಪವನ್ನೂ ಹೊಂದಿದ್ದ ನಲ್ಲನನ್ನು ನೋಡಿ ಹೆಣ್ಣುನಳ್ಳಿ ಬಾಗಿಲನ್ನು ಹಾಕಿಕೊಂಡು ಹೊರಟು ಹೋಯಿತಂತೆ. ಹೀಗೆ ಭಟ್ಟರು ಹೇಳಲಾಗಿ ಪಿಳ್ಳೈತಿರುನರೈಯೂರ್ ಅರೈಯರ್ ಹೇಳಿದರಂತೆ 'ತಪ್ಪು ಆಗಿದೆಯೆಂದು ಸಿದ್ಧವಾದ ಮೇಲಲ್ಲವೇ ಶಿಕ್ಷೆ ಕೊಡಬೇಕಾದುದು ?– ಎಂದು. ಅದಕ್ಕೆ ಭಟ್ಟರ್ ಹೇಳಿದರಂತೆ–'ಏನು ಮಾಡೋಣ ! ಕೇಳುವುದಕ್ಕಾಗದಂತೆ ಹೆಂಗಸರು ಆಳುವ ರಾಜ್ಯವಾಯಿತು'—ಎಂದು. ನಾಚ್ಚಿಯಾರ್ ಕೋಯಿಲ್ ಪ್ರದೇಶವಾದುದರಿಂದ ಹೆಣ್ಣುನಳ್ಳಿಗೆ ಸಲಿಗೆ ಹೆಚ್ಚಾಗಿರುವು ದೆಂಬ ಭಾವ.

ಮಿಡೈಯಾ ವನ್ದ ವೇಲ್ ಮನ್ನರ್ ವೀಯ
ವಿಶಯನ್‌ತೇರ್ ಕಡವಿ
ಕುಡೈಯಾ ವರೈ ಒನ್ರು ಎಡುತ್ತು ಆಯರ್
ಕೋವಾಯ್ ನಿನ್ರಾನ್ ಕೂರಾಳಿ
ಪಡೈಯಾನ್ ವೇದಮ್‌ನಾನ್ಗು ಐನ್ದುವೇಳ್ವಿ
ಅಂಗಂಆರು ಇಶೈಏಳ್
ನಡೈ ಆವಲ್ಲ ಅಂದಣರ್ ವಾೞ್
ನರೈಯೂರ್ ನಿನ್ರ ನಂಬಿಯೇ ॥೭॥

(ಮಿಡೈಯಾವನ್ದ) ಗುಂಪುಗುಂಪಾಗಿ ರಣರಂಗದಲ್ಲಿ ಬಂದು ನಿಂತ (ವೇಲ್ ಮನ್ನರ್) ವೇಲಾಯುಧಧಾರಿಗಳಾದ ರಾಜರುಗಳು (ವೀಯ) ನಾಶವಾಗುವಂತೆ (ವಿಶಯನ್ ತೇರ್ ಕಡವಿ) ಅರ್ಜುನನ ರಥವನ್ನು ನಡೆಸಿದವನೂ, (ಒನ್ರು ವರೈ ಕುಡೈಯಾ ಎಡುತ್ತು) ಗೋವರ್ಧನವೆನ್ನುವ ಪರ್ವತವೊಂದನ್ನು ಕೊಡೆಯಂತೆ ಮೇಲೆಎತ್ತಿ ಹಿಡಿದು (ಆಯರ್ ಕೋ ಆಯ್ ನಿನ್ರಾರ್) ಗೋಪಾಲಕರಿಗೆ ರಕ್ಷಕನಾಗಿ ನಿಂತವನೂ (ಕೂರ್ ಆೞಿ ಪಡೈಯಾನ್) ನಿಶಿತ ವಾದ ಸುದರ್ಶನ ಚಕ್ರವನ್ನು ಆಯುಧವನ್ನಾಗಿ ಉಳ್ಳವನೂ ಆದ ನಮ್ಮ ಸ್ವಾಮಿಯು (ವೇದಂ ನಾನ್ಗು) ನಾಲ್ಕು ವೇದಗಳನ್ನೂ (ಐನ್ದು ವೇಳ್ವಿ) ಪಂಚಮಹಾಯಜ್ಞಗಳನ್ನೂ (ಆರು ಅಂಗಂ) ಆರು ವೇದಾಂಗಗಳನ್ನೂ (ಏಳ್ ಇಶೈ) ಸಪ್ತಸ್ವರಗಳನ್ನೂ (ನಡೈಆವಲ್ಲ) ಯಾವಾಗಲೂ ಹೊತ್ತುಹೋಗು ವುದಕ್ಕಾಗಿ ಕೈಕೊಂಡ (ಅಂದಣರ್ ವಾೞ್) ಬ್ರಾಹ್ಮಣರುಗಳು ವಾಸ ಮಾಡು ತ್ತಿರುವ (ನರೈಯೂರ್ ನಿನ್ರ ನಂಬಿ) ತಿರುನರೈಯೂರಿನಲ್ಲಿ ನಿತ್ಯ ವಾಸ ಮಾಡುವ ನಂಬಿ ಆಗಿದ್ದಾನೆ.

ಹಿಂದಿನ ಪಾಶುರದಲ್ಲಿ ಆಯುಧವನ್ನೆತ್ತಿ ಬಾಣನ ಬಾಹುಗಳನ್ನು ಛೇದಿಸಿದುದನ್ನು ಅನುಸಂಧಾನ ಮಾಡಿದರು. ಈ ಪಾಶುರದಲ್ಲಿ ದುರ್ವರ್ಗ ದವರು ಒಟ್ಟಾಗಿ ಎದುರಿಸಿದ ಸಮಯದಲ್ಲಿ ಕೈಯಲ್ಲಿ ಆಯುಧವನ್ನೇ ಹಿಡಿ ಯದೆ ಜಯಿಸಿದ ಚಾತುರ್ಯವನ್ನೂ ಒಂದು ಬೆಟ್ಟವನ್ನೆತ್ತಿ ಹಿಡಿದು ಇಂದ್ರನನ್ನು ಜಯಿಸಿದುದನ್ನೂ ಅನುಸಂಧಾನ ಮಾಡಿದ್ದಾರೆ. ಇಂದ್ರನ ಮೇಲೆ ಹೋಗದಂತೆ ತನ್ನ ಚಕ್ರಾಯುಧವನ್ನು ಸ್ವಾಮಿ ಕೈಯಲ್ಲೇ ಹಿಡಿದಿದ್ದ

ನಂತೆ ಗೋವರ್ಧನವನ್ನು ಎತ್ತಿ ಹಿಡಿದಾಗಲೂ, ಆ ಇಂದ್ರನು ತಾನೇ ಬಂದು ಕ್ಷಮೆಬೇಡಿ ಗೋವಿಂದ ಪಟ್ಟಾಭಿಷೇಕ ಮಾಡುವಂತೆ ಗೋಪಾಲಕರಿಗೂ, ಪಶುಗಳಿಗೂ ನಿರ್ವಾಹಕನಾಗಿದ್ದನು ಆ ಸರ್ವೇಶ್ವರ.

**ಪಂದಾರ್ ವಿರಲಾಳ್ ಪಾಂಚಾಲಿ**
**ಕೂಂದಲ್ ಮುಡಿಕ್ಕ ಪಾರತತ್ತು**
**ಕಂದು ಆರ್ ಕಳಿತ್ತುಕ್ಕಟಲ್‌ಮನ್ನರ್**
**ಕಲಂಗ ಶಂಗಂ ವಾಯ್ ವೈತ್ತಾನ್**
**ಶೆಂದಾಮರೈ ಮೇಲ್ ಅಯನೊಡು ಶಿವನುಂ**
**ಅನ್ನೈಯೆ ಪೆರುಮೈಯೋರ್**
**ನಂದಾವಣ್ ಮರೈಯೋರ್ ವಾಟ್**
**ನರೈಯೂರ್ ನಿನ್ರ ನಂಬಿಯೇ** ॥೮॥

(ಪಂದು ಆರ್ ವಿರಲಾಳ್) ಚೆಂಡನ್ನು ಹಿಡಿದುಕೊಂಡು ಆಡುವ ಬೆರಳುಗಳನ್ನುಳ್ಳ (ಪಾಂಚಾಲಿ ಕೂಂದಲ್ ಮುಡಿಕ್ಕ) ದ್ರೌಪದಿಯು ತನ್ನ ತಲೆಗೂದಲನ್ನು ಗಂಟು ಹಾಕಿಕೊಳ್ಳುವುದಕ್ಕಾಗಿ (ಪಾರತತ್ತು) ಭಾರತ ಯುದ್ಧದಲ್ಲಿ (ಕಂದು ಆರ್ ಕಳಿರು) ಮದ ಜಲದ ಗಂಧವು ತಂಗಿದ್ದ ಆನೆಗಳ ಮೇಲೇರಿ ಇರುವವರಗಳಾದ (ಕಟಲ್ ಮನ್ನರ್) ವೀರ ಕಡಗಗಳನ್ನು ಧರಿಸಿದ್ದ ದುರ್ಯೋಧನಾದಿ ಅರಸರುಗಳು (ಕಲಂಗ) ಬುದ್ಧಿ ಕೆಡುವ ಹಾಗೆ (ಶಂಗಂ ವಾಯ್ ವೈತ್ತಾನ್ ತನ್ನ ಶ್ರೀ ಪಾಂಚಜನ್ಯವನ್ನು ಬಾಯಲಿಟ್ಟು ಊದಿದ ಸ್ವಾಮಿಯು (ಶೆಮ್ ತಾಮರೈ ಮೇಲ್ ಅಯನೊಡು ಶಿವನುಂ ಅನ್ನೈಯು) ಕಮಲಾಸನನಾದ ಬ್ರಹ್ಮನೊಡನೆಯೂ ರುದ್ರನೊಡನೆಯೂ ಹೋಲುವ (ಪೆರುಮೈಯೋರ್) ಹಿರಿಮೆಯನ್ನು ಹೊಂದಿದವರೂ (ನಂದಾ ವಣ್ ಮರೈಯೋರ್) ಒಂದು ಕಾಲದಲ್ಲಿಯೂ ಕೊರೆಯಾಗದ ಔದಾರ್ಯವನ್ನುಳ್ಳವರೂ ಆದ ಬ್ರಾಹ್ಮಣರುಗಳು (ವಾಟ್) ಬಾಳುತ್ತಿರುವ (ನರೈಯೂರ್ ನಿನ್ರ ನಂಬಿ) ತಿರುನರೈಯೂರ್ ಕ್ಷೇತ್ರದಲ್ಲಿ ನಿತ್ಯವಾಸ ಮಾಡುವ ನಂಬಿ ಆಗಿದ್ದಾನೆ.

ಹಿಂದಿನ ಪಾಶುರದಲ್ಲಿ ಹೇಳಿದ ಭಾರತ ಸಮರಕ್ಕೆ ಕಾರಣವೇನೆಂಬುದನ್ನು ಹೇಳುತ್ತಾ ಯುದ್ಧಾರಂಭದ ಸಂಭ್ರಮವನ್ನು ಇಲ್ಲಿ ಅನುಸಂಧಾನ

ಮಾಡಿದ್ದಾರೆ. ಪರಿಭವಕ್ಕೆ ಯೋಗ್ಯಳಲ್ಲದ ದ್ರೌಪದಿ ಪರಿಭೂತೆಯಾದಾಗ ಬಿಚ್ಚಿ ಹೋದ ಕೂದಲನ್ನು ಶತ್ರುಗಳ ಸಂಹಾರವಾಗದೆ ಮುಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಲು ಅದುವೇ ಮಹಾಭಾರತಕ್ಕೆ ಆದಿಯಾಯಿತು. ಮದ ಗಜಗಳನ್ನೇರಿ ಬಂದ ರಾಜರುಗಳೆಲ್ಲರೂ ನಾಶವಾಗುವಂತೆ ಸ್ವಾಮಿ ತನ್ನ ಪಾಂಚಜನ್ಯವನ್ನು ಊದಿದನು, ಅಂಥ ಸರ್ವೇಶ್ವರ ಇಲ್ಲಿ ನಂಬಿಯಾಗಿ ನಿತ್ಯವಾಸ ಮಾಡುತ್ತಿದ್ದಾನೆ ಭಕ್ತಜನ ಪರಿಪಾಲನೆಗಾಗಿ,

ಆರುಂ ಪಿರೈಯುಂ ಅರವಮುಂ ಅಡಂಬಂ
ಶಡೈಮೇಲಣಿನ್ದು ಉಡಲಂ
ನೀರುಂಪೂಶಿ ಏರೂರುಂ ಇರೈಯೋನ್
ಶೆನ್ರು ಕುರೈ ಇರಪ್ಪ
ಮಾರೊನ್ರಿಲ್ಲಾ ವಾಶ ನೀರ್‌ವರೈಮಾರ್ಪು
ಅಹಲತ್ತು ಅಳಿತ್ತ ಉಹಂದಾನ್
ನಾರುಂ ಪೊಟಿಲ್ ಶೊಟ್‌ನ್ದು ಅಟಹಾಯ
ನರೈಯೂರ್ ನಿನ್ರ ನಂಬಿಯೇ ॥೯॥

(ಆರುಂ) ಗಂಗೆ ಎಂಬ ನದಿಯನ್ನೂ (ಪಿರೈಯುಂ) ಚಂದ್ರಕಲೆಯನ್ನೂ (ಅರವಮುಂ) ಸರ್ಪಗಳನ್ನೂ (ಅಡಂಬಂ) ಕಡಂಬ ವೃಕ್ಷದ ಹೂವನ್ನೂ (ಶಡೈಮೇಲ್ ಅಣಿನ್ದು) ಜಟೆಯ ಮೇಲೆ ಧರಿಸಿಕೊಂಡು (ಉಡಲಂ ನೀರುಂ ಪೂಶಿ) ಮೈಯಲ್ಲಿ ಭಸ್ಮವನ್ನು ಧಾರಣೆ ಮಾಡಿಕೊಂಡು (ಏರೂರುಂ) ವೃಷಭದ ಮೇಲೇರಿ ಸಂಚರಿಸುವ (ಇರೈಯೋನ್) ರುದ್ರ ದೇವನು (ಶೆನ್ರು) ತನ್ನನ್ನು ಸಮೀಪಿಸಿ (ಕುರೈ ಇರಪ್ಪ) ತನ್ನ ಬ್ರಹ್ಮಹತ್ಯಾಪಾಪವನ್ನು ವಿಮೋಚನೆ ಮಾಡಿಸಬೇಕೆಂದು ಬೇಡಲಾಗಿ, (ವರೈ ಮಾರ್ಪು ಅಹಲತ್ತು) ಬೆಟ್ಟದಂತಿದ್ದ ತನ್ನ ವಕ್ಷಸ್ಥಲದಿಂದ (ಮಾರು ಒನ್ರು ಇಲ್ಲಾ ವಾಶಂ ನೀರ್) ಅಸದೃಶವಾದ ಪರಿಮಳವು ತುಂಬಿದ (ಸ್ವೇದ) ಜಲವನ್ನು (ಅಳಿತ್ತು) ತೆಗೆದುಕೊಟ್ಟು (ಉಹಂದಾನ್) ಮನಸ್ಸಂತೋಷವನ್ನು ಹೊಂದಿದ ಸ್ವಾಮಿಯು (ನಾರುಂ ಪೊಟಿಲ್ ಶೊಟಿನ್ದು ಅಟಹು ಆಯ) ಸುಗಂಧವು ವ್ಯಾಪಿಸಿರುವ ತೋಪು ಗಳಿಂದ ಸುತ್ತುವರಿಯಲ್ಪಟ್ಟು ಸುಂದರವಾದ (ನರೈಯೂರ್ ನಿನ್ರನಂಬಿ) ತಿರುನರೈಯೂರಿನಲ್ಲಿ ನಿತ್ಯವಾಸ ಮಾಡುತ್ತಿರುವ ನಂಬಿಯೇ ಆಗಿದ್ದಾನೆ.

'ಗೋವಿಂದಾ' ಎಂದು ತನ್ನಲ್ಲಿ ಶರಣಾಗತೆಯಾದವಳು ತನ್ನ ತಲೆ ಗೂದಲನ್ನು ಮುಡಿಯುವುದಕ್ಕಾಗುವಂತೆ ಮಹಾಭಾರತ ಯುದ್ಧವನ್ನು ನಡೆಸಿದ ನೆಂದು ಹಿಂದಿನ ಪಾಶುರದಲ್ಲಿ ಹೇಳಿದರು. ಇದರಲ್ಲಿ ಅಭಿಮಾನಿಯಾದ ಶಿವನಿಗೂ ಸಹ ಹೇಗೆ ಅವನು ಉಪಕಾರ ಮಾಡಿದನೆಂಬುದನ್ನು ಅನುಸಂಧಾನ ಮಾಡಿದ್ದಾರೆ, ತನ್ನ ರಕ್ಷಣೆಯನ್ನು ತಾನೇ ಮಾಡಿಕ್ಕೊಳ್ಳಬಲ್ಲನೆಂಬ ಅಭಿಮಾನವನ್ನು ರುದ್ರದೇವ ಹೊಂದಿದ್ದ. ಲೋಕಗುರುವಾದ ಬ್ರಹ್ಮದೇವನ ಒಂದು ತಲೆಯನ್ನು ಛೇದಿಸಿ ಅದರಿಂದ ಬ್ರಹ್ಮಹತ್ಯಾಪಾಪಕ್ಕೆ ಗುರಿಯಾದ ಅವನು ಪರಮಾತ್ಮನಲ್ಲಿ ಬೇಡಿಕೊಳ್ಳಲು ಆಗ ಪರಮಾತ್ಮನು 'ಸರ್ವಗಂಧಃ' ಎಂಬುವ ತನ್ನ ಶರೀರ ದಿಂದ ಸ್ವೇದ ಜಲವನ್ನು ಹರಿಸಿ ಅವನ ಪಾಪವನ್ನು ಕಳೆದುಹಾಕಿದನು. ಅಂಥ ಸ್ವಾಮಿ ಇರುತ್ತಿರುವನು ಈ ದಿವ್ಯಕ್ಷೇತ್ರದಲ್ಲಿ.

**ನನ್ಮೈಯುಡೈಯುಮರೈಯೋರ್ ವಾಟ್**
**ನರೈಯೂರ್ ನಿನ್ರ ನಂಬಿಯೈ**
**ಕನ್ನಿಮದಿಳ್ ಶೂಟ್ ವಯಲ್ ಮಂಗೈ**
**ಕಲಿಯನ್ ಒಲಿಶೆಯ್ ತಮಿಟ್ ಮಾಲೈ**
**ಪನ್ನಿ ಉಲಹಿಲ್ ಪಾಡುವಾರ್ ಪಾಡು ಶಾರಾ**
**ಪಟುವಿನೈಹಳ್**
**ಮನ್ನಿ ಉಲಹಂ ಆಂಡುಪೋಯ್**
**ವಾನೋರ್ ವಣಂಗ ವಾಟ್ವಾರೇ**                                   ॥೧೦॥

(ನನ್ಮೈ ಉಡೈಯ ಮರೈಯೋರ್ ವಾಟ್) ವಿಲಕ್ಷಣರಾದ ವೈದಿಕ ಬ್ರಾಹ್ಮಣರು ಗಳು ಬಾಳುತ್ತಿರುವಂತಹ (ನರೈಯೂರ್ ನಿನ್ರ ನಂಬಿಯೈ) ತಿರುನರೈ ಯೂರಿನಲ್ಲಿ ನಿತ್ಯವಾಸ ಮಾಡುತ್ತಿರುವ ನಮ್ಮ ಸ್ವಾಮಿಯನ್ನು ಕುರಿತು (ಕನ್ನಿ ಮದಿಳ್) ಅಳಿವಿಲ್ಲದ ಪ್ರಾಕಾರಗಳಿಂದಲೂ (ವಯಲ್) ಗದ್ದೆಗಳಿಂದಲೂ (ಶೂಟ್ ಮಂಗೈ) ಸುತ್ತುವರಿಯಲ್ಪಟ್ಟ ತಿರುಮಂಗೈ ಕ್ಷೇತ್ರಕ್ಕೆ ನಿರ್ವಾಹಕರಾದ (ಕಲಿಯನ್ ಒಲಿಶೆಯ್ ತಮಿಟ್ ಮಾಲೈ) ತಿರುಮಂಗೈ ಆಳ್ವಾರ್ ಅವರು ಅನು ಗ್ರಹಿಸಿದ ತಮಿಳಿನ ಪದ್ಯಗಳ ಮಾಲೆಯನ್ನು (ಉಲಹಿಲ್) ಈ ಲೋಕದಲ್ಲಿ (ಪನ್ನಿ ಪಾಡುವಾರ್ ಪಾಡು) ತಿಳಿದುಕೊಂಡು ಹಾಡುವವರ ಹತ್ತಿರಕ್ಕೆ (ಪಟುವಿ ನೈಹಳ್ ಶಾರಾ) ಹಳೆಯ ಪಾಪಗಳು ಸುಳಿಯುವುದಿಲ್ಲ. ಅದೂ ಅಲ್ಲದೆ ಅವರು

ಗಳು (ಮನ್ನಿ ಉಲಹಂ ಆಂಡು) ಬಹಳ ಕಾಲ ಇದ್ದು ಈ ಲೋಕದಲ್ಲಿ ಆಳಿ (ಪ್ಪೋಯ್) ಪರಮ ಪದಕ್ಕೆ ಸೇರಿ (ವಾನೋರ್ ವಣಂಗ ವಾಳ್ವರ್) ಅಲ್ಲಿರುವ ನಿತ್ಯಮುಕ್ತರುಗಳು ಆದರಿಸುವಂತೆ ಬಾಳುವವರಾಗುತ್ತಾರೆ.

ಅನನ್ಯ ಪ್ರಯೋಜನರಾದ ಬ್ರಾಹ್ಮಣರು ಇರುತ್ತಿರುವ ಸ್ಥಳ ತಿರುನರೈಯೂರ್. ಅಲ್ಲಿ ಬಂದು ನಿತ್ಯವಾಸ ಮಾಡುತ್ತಿರುವ ಕಲ್ಯಾಣಗುಣ ಪೂರ್ಣನನ್ನು ಆಳ್ವಾರ್ ಅವರು ಅನನ್ಯ ಭಾವದಿಂದ ಸ್ತುತಿಸಿದ್ದಾರೆ. ಈ ದಶಕವನ್ನು ಅರ್ಥಾನುಸಂಧಾನದೊಡನೆ ಅಭ್ಯಾಸ ಮಾಡಿ ಹಾಡುವವರು ಇಲ್ಲಿ ಐಹಿಕ ಭೋಗಗಳನ್ನೆಲ್ಲಾ ಅನುಭವಿಸಿ ಕೊನೆಗೆ ಪರಮ ಪದಕ್ಕೆ ಹೋಗಿ ನಿತ್ಯಸೂರಿಗಳ ಆದರಕ್ಕೆ ಪಾತ್ರರಾಗುತ್ತಾರೆ.

### ಆರನೆಯ ಪತ್ತು—ಎಂಟನೆಯ ತಿರುಮೊಳಿ

# ಮಾನ್‌ಕೊಂಡ

## ಪ್ರವೇಶ

'ಅನೇಕ ದಿವ್ಯಕ್ಷೇತ್ರಗಳಲ್ಲಿ ಒಲಿದು ನೆಲಸಿರುವ ಆ ಸರ್ವೇಶ್ವರನನ್ನು ಆಶ್ರಯಿಸಿದವರು ಅನೇಕರುಂಟು. ಹೀಗಿರಲು ನೀವು ತಿರುನರೈಯೂರಿನ ನಂಬಿಯಲ್ಲಿ ಇಷ್ಟು ಪ್ರವಣರಾಗುವಿರಲ್ಲಾ ! ಹಾಗೆ ನೀವು ಪ್ರವಣರಾಗುವುದಕ್ಕೆ ಈ ನಂಬಿಯಲ್ಲಿ ಯಾವ ಅತಿಶಯವನ್ನು ನಿಮಗೆ ತಿಳಿಸಿಕೊಟ್ಟಿದ್ದಾರೆ ?' —ಎಂದು ಕೆಲವರು ಕೇಳಲು ಆಳ್ವಾರ್ ಹೇಳುತ್ತಾರೆ—'ಆ ಬೇರೆ ಬೇರೆ ಕ್ಷೇತ್ರಗಳಲ್ಲಿ ನೆಲಸಿರುವವನು ಇವನೇ ಆಗಿದ್ದಾನೆ. ಇದು ಕಣ್ಣಾರೆ ಕಂಡ ವಿಷಯವಲ್ಲವೇ ? ಇವನ ಸರ್ವಾತಿಶಯವನ್ನೆಲ್ಲಾ ನನ್ನೊಡನೆ ನೀವೂ ನೋಡುತ್ತಿರುವಿರಲ್ಲ ! ಇವನ ವೈಭವವನ್ನೂ ನಾಯಿಚ್ಚಿಯಾರ್ ವೈಭವವನ್ನೂ ಕಣ್ಣಾರೆಕಂಡ ನೀವು ಹೀಗೆ ಕೇಳುವುದು ತಾನೇ ಹೇಗೆ ?'—ಎಂದು. ತಿರುನರೈಯೂರಿನಲ್ಲಿರುವ ನಂಬಿಯ ಪ್ರಕಾರಗಳನ್ನು ತಾವು ಹೇಗೆ ಕಂಡುಕೊಂಡರೋ ಹಾಗೆ ಈ ದಶಕದಲ್ಲಿ ತಿಳಿಸಿಕೊಡುತ್ತಾರೆ.

**ಮಾನ್‌ಕೊಂಡತೋಲ್ ಮಾರ್ವಿಲ್ ಮಾಣಿಯಾಯ್
ಮಾವಲಿಮಣ್
ತಾನ್‌ಕೊಂಡು ತಾಳಾಲ್ ಅಳಂದ ಪೆರುಮಾನೈ
ತೇನ್‌ಕೊಂಡ ಶಾರಲ್, ತಿರುವೇಂಗಡತ್ತಾನೈ
ನಾನ್ ಶೆನ್ರುನಾಡಿ ನರೈಯೂರಿಲ್ ಕಂಡೇನೇ ॥೧॥**

(ಮಾನ್‌ಕೊಂಡತೋಲ್) ಕೃಷ್ಣಾಜಿನವನ್ನು (ಮಾರ್ವಿಲ್) ಎದೆಯ ಮೇಲೆ ಧರಿಸಿಕೊಂಡ (ಮಾಣಿ ಆಯ್) ಬ್ರಹ್ಮಚಾರಿಯಾಗಿ (ಮಾವಲಿ) ಮಹಾಬಲಿಯಿಂದ (ಮಣ್) ಭೂಮಿಯನ್ನು (ತಾನ್‌ಕೊಂಡು) ತಾನು ಯಾಚಿಸಿ ಪಡೆದುಕೊಂಡು (ತಾಳಾಲ್ ಅಳಂದ) ತನ್ನ ಶ್ರೀ ಪಾದದಿಂದ ಆಕ್ರಮಿಸಿಕೊಂಡ (ಪೆರುಮಾನೈ) ಹಿರಿಮೆಯನ್ನು ಹೊಂದಿದವನೂ, (ತೇನ್ ಕೊಂಡ ಶಾರಲ್) ಜೇನು ಗೂಡುಗಳನ್ನು ಅಧಿಕವಾಗಿ ತನ್ನ ತಪ್ಪಲುಗಳಲ್ಲಿ ಉಳ್ಳ (ತಿರುವೇಂಗಡತ್ತಾನೈ) ಶ್ರೀ ವೇಂಕಟಾದ್ರಿಯಲ್ಲಿ ಇರುವ ನಮ್ಮ ಸ್ವಾಮಿಯನ್ನು (ನಾನ್ ನಾಡಿಶೆನ್ರು) ನಾನು ಹುಡುಕಿಕೊಂಡು ಹೋಗಿ (ನರೈಯೂರಿಲ್ ಕಂಡೇನ್) ತಿರುನರೈಯೂರಿನಲ್ಲಿ ಕಂಡು ಕೊಂಡೆನು.

ಕೃಷ್ಣಾಜಿನವನ್ನು ಧರಿಸಿ ತನ್ನ ವಿನೀತ ವೇಷವನ್ನು ತೋರಿ ಅವನ ಮನಸ್ಸನ್ನಪಹರಿಸಿ ಆದ ಮೇಲೆ ಭೂಮಿಯನ್ನು ತೆಗೆದುಕೊಂಡದ್ದು, ಅವನ ದಲ್ಲದುದನ್ನು ಅವನದನ್ನಾಗಿಸಿ, ಎಲ್ಲಕ್ಕೂ ಸ್ವಾಮಿಯಾದ ತಾನು ತನ್ನದಲ್ಲದ ಒಂದನ್ನು ಅವನಿಂದ ಯಾಚಿಸಿ ಪಡೆದುಕೊಂಡಂತೆ ಆಯಿತು. ತನ್ನ ಕೈಮೇಲೆ ದಾನ ಧಾರೆ ಬಿದ್ದ ಕೂಡಲೇ ಅವನು ಮರು ಮನಸ್ಸು ಮಾಡುವುದಕ್ಕೂ ಮೊದಲೇ ಅಳೆದುಕೊಂಡು ಬಿಟ್ಟಾಗಿತ್ತು. ಅದೂ ಭಕ್ತರು ಕಣ್ಣಿಗೆ ಒತ್ತಿ ಕೊಳ್ಳುವ ಸುಕುಮಾರವಾದ ಪಾದಗಳಿಂದ ಕಾಡು ಮೇಡುಗಳನ್ನೆಲ್ಲಾ ಅಳೆದು ಕೊಂಡನವನು, ಹೀಗೆ ಸರ್ವಶೇಷಿ ಆಗಿ ಸರ್ವಾಧಿಕನಾದ ಅವನು ತನ್ನನ್ನು ಕಡಿಮೆಯನ್ನಾಗಿ ಮಾಡಿಕೊಂಡಾಗಲೂ ಅವನ ಹಿರಿಮೆಯೇ ಎದ್ದು ತೋರಿತು! ತನ್ನ ಶ್ರೀಪಾದಗಳಿಂದ ಅಳೆದ ಕಾಲದಲ್ಲಿ ತಪ್ಪಿಹೋದವರಿಗೂ ಸಹ ತಪ್ಪದೆ ಇರುವುದಕ್ಕಾಗಿ ತಿರುಮಲೆಯಲ್ಲಿ ಅವನು ಬಂದು ನಿಂತದ್ದಾಯಿತು. ಅವನು ಹುಡುಕಿಕೊಂಡು ಬಂದಾಗ ವೈಮುಖ್ಯವನ್ನು ಮಾಡಿದ ನಾನು, ಆಮೇಲೆ ಅವನನ್ನು ಹುಡುಕಿಕೊಂಡು ಹೋದನಾನು, ಬಾಯಾರಿಕೆಯಾದಾಗಲೇ

ತಣ್ಣೀರನ್ನು ಪಡೆದುಕೊಂಡಂತೆ ಈ ತಿರುನರೈಯೂರಿನಲ್ಲಿ ಅವನನ್ನು ಕಂಡು ಕೊಂಡೆನು.

**ಮುನ್ನೀರೈ ಮುನ್ನಾಳ್ ಕಡಂದಾನೈ ಮೂಟ್ತ್ತನಾಳ್**
**ಅನ್ನೀರೈ ಮೀನ್ಆಯ್ ಅಮೈತ್ತ ಪೆರುಮಾನೈ**
**ತೆನ್ನಾಲಿ ಮೇಯ ತಿರುಮಾಲೈ ಎಮ್ಮಾನೈ**
**ನ ನ್ನೀರ್‌ವಯಲ್ ಶೂಟ್ ನರೈಯೂರಿಲ್ ಕಂಡೇನೇ ॥೨॥**

(ಮುನ್‌ನಾಳ್) ಹಿಂದೊಂದು ಕಾಲದಲ್ಲಿ (ಮುನ್ನೀರೈ ಕಡೈಂದಾನೈ) ಸಮುದ್ರ ವನ್ನು ಮಥನ ಮಾಡಿದವನೂ, (ಮೂಟ್‌ತ್ತ ನಾಳ್) ಲೋಕವನ್ನು ಪ್ರಳಯವು ಆವರಿಸಿದ ಕಾಲದಲ್ಲಿ (ಮೀನ್ ಆಯ್ ಅನ್ನೀರೈಅಮೈತ್ತ) ಮತ್ಸ್ಯರೂಪಿಯಾಗಿ ಆ ಪ್ರಳಯಾಬ್ಧಿಯ ಜಲವನ್ನು ಅಡಗಿಸಿದವನೂ ಆದ (ಪೆರುಮಾನೈ) ಹಿರಿಮೆ ಹೊಂದಿದವನೂ (ತೆನ್ ಆಲಿ ಮೇಯ ತಿರುಮಾಲೈ) ಸುಂದರವಾದ ತಿರುವಾಲಿ ನಗರಿಯಲ್ಲಿ ನಿತ್ಯ ವಾಸ ಮಾಡುತ್ತಿರುವ ಶ್ರಿಯಃ ಪತಿಯಾದ (ಎಮ್ಮಾನೈ) ನಮ್ಮ ಸ್ವಾಮಿಯನ್ನು (ನಲ್‌ನೀರ್‌ವಯಲ್‌ಶೂಟ್) ಒಳ್ಳೆಯ ನೀರು ಹರಿಯುವ ಗದ್ದೆಗಳಿಂದ ಸುತ್ತುವರಿಯಲ್ಪಟ್ಟ (ನರೈ ಯೂರಿಲ್ ಕಂಡೇನ್) ನರೈಯೂರಿನಲ್ಲಿ ಸಂದರ್ಶಿಸಿ ಸೇವಿಸಿದನು.

ಇಂದ್ರಾದಿಗಳಿಗಾಗಿ ಅಮೃತವನ್ನು ತಂದುಕೊಡಲು ಮೈ ನೋಯಿಸಿ ಕೊಂಡು ಸಮುದ್ರವನ್ನು ಮಥಿಸಿದ ರೀತಿಯನ್ನೂ, ಅದಕ್ಕಿಂತಲೂ ಆಶ್ಚರ್ಯಾವಹವಾಗಿ ಮತ್ಸ್ಯರೂಪಿಯಾಗಿ ಪ್ರಳಯಾಪತ್ತಿನಿಂದ ಲೋಕವನ್ನು ರಕ್ಷಿಸಿದ ರೀತಿಯನ್ನೂ ಇಲ್ಲಿ ಅನುಸಂಧಾನ ಮಾಡಿದ್ದಾರೆ. ಅಸುರರ ಕೈ ಯಿಂದ ಪರಿಭವಕ್ಕೊಳಗಾದ ದೇವತೆಗಳನ್ನು ಬದುಕಿಸುವುದಕ್ಕಾಗಿ ಸಮುದ್ರ ವನ್ನು ಮಥನ ಮಾಡಿದ, ಕಾವಲಿರುವವರೇ ಕಳ್ಳತನ ಮಾಡುವಂತೆ ಆ ಸಮುದ್ರವೇ ಲೋಕವನ್ನೆಲ್ಲಾ ಆಕ್ರಮಿಸಿಬಿಟ್ಟಾಗ ಮತ್ಸ್ಯರೂಪಿಯಾಗಿ ಅದನ್ನು ತನ್ನ ಶರೀರದ ಏಕ ದೇಶದಿಂದ ಅಡಗಿಸಿಟ್ಟನವನು. ದೇವತೆಗಳು ಮತ್ತು ಅಸುರರುಗಳು ಇವರುಗಳನ್ನೆಲ್ಲಾ ಸೇರಿಸಿಕೊಂಡು ಸಮುದ್ರ ಮಥನ ಮಾಡಿದ. ಒಂದು ಸಹಾಯವನ್ನು ಹೊಂದದೇ ತಾನೊಬ್ಬನೇ ಲೋಕವನ್ನು ಪ್ರಳಯದಿಂದ ಪರಿಹರಿಸುವ ಕಾರ್ಯವನ್ನೂ ಮಾಡಿದ. ಇದು ಸರ್ವಾ ಧಿಕನು ಮಾಡಿದ ಕೆಲಸವಷ್ಟೇ ? ಹಾಗೆ ನನ್ನ ಸಂಸಾರ ಪ್ರಳಯವನ್ನು

ಪರಿಹರಿಸುವುದಕ್ಕಾಗಿ ದೇವಿಯೊಡನೆ ತಿರುವಾಲಿಯಲ್ಲಿ ಆ ಸರ್ವೇಶ್ವರ ನಿಂತಿದ್ದಾನೆ. ಸರ್ವರ ಸರ್ವಾಪೇಕ್ಷಿತಗಳನ್ನು ನಡೆಸಿಕೊಡುವ ಆ ಸರ್ವೇಶ್ವರ ನನ್ನು ಬಾಯಾರಿದವನು ತಣ್ಣೀರನ್ನು ಪಡೆದುಕೊಳ್ಳುವಂತೆ ನಾನು ತಿರುನರೈ ಯೂರಿನಲ್ಲಿ ಪಡೆದುಕೊಂಡೆ—ಎನ್ನುತ್ತಾರೆ ಆಳ್ವಾರ್ ಅವರು.

**ತೂವಾಯ ಪುಳ್ ಊರ್‌ನ್ದು ವಂದು ತುರೈವೇೞವತ್**
**ಮೂವಾಮೈ ನಲ್‌ಹಿ ಮುದಲೈ ತುಣಿತ್ತಾನೈ**
**ತೇವಾತಿ ತೇವನೈ ಶೆಂಗಮುಲಕ್ಕಣ್ಣಾನೈ**
**ನಾವಾಯುಳ್ ಉಳಾನೈ ನರೈಯೂರಿಲ್ ಕಂಡೇನೇ ॥೩॥**

(ತೂವಾಯ ಪುಳ್ ಊರ್‌ನ್ದು) ಪರಿಶುದ್ಧವಾದ ಬಾಯಿಯುಳ್ಳ ಗರುಡ ನನ್ನು ವಾಹನವನ್ನಾಗಿ ಹೊಂದಿ (ತುರೈವಂದು) ಆ ಮಡುವಿನ ದಡಕ್ಕೆ ಬಂದು ಸೇರಿ (ವೇೞವತ್ ಮೂವಾಮೈ) ಗಜೇಂದ್ರನಿಗೆ ನೋವಾಗದಂತೆ (ನಲ್‌ಹಿ) ಕೃಪೆ ಮಾಡಿ (ಮುದಲೈತುಣಿತ್ತಾನೈ) ಮೊಸಳೆಯನ್ನು ಸೀಳಿ ಹಾಕಿದವನೂ. (ತೇವಾತಿ ತೇವನೈ) ನಿತ್ಯಸೂರಿಗಳಿಗೂ ನಾಯಕನಾದವನೂ, (ಶೆವ್ ಕಮಲಂ ಕಣ್ಣಾನೈ) ಕೆಂದಾವರೆ ಹೂವನ್ನು ಹೋಲುವ ನೇತ್ರಗಳನ್ನು ಳ್ಳವನೂ, (ನಾವಾಯ್ ಉಳಾನೈ) ತಿರುನಾವಾಯ್ ಎಂಬುವ ದಿವ್ಯ ಕ್ಷೇತ್ರ ದಲ್ಲಿರುವವನೂ ಆದ ನಮ್ಮ ಸ್ವಾಮಿಯನ್ನು (ನರೈಯೂರಿಲ್ ಕಂಡೇನ್) ತಿರುನರೈಯೂರಿನಲ್ಲಿ ಸಂದರ್ಶಿಸಿ ಸೇವಿಸಿದೆನು,

ಪ್ರಯೋಜನಾಂತರಪರರಿಗೆ ಹೇಗೆ ಉಪಕರಿಸಿದನೆಂಬುದನ್ನು ಹಿಂದಿನ ಪಾಶುರದಲ್ಲಿ ಹೇಳಿದರು. ಅನನ್ಯ ಪ್ರಯೋಜನನಾಗಿ ಭಗವಂತನಿಗೆ ಹೂವನ್ನು ಸಮರ್ಪಿಸುವುದಕ್ಕಾಗದೆ ನೊಂದ ಗಜೇಂದ್ರನ ದುಃಖವು ಹೋಗುವಂತೆ ಹೇಗೆ ಧಾವಿಸಿ ಬಂದು ಕಟಾಕ್ಷಿಸಿದನೆಂಬುದನ್ನು ಇಲ್ಲಿ ವರ್ಣಿಸಿದ್ದಾರೆ. ಸರ್ವೇ ಶ್ವರನು ಗರುಡಾರೂಢನಾಗಿ ಗರುಡನನ್ನು ನಡೆಸುವಾಗ ಆ ಗರುಡನು ಭಗವಂತನ ಸ್ಪರ್ಶಸುಖದಿಂದ ಆನಂದಗೊಂಡವನಾಗಿ, 'ನಮ್ಮ ಸ್ವಾಮಿಯ ಸ್ಪರ್ಶಸುಖ ಎಂಥದೋ !' ಎಂದು ಕೊಂಡಾಡುವನಂತೆ. 'ವೇದಾತ್ಮಾ' ಎಂದು ವಿಶ್ರುತ ನಾದ ಗರುಡನು ನಿರ್ದೋಷವಾದ ಶಬ್ದವನ್ನೇ ತನ್ನ ರೂಪವನ್ನಾಗಿ ಹೊಂದಿದ್ದಾನಂತೆ ! ಗರುಡನ ಸ್ವಾಭಾವಿಕ ವೇಗ ಸಾಲದ ಕಾರಣ ಅವನನ್ನು

ಎಳೆದುಕೊಂಡು ವೇಗವಾಗಿ ಧಾವಿಸಿದನಂತೆ ಸ್ವಾಮಿ ಆ ಸರೋವರದ ತೀರಕ್ಕೆ. ಹೂ ಬಾಡುವ ಮುನ್ನ ಭಗವಂತನ ಪಾದಗಳಿಗೆ ಅರ್ಪಿಸಬೇಕೆಂದು ನೊಂದ ಗಜೇಂದ್ರನ ಆಶೆಯನ್ನು ಸಫಲಗೊಳಿಸಿದ. ಆನೆಗೆ ಆಪತ್ತಾಗದಂತೆಯೂ ಮೊಸಳೆಗೆ ವಿಪತ್ತುಂಟಾಗುವಂತೆಯೂ ಸ್ವಾಮಿ ಅವೆರಡನ್ನೂ ದಡದ ಮೇಲೆ ಕೊಂಡು ಹೋಗಿ ಮೊಸಳೆಯನ್ನು ಸೀಳಿ ಹಾಕಿದ. ಆ ಮೊಸಳೆಯ ಶಾಪವನ್ನು ಹಾಗೆ ನಿರಸನ ಮಾಡಿ ನೀಗಿದ. ಹೀಗೆ ಕನಲಿದವನು ಆ ದೇವಾಧಿ ದೇವ. ಪರಮಪದದಂತೆ ಶೋಭಿಸುವ ತಿರುನರೈಯೂರಿನಲ್ಲಿ ಇಂಥ ಸ್ವಾಮಿಯನ್ನು ನಾನು ಕಂಡುಕೊಂಡೆ.

> **ಓಡಾ ಅರಿಆಯ್ ಇರಣಿಯನೈ ಊನ್ ಇಡಂದ**
> **ಶೇಡಾರ್ ಪೊೞಿಲ್ ಶೂೞ್ ತಿರುನೀರ್ ಮಲೈಯಾನೈ**
> **ವಾಡಾ ಮಲರ್ ತುೞಾಯ್ ಮಾಲೈ ಮುಡಿಯಾನೈ**
> **ನಾಡೋರುಂ ನಾಡಿ ನರೈಯೂರಿಲ್ ಕಂಡೇನೇ ॥೪॥**

(ಓಡಾ ಅರಿಆಯ್) ನಾಡಿನಲ್ಲಿ ಸಂಚರಿಸದ ವಿಲಕ್ಷಣವಾದ ನರಸಿಂಹರೂಪಿಆಗಿ (ಇರಣಿಯನ್ ಊನೈ ಇಡಂದ) ಹಿರಣ್ಯಕಶಿಪುವಿನ ದೇಹವನ್ನು ಸೀಳಿ ಬಿಸುಟವನೂ, (ಶೇಡು ಆರ್ ಪೊೞಿಲ್ಶೂೞ್) ಸಾಂದ್ರವಾದ ನೆರಳಿರುವ ತೋಪುಗಳಿಂದ ಸುತ್ತುವರಿಯಲ್ಪಟ್ಟ (ತಿರುನೀರ್ ಮಲೈಯನೈ) ತಿರುನೀರ್ ಮಲೆಯಲ್ಲಿ ಸಾನ್ನಿಧ್ಯ ಮಾಡಿರುವವನೂ, (ವಾಡಾಮಲರ್) ಸ್ವಲ್ಪವೂ ಬಾಡದ ಹೂಗಳನ್ನುಳ್ಳ (ತುೞಾಯ್ ಮಾಲೈ ಮುಡಿಯಾನೈ) ತುಲಸಿಯ ಮಾಲೆಯನ್ನು ಕಿರೀಟದಲ್ಲಿ ಧರಿಸಿಕೊಂಡಿರುವವನೂ ಆದ ನಮ್ಮ ಸ್ವಾಮಿಯನ್ನು (ನಾಳ್ ತೋರುಂ ನಾಡಿ ನರೈಯೂರಿಲ್ ಕಂಡೇನ್) ನಿತ್ಯವೂ ಹುಡುಕಿ ಅಲೆದಾಡಿ ನರೈಯೂರಿನಲ್ಲಿ ಕಂಡುಕೊಂಡೆ.

ಆನೆಗೆ ಬಂದ ಆಪತ್ತನ್ನು ಪರಿಹರಿಸಲು ಗರುಡಾರೂಢನಾಗಿ ಬಂದುದನ್ನು ಹಿಂದಿನ ಪಾಶುರದಲ್ಲಿ ಅನುಸಂಧಾನ ಮಾಡಿದರು. ಹಾಗೆ ದೇಶಾಂತರದಲ್ಲಿ ಬರಬೇಕಾದುದೇ ಇಲ್ಲದೆ ನೆನೆದ ಜಾಗದಲ್ಲಿಯೇ ಸನ್ನಿಹಿತನಾಗಿ ಆಶ್ರಿತನಿಗೆ ಉಪ ಕಾರ ಮಾಡಿದುದನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ. ಜಡ್ಡುಕಟ್ಟಿದ ಹಿರಣ್ಯ ಕಶಿಪುವಿನ ಕಠಿಣವಾದ ದೇಹವನ್ನು ಶ್ರೀ ನೃಸಿಂಹನಾಗಿ ಸೀಳಿ ಹಾಕಿದ

ಸ್ವಾಮಿ, 'ಇನ್ನೂ ಹೀಗೆಯೇ ಇರುವ ವಿರೋಧಿಗಳು ಆಶ್ರಿತರಿಗೆ ಉಂಟಾದರೆ ಮಾಡುವುದೇನು'—ಎಂದು ಆ ವಿರೋಧಿಗಳನ್ನು ಹೋಗಲಾಡಿಸುವುದ ಕ್ಕಾಗಿಯೂ, ಹಿರಣ್ಯ ಕಶಿಪುವಿನ ವಕ್ಷೋವಿದಾರಣ ಮಾಡಿದ ಆಯಾಸವೆಲ್ಲವೂ ತೀರುವುದಕ್ಕಾಗಿಯೂ ತಂಪಾದ ನೆರಳಿನಿಂದ ಕೂಡಿದ ತಿರುನೀರ್ ಮಲೈಯಲ್ಲಿ ಸನ್ನಿಹಿತನೇ ಆಗಿದ್ದಾನಂತೆ. ಜಗದ್ರಕ್ಷಣಕ್ಕಾಗಿ ಕಿರೀಟಧಾರಣವಾಡಿ ಮಾಲೆಯು ನ್ನಿಟ್ಟುಕೊಂಡಿರುವ ಆ ಸ್ವಾಮಿಯನ್ನು ಎಲ್ಲೆಲ್ಲೂ ಹುಡುಕಿ ಇಲ್ಲಿ ಕಂಡು ಕೊಂಡೆ—ಎನ್ನುತ್ತಾರೆ ಆಳ್ವಾರ್ ಅವರು.

> **ಕಲ್ಲಾರ್ ಮದಿಳ್ ಶೂಟ್ ಕಡಿ ಇಲಂಗೈ ಕಾರ್ ಅರಕ್ಕನ್**
> **ವಲ್ಲಾಹಂ ಕೀಳ ವರಿವೆವ್ ಶರಂ ತುರನ್ದ**
> **ವಿಲ್ಲಾನ್ನೈ ಶೆಲ್ವ ವಿಬೀಡಣರ್ಕ್ಕು ವೇರು ಆಹ**
> **ನಲ್ಲಾನ್ನೈ ನಾಡಿ ನರ್ಯೆಯೂರಿಲ್ ಕಂಡೇನೇ ॥೫॥**

(ಕಲ್ಲಾರ್ ಮದಿಳ್‌ಶೂಟ್) ಕಲ್ಲುಗಳಿಂದ ಕಟ್ಟಲ್ಪಟ್ಟ ಕೋಟೆಗಳಿಂದ ಆವೃತ ವಾಗಿ (ಕಡಿ) ರಕ್ಷಣೆ ಹೊಂದಿದುರ್ಭೇಧ್ಯವಾಗಿದ್ದ (ಇಲಂಗೈಕಾರ್ ಅರಕ್ಕನ್) ಲಂಕೆಯಲ್ಲಿದ್ದ ನೀಚನಾದ ರಾಕ್ಷಸರಾಜನ (ವಲ್‌ಆಹಂಕೀಳ) ಬಲಿಷ್ಠವಾದ ಶರೀರವು ನಾಶವಾಗುವಂತೆ (ವರಿವೆವ್‌ಶರಂತುರನ್ದ) ಸುಂದರವೂ ತೀಕ್ಷ್ಣವೂ ಆದ ಬಾಣಗಳನ್ನು ಪ್ರಯೋಗಿಸಿದ (ವಿಲ್ಲಾನ್ನೈ) ಶಾರ್ಙ್ಗಧನುಸ್ಸನ್ನುಳ್ಳವನೂ (ಶೆಲ್ವಂ ವಿಬೀಡಣರ್ಕ್ಕು) ಶ್ರೀಮಂತನಾದ ವಿಭೀಷಣನಿಗೆ (ವೇರು ಆಹ ನಲ್ಲಾನ್ನೈ) ವಿಲಕ್ಷಣವಾಗಿ ಪ್ರಿಯನಾದವನೂ ಆದ ನಮ್ಮ ಸ್ವಾಮಿಯನ್ನು (ನಾಡಿನರ್ಯೆ ಯೂರಿಲ್ ಕಂಡೇನ್) ಹುಡುಕಿ ನರ್ಯೆಯೂರಿನಲ್ಲಿ ಕಂಡುಕೊಂಡೆನು.

ತಂದೆಯೇ ಶತ್ರುವಾದಾಗ ಮಗನಿಗೆ ಒದಗಿದುದನ್ನು ಹಿಂದಿನ ಪಾಶುರ ದಲ್ಲಿ ಹೇಳಿದರು. ಇಲ್ಲಿ ಹಿರಿಯಣ್ಣನು ಶತ್ರುವಾದಾಗ ತಮ್ಮನಿಗೆ ಒದಗಿ ಬಂದುದನ್ನು ಅನುಸಂಧಾನ ಮಾಡಿದ್ದಾರೆ. ಬ್ರಹ್ಮಾಸ್ತ್ರಗಳೇ ಮೊದಲಾದವು ಗಳಿಂದಲೂ ಅಭೇದ್ಯವಾದ ಶರೀರವನ್ನವನು ವರಬಲದಿಂದ ಹೊಂದಿದ್ದನು. 'ದೀಪ್ತಪಾವಕ ಸಂಕಾಶೈಃ' ಎಂಬಂತಹ ಅಂಬುಗಳನ್ನು ಪ್ರಯೋಗಿಸಿದನವನು. 'ಅಂತರಿಕ್ಷಗತಃ ಶ್ರೀಮಾನ್'—ಎಂದು ಹೇಳಿದಂತೆ ರಾವಣ ಸಂಬಂಧದಿಂದ ಬಂದ ಐಶ್ವರ್ಯವನ್ನು ಬಿಟ್ಟು ಬಂದಾಗಲೇ ಅವನು 'ಶ್ರೀಮಾನ್' ಆದನು.

ವಿಭೀಷಣ ಶರಣಾಗತಿ ಮಾಡಿದಾಗ ಶ್ರೀರಾಮನ ಸಹಚರರಾದ ಸುಗ್ರೀವಾದಿಗಳು ಅವನನ್ನು ಸೇರಿಸಿಕೊಳ್ಳಬಾರದೆಂದು ವಾದಿಸಿದಾಗ ಶ್ರೀರಾಮ ತನ್ನ ಶರಣಾಗತ ರಕ್ಷಣೆಯ ವ್ರತವನ್ನು ಉದ್ಘೋಷಿಸಿ ಅವನೊಡನೆ ಸಮಾಗಮ ಹೊಂದಿದ. ಇಂಥ ಮಹೋದಾರನನ್ನು ಎಲ್ಲೆಲ್ಲೂ ಹುಡುಕಿ ತಿರುನರೈಯೂರಿನಲ್ಲಿ ನಾನು ಕಂಡುಕೊಂಡೆ ಎನ್ನುತ್ತಾರೆ ಆಳ್ವಾರ್ ಅವರು.

**ಉಂಬರ್ ಉಲಹೋಡು ಉಯಿರೆಲ್ಲಾಂ ಉಂದಿಯಿಲ್**
**ವಂಬು ಮಲರ್‌ಮೇಲ್ ಪಡೈತ್ತಾನೈ ಮಾಯೋನೈ**
**ಅಂಬು ಅನ್ನ ಕಣ್ಣಾಳ್ ಅಶೋದೈ ತನ್ ಶಿಂಗತ್ತೈ**
**ನಂಬನೈ ನಾಡಿ ನರೈಯೂರಿಲ್ ಕಂಡೇನೇ** ॥೬॥

(ಉಂಬರ್ ಉಲಹೋಡು) ದೇವತೆಗಳ ಲೋಕದೊಡನೆ (ಉಯಿರ್‌ಎಲ್ಲಾಮ್) ಬೇರೆ ಮನುಷ್ಯಾದಿ ಪ್ರಾಣಿಗಳನ್ನೆಲ್ಲಾ (ಉಂದಿಯಿಲ್) ತನ್ನ ಹೊಕ್ಕಳಿನಲ್ಲಿರುವ (ವಂಬುಮಲರ್ ಮೇಲ್) ಪರಿಮಳಭರಿತವಾದ ತಾವರೆ ಹೂವಿನಲ್ಲಿ (ಪಡೈತ್ತಾನೈ) ಸೃಷ್ಟಿಸಿದವನೂ, (ಮಾಯೋನೈ) ಆಶ್ಚರ್ಯವಾದ ಗುಣಚೇಷ್ಟಿತಗಳನ್ನುಳ್ಳವನೂ, (ಅಂಬು ಅನ್ನ ಕಣ್ಣಾಳ್ ಅಶೋದೈತನ್ ಶಿಂಗತ್ತೈ) ಅಂಬನ್ನು ಹೋಲುವ ಕಣ್ಣುಗಳನ್ನುಳ್ಳ ಯಶೋದಾದೇವಿಯ, ಸಿಂಹದ ಮರಿಯಂತಿರುವ ಮಗುವಾದವನೂ, (ನಂಬನೈ) ಆಶ್ರಿತರುಗಳು ನಂಬಲು ತಕ್ಕವನಾದವನೂ ಆದ ನಮ್ಮ ಸ್ವಾಮಿಯನ್ನು (ನಾಡಿನರೈಯೂರಿಲ್ ಕಂಡೇನ್) ಹುಡುಕಿ ನರೈಯೂರಿನಲ್ಲಿ ಕಂಡುಕೊಂಡೆನು.

ಚತುರ್ದಶಭುವನಗಳನ್ನೂ ಸೃಜಿಸುವ ಬ್ರಹ್ಮನಿಗೂ ಉತ್ಪಾದಕನಾಗಿದ್ದವನು ತನ್ನ ಮೇಲ್ಮೆಯನ್ನು ಎಣಿಸದೆ ಒಬ್ಬ ಗೊಲ್ಲತಿಗೆ ಮಗನಾಗಿದ್ದುದರಿಂದ ಉಂಟಾದ ಆಶ್ರಿತಪಾರತಂತ್ರ್ಯವನ್ನು ಈ ಪಾಶುರದಲ್ಲಿ ಅನುಸಂಧಾನ ಮಾಡಿದ್ದಾರೆ. ಬ್ರಹ್ಮನೇ ಮೊದಲಾದವರ ಸ್ಥಾನಗಳೊಡನೆ ಇತರ ಮನುಷ್ಯಾದಿಗಳನ್ನೂ ತನ್ನ ನಾಭಿಕಮಲದಲ್ಲಿ ತನ್ನ ಸಂಕಲ್ಪದಿಂದ ಉಂಟುಮಾಡಿದ ಆಶ್ಚರ್ಯಭೂತನಾದ ಸರ್ವೇಶ್ವರನು, ತನ್ನ ಸಂಕಲ್ಪದಿಂದಲೇ ನಿಜವಾಗಿ ಬಂದು ಅವತರಿಸಿದನು. ತನ್ನನ್ನು ಆಶ್ರಯಿಸಿದವರ ಕೈಯಲ್ಲಿ ತನ್ನನ್ನೇ ಒಪ್ಪಿಸಿಕೊಳ್ಳುವ ಸ್ವಭಾವದವನು ಅವನು. ಆಶ್ರಯಿಸಿದವರಿಗೆಲ್ಲಾ ಪರಮ ವಿಶ್ವಸನೀಯ ಆ

ಸರ್ವೇಶ್ವರ. ಸಂಸಾರದಲ್ಲಿದ್ದುಕೊಂಡೇ, ಅವನಲ್ಲಿ ವಿಶ್ವಾಸವಿಟ್ಟ ಕಾರಣ ಅವನನ್ನು ಪಡೆದುಕೊಂಡೆ.

**ಕಟ್ಟುಪಿರು ನೀಳ್‌ಶೋಲೈ ಕಾಂಡವತ್ತೈ ತೀಮುಊಟ್ಟಿ**
**ವಿಟ್ಟಾನೈ, ಮೆಯ್ಯಮುವರ್‌ನ್ದ ಪೆರುಮಾನೈ**
**ಮಟ್ಟುಪಿರು ಕರ್ಪಕತ್ತೈಮಾದರ್ಕು ಆಯ್‌ವಂಡುವರೈ**
**ನಟ್ಟಾನೈ, ನಾಡಿ ನರೈಯೂರಿಲ್ ಕಂಡೇನೇ ॥೭॥**

(ಕಟ್ಟುಪಿರು) ಬಲವಾದ ಕಾವಲನ್ನು ಹೊಂದಿದಂತಹದೂ (ನೀಳ್‌ಶೋಲೈ) ವಿಸ್ತಾರವಾದ ತೋಪುಗಳನ್ನುಳ್ಳದೂ ಆದ (ಕಾಂಡವತ್ತೈ) ಖಾಂಡವವೆನ್ನುವ ವನವನ್ನು (ತೀಮೂಟ್ಟಿವಿಟ್ಟಾನೈ) ಅಗ್ನಿಗೆ ಆಹಾರವನ್ನಾಗಿ ಕೊಟ್ಟವನೂ, (ಮೆಯ್ಯಂ ಅಮರ್‌ನ್ದ ಪೆರುಮಾನೈ) ತಿರುಮೆಯ್ಯವೆಂಬ ಕ್ಷೇತ್ರದಲ್ಲಿ ನಿತ್ಯವಾಸ ಮಾಡುತ್ತಿರುವ ಸ್ವಾಮಿಯಾದವನೂ, (ಮಟ್ಟುಪಿರು ಕರ್ಪಕತ್ತೈ) ಪರಿಮಳವು ಸಮೃದ್ಧವಾಗಿರುವ ಕಲ್ಪವೃಕ್ಷವನ್ನು (ಮಾದರ್‌ಕ್ಕಾಯ್) ಸತ್ಯಭಾಮಾದೇವಿಗಾಗಿ (ವಣ್‌ತುವರೈ ನಟ್ಟಾನೈ) ಸುಂದರವಾದ ದ್ವಾರಕಿಗೆ ತಂದು ಸ್ಥಾಪಿಸಿದವನೂ ಆದ ನಮ್ಮ ಸ್ವಾಮಿಯನ್ನು (ನಾಡಿ ನರೈಯೂರಿಲ್ ಕಂಡೇನ್) ಹುಡುಕಿ ತಿರುನರೈಯೂರಿನಲ್ಲಿ ಕಂಡುಕೊಂಡೆನು.

ಪರಮಾತ್ಮನು ಅವತರಿಸಿದಾಗ ಮಾಡಿದ ಅತಿಮಾನುಷ ಚೇಷ್ಟಿತಗಳನ್ನೂ, ಅವನ ಅವತಾರ ಪ್ರಭಾವವನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ.

ಇಂದ್ರನು ಖಾಂಡವ ವನಕ್ಕೆ ಕಟ್ಟುಕಾವಲನ್ನು ಇಟ್ಟಿದ್ದನು. ಅಗ್ನಿಯು ಬ್ರಾಹ್ಮಣವೇಷದಿಂದ ಬಂದು ಬೇಡಿದಾಗ ಕೃಷ್ಣಾರ್ಜುನರು ಅವನಿಗೆ 'ನೀನು ಇಂದ್ರನ ಖಾಂಡವ ವನವನ್ನು ಭುಂಜಿಸು' ಎಂದು ಹೇಳಿ ಅಲ್ಲಿ ಬೆಂಕಿ ಮೂಡಿಸಿದರು. ತಾನು ಸಮೀಪಿಸುವುದಕ್ಕೆ ಭಯಪಡುವವನು ಹೇಗೋ ಹಾಗೆ ದುಷ್ಟ ಮೃಗಗಳ ಮೇಲೆ ಬಿಟ್ಟ ಬೆಂಕಿಯನ್ನು. ಇನ್ನು ಯಾರಾದರೂ ಬೇಡುವವರುಂಟೋ ಏನೂ ಎಂದು ತಿರುಮೆಯ್ಯದಲ್ಲಿಯೇ ನಿತ್ಯವಾಸ ಮಾಡಿದ, ಸತ್ಯಭಾಮೆಗಾಗಿ ಇಂದ್ರನ ನಂದನ ವನದಿಂದ ಪಾರಿಜಾತ ವೃಕ್ಷವನ್ನು ಕಿತ್ತು ತಂದು ಸತ್ಯಭಾಮೆಯ ಅರಮನೆಯ ಹಿಂಭಾಗದಲ್ಲಿ ನೆಟ್ಟನು ಅದನ್ನು. 'ನನ್ನ ಅಪೇಕ್ಷಿತಗಳನ್ನು ಅನುಗ್ರಹಿಸಲು ತಿರುನರೈಯೂರಿನಲ್ಲಿ ನೆಲಸಿರುವ ಆ ಸ್ವಾಮಿಯನ್ನು ನಾನು ಸಾಕ್ಷಾತ್ಕರಿಸಿ ಸೇವಿಸಿದೆನು'—ಎನ್ನುತ್ತಾರೆ ಆಳ್ವಾರ್ ಅವರು,

ಮಣ್ಣಿನ್ ಮೀಪಾರಮ್ ಕೆಡುಪ್ಪಾನ್ ಮರಮನ್ನರ್
ಪಣ್ಣಿನ್ ಮೇಲ್‌ವನ್ದ ಪಡೈಎಲ್ಲಾಮ್ ಪಾರತತ್ತು
ವಿಣ್ಣಿನ್ ಮೀದೇರ ವಿಶಯನ್ ತೇರೂರ್‌ನ್ದಾನೈ
ನಣ್ಣಿನಾನ್ ನಾಡಿ ನರೈಯೂರಿಲ್ ಕಂಡೇನೇ ॥೮॥

(ಮಣ್ಣಿನ್ ಮೀಪಾರಮ್) ಭೂಮಿಯ ಮೇಲೆ ಉಂಟಾದ ಭಾರಗಳನ್ನು (ಕೆಡುಪ್ಪಾನ್) ಹೋಗಲಾಡಿಸುವುದಕ್ಕಾಗಿಯೂ, (ಮರಮ್ ಮನ್ನರ್) ವಿರೋಧಿಗಳಾದ ರಾಜರುಗಳ, (ಪಣ್ಣಿನ್ ಮೇಲ್‌ವಂದ ಪಡೈಎಲ್ಲಾಮ್) ಒಂದಾಗಿ ಸೇರಿ ಮೇಲೆ ಬಿದ್ದ ಸೇನೆಗಳೆಲ್ಲವೂ (ವಿಣ್ಣಿನ್ ಮೀದುಏರ) ವೀರ ಸ್ವರ್ಗವನ್ನು ಏರಿಹೋಗುವಂತೆ (ಪಾರತತ್ತು) ಭಾರತ ಸಂಗ್ರಾಮದಲ್ಲಿ (ವಿಶಯನ್ ತೇರ್ ಊರ್‌ನ್ದಾನ್ನೈ) ಅರ್ಜುನನ ರಥವನ್ನು ನಡಸಿದವನನ್ನು (ನಾನ್ ನಣ್ಣಿನಾಡಿ) ನಾನು ಆಶೆಪಟ್ಟು ಹುಡುಕಿ (ನರೈಯೂರಿಲ್ ಕಂಡೇನ್) ತಿರುನರೈಯೂರಿನಲ್ಲಿ ಸಾಕ್ಷಾತ್ಕಾರ ಮಾಡಿಕೊಂಡೆ.

ಎಲ್ಲವನ್ನೂ ಸಹಿಸುವ 'ಸರ್ವಂ ಸಹೆ' ಎನಿಸಿದ ಭೂದೇವಿಯು ನಾನು ಈ ದುಷ್ಕರ ಭಾರವನ್ನು ಸಹಿಸಲಾರೆ ಎಂದು ಬೇಡಲು ಆ ಭೂಭಾರವನ್ನು ಹೋಗಲಾಡಿಸುವುದಕ್ಕಾಗಿ ಯುದ್ಧವನ್ನು ಕೈಗೂಡಿಸಿದನವನು. 'ನ ಕಿಂಚಿತ್ಪರ್ವತಾ ಭಾರಂ ನಾಭಾರಂ ಸಪ್ತಸಾಗರಂ। ಸ್ವಾಮಿದ್ರೋಹಮಿದಂ ಭಾರಂ ಭಾರಂ ವಿಶ್ವಾಸ ಘಾತಕಂ' ಎನ್ನುವ ಭಾವ. ದ್ವೇಷವನ್ನೇ ಹೊಂದಿದ್ದ ಕರ್ಣದುರ್ಯೋಧನಾದಿಗಳು ಪರಿಕರಗಳೊಡನೆ ಮೇಲೆ ಬೀಳಲು ಅವರ ಪರಿಕರಗಳೆಲ್ಲವೂ ಮತ್ತೊಮ್ಮೆ ತಮ್ಮ ಊರಿಗೆ ಹಿಂದಿರುಗದೆ ವೀರಸ್ವರ್ಗವನ್ನೇ ಸೇರುವಂತೆ ಅರ್ಜುನನ ತೇರನ್ನು ನಡೆಸಿದನವನು. 'ಅವನನ್ನು ಪಡೆಯಲು ಆಶಿಸಿ ಆ ಆಶೆಗನುರೂಪವಾಗಿ ತಿರುನರೈಯೂರಿನಲ್ಲಿ ಅವನನ್ನು ಕಂಡುಕೊಂಡೆ' —ಎನ್ನುತ್ತಾರೆ ಆಳ್ವಾರ್ ಅವರು.

ಪೊಂಗುಮಿರು ನೀಳ್‌ಶೋದಿ ಪೊನ್ನಾಳಿ ತನ್ನೋಡುಂ
ಶಂಗೇರು ಕೋಲಂ ತಡಕ್ಕೈಪೆರುಮಾನ್ನೈ
ಕೊಂಗೇರು ಶೋಲೈ ಕುಡಂದೈ ಕಿಡಂದಾನ್ನೈ
ನಮ್‌ಕೋನ್ನೈ ನಾಡಿ ನರೈಯೂರಿಲ್ ಕಂಡೇನೇ ॥೯॥

(ಪೊಂಗು ಏರು) ಮೇಲೆ ಮೇಲೆ ಹೊಮ್ಮಿ ವರ್ಧಿಸುವ (ನೀಳ್‌ಶೋದಿ) ಅಪರಿಮಿತವಾದ ತೇಜಸ್ಸನ್ನುಳ್ಳ (ಪೊನ್‌ಆಟಿ ತನ್ನೋಡುಮ್) ಸುಂದರವಾದ ಸುದರ್ಶನ ಚಕ್ರದೊಡನೆ (ಶಂಗು ಏರು ಕೋಲಂ) ಪಾಂಚಜನ್ಯ ಶಂಖವು ನೆಲಸಿರುವ ಸುಂದರವಾದ (ತಡಕ್ಕೈ) ವಿಸ್ತಾರವಾದ ಶ್ರೀಹಸ್ತಗಳನ್ನುಳ್ಳವನೂ, (ಪೆರುಮಾನ್ಯೈ) ಹಿರಿಮೆಯನ್ನು ಹೊಂದಿದವನೂ, (ಕೊಂಗು ಏರು ಶೋಲೈ ಕುಡಂದ್ಯೆ ಕಿಡಂದಾನ್ಯೈ) ಮಕರಂದವು ಅಧಿಕವಾಗಿರುವ ತೋಪುಗಳನ್ನುಳ್ಳ ತಿರುಕ್ಕುಡಂದ್ಯೆ ಕ್ಷೇತ್ರದಲ್ಲಿ ಶಯಿನಿಸಿರುವನೂ ಆದ (ನಮ್ ಕೋನ್ಯೈ) ನಮ್ಮ ಸ್ವಾಮಿಯನ್ನು (ನಾಡಿ ನರ್ರೈಯೂರಿಲ್ ಕಂಡೇನ್) ಹುಡುಕಿ ತಿರುನರ್ರೈಯೂರಿನಲ್ಲಿ ಕಂಡುಕೊಂಡೆನು.

ಪ್ರವಾಹವು ಮೇಲೆ ಮೇಲೆ ಉಕ್ಕಿಬರುವಂತೆ ಹೊಮ್ಮಿಬರುವ ನಿರವಧಿಕವಾದ ತೇಜಸ್ಸನ್ನು ಹೊಂದಿರುವುದಾಗಿ ಸ್ಪೃಹಣೀಯವಾಗಿರುವ ಸುದರ್ಶನದೊಡನೆ ಶ್ರೀ ಪಾಂಚಜನ್ಯಕ್ಕೆ ನೆಲೆಮನೆಯಾಗಿರುವ ಸುಂದರವಾದ ತೋಳುಗಳನ್ನುಳ್ಳ ಸರ್ವೇಶ್ವರನವನು. ಆಭರಣಗಳಿಗೂ ಆಭರಣದೋಪಾದಿ ಇರುವ ತೋಳುಗಳು ಅವು. ನಿತ್ಯಸೂರಿಗಳಿಗಾಗಿ ಪರಮಪದದಲ್ಲಿರುವಂತೆ ನಮಗಾಗಿ ತಿರುನರ್ರೈಯೂರಿನಲ್ಲಿರುವವನಾಗಿದ್ದಾನೆ ಆ ನಮ್ಮ ಸ್ವಾಮಿ. ಪರಿಮಳವು ದಿನದಿನವೂ ವರ್ಧಿಸುತ್ತಿರುವ ತಿರುಕ್ಕುಡಂದ್ಯೆಯಲ್ಲಿ ಶಯಿನಿಸಿರುವ ಆ ನಮ್ಮ ಸ್ವಾಮಿಯನ್ನು ಕಾಣಬೇಕೆಂದು ಎಲ್ಲೆಲ್ಲೂ ಹುಡುಕಿ ಇಲ್ಲಿ ಕಂಡುಕೊಂಡೆ ಎನ್ನುತ್ತಾರೆ ಆಳ್ವಾರ್ ಅವರು.

**ಮನ್ನುಮದುರ್ರೈ ವಶುದೇವರ್ ವಾೞ್‌ಮುದಲ್ಯೈ**
**ನನ್ನರ್ರೈಯೂರ್ ನಿನ್ರನಂಬಿಯ್ಯೈ ವಂಬುಅವಿೞ್‌ತಾರ್**
**ಕಲ್ ನವಿಲುಂ ಶೋೞನ್ ಕಲಿಯನ್ ಒಲಿ ವಲ್ಲಾರ್**
**ಪೊನ್‌ಉಲಹಿಲ್ ವಾನವರ್ಕ್ಕು ಪುತ್ತೇೞಿರ್ ಆಹುವರೇ**

॥೧೦॥

(ಮನ್ನು ಮದುರ್ರೈ) ಭಗವತ್ಸಂಬಂಧವು ಒಂದು ದಿನವೂ ತಪ್ಪದೆ ನಿತ್ಯವಾಗಿರುವ ಮಧುರೆಯಲ್ಲಿ (ವಶುದೇವರ್‌ವಾೞ್‌ಮುದಲ್ಯೈ) ವಸುದೇವರ ಬಾಳ್ವಿಗೆ ತಾಯಿಬೇರಾಗಿ ಬಂದು ಜನಿಸಿದವನಾದ (ನಲ್‌ನರ್ರೈಯೂರ್ ನಿನ್ರನಂಬಿಯ್ಯೈ) ತಿರುನರ್ರೈಯೂರಿನಲ್ಲಿ ನೆಲಸಿರುವ ನಂಬಿಯನ್ನು (ವಂಬು ಅವಿೞ್ ತಾರ್) ಪರಿಮಳವು

ಪಸರಿಸುತ್ತಿರುವ ಮಾಲೆಯುನ್ನುಳ್ಳವರೂ (ಕಲ್ ನವಿಲುಂ ತೋಳಾನ್) ಬೆಟ್ಟವೇ ಎಂದು ಹೇಳಬಹುದಾದ ಭುಜಗಳನ್ನುಳ್ಳವರೂ ಆದ (ಕಲಿಯನ್) ತಿರುಮಂಗೈ ಆಳ್ವಾರ್ ಅವರು (ಒಲಿ) ಅನುಗ್ರಹಿಸಿದ ಈ ಪಾಶುರಗಳನ್ನು (ವಲ್ಲಾರ್) ಓದಬಲ್ಲವರು (ಪೊನ್ ಉಲಹಿಲ್) ಪರಮಪದಕ್ಕೆ ಹೋಗಿ ಸೇರಿದವರಾಗಿ (ವಾನವರ್ಕ್ಕು) ಅಲ್ಲಿರುವ ನಿತ್ಯಸೂರಿಗಳಿಗೆ (ಪುತ್ತೇಳಿರ್ ಆಹುವರ್) ಪೂಜ್ಯರಾಗುತ್ತಾರೆ.

ಈ ಮಧುರೆಗೆ ಭಗವತ್ಸಂಬಂಧ ನಿರಂತರವಾಗಿಯೇ ಇರುತ್ತಿದೆ. ಸಿದ್ಧಾಶ್ರಮವಾಗಿ, ಶ್ರೀ ವಾಮನನು ಇದ್ದು ತಪಸ್ಸುಮಾಡಿ, ಶ್ರೀ ಶತ್ರುಘ್ನನು ಬಂದು ಸೈನ್ಯದೊಡನೆ ನೆಲಸಿದ ದೇಶ ಇದು. ಸರ್ವೇಶ್ವರನು ಒಲಿದು ಬಂದು ಅವತರಿಸಿದ ಸ್ಥಳ ಇದು. ಆನೆಯು ರಮಿಸುವ ಅಡವಿಯಂತಹ ದೇಶ ಇದು. ಈ ಪರಮಾತ್ಮನು ಶ್ರೀ ವಸುದೇವರ ಸತ್ತೆಗೆ ನಿಮಿತ್ತಭೂತನಾದವನು. ಮಧುರೆಗಿಂತಲೂ ಹೆಚ್ಚಿನ ಚೆಲುವನ್ನುಳ್ಳ ತಿರುನರೈಯೂರಿನಲ್ಲಿ ಬಂದು ನೆಲಸಿದ ಆ ಕಲ್ಯಾಣಗುಣಪೂರ್ಣ. ಇಂಥ ಸ್ವಾಮಿಯನ್ನು ಕುರಿತು ತಿರುಮಂಗೈ ಆಳ್ವಾರ್ ಅವರು ಸ್ತುತಿಸಿದ ಪಾಶುರಗಳು ಇವು. ಇದನ್ನು ಅನುಸಂಧಾನ ಮಾಡುವವರು ನಿತ್ಯಸೂರಿಗಳಿಗೂ ಪೂಜನೀಯರಾಗುತ್ತಾರೆ.

---

### ಆರನೆಯ ಪತ್ತು–ಒಂಭತ್ತನೆಯ ತಿರುಮೊಳಿ

# ಪೆಡೈಯಡರ್ತ

## ಪ್ರವೇಶ

'ನಾನ್ ಶೆನ್ರು ನಾಡಿ ನರೈಯೂರಿಲ್ ಕಂಡೇನ್'— ಎಂದು ಆಶ್ರಯಣೀಯವಾದ ವಸ್ತುವನ್ನು ಈ ಸಂಸಾರಭೂಮಿಯಲ್ಲಿಯೇ ತಿರುನರೈಯೂರಿನಲ್ಲಿ ಪಡೆದುಕೊಂಡುದರಿಂದ ಉಂಟಾದ 'ಅಲಭ್ಯ ಲಾಭ'ದಿಂದ ಆಳ್ವಾರ್ ಅವರು ಹೃಷ್ಟರಾದರು. ಅವನನ್ನು ಹಾಗೆ ಕಂಡ ಮೇಲೆ – 'ಅವನ ಸ್ವರೂಪಕ್ಕೂ

ನಮ್ಮ ಸ್ವರೂಪಕ್ಕೂ ಅನುರೂಪವಾದ ವ್ಯಾಪಾರಗಳನ್ನು ಮಾಡಲೆಣಿಸು' — ಎಂದು ತಮ್ಮ ಮನಸ್ಸಿಗೆ ತಿಳಿಸಿಕೊಡುತ್ತಾರೆ. ತಿರುನರೈಯೂರಿನಲ್ಲಿ ತಿರ್ಯಕ್ಕುಗಳೂ ಸಹ ತಮ್ಮ ತಮ್ಮ ದಯಿತೆಯರನ್ನೇ ಪ್ರಧಾನವಾಗಿ ಹೊಂದಿವೆ. ಆದುದರಿಂದ ಅಲ್ಲಿರುವ ನಂಬಿಗೂ ಸಹ ದೇವಿಯೇ ಪ್ರಾಧಾನ್ಯ ಹೊಂದಿದವಳಾಗಿದ್ದಾಳೆ. ಆದುದರಿಂದ ಆ ದೇಶ ಆಶ್ರಯಣೀಯತೆಗೆ ಯಾವ ಕೊರೆಯನ್ನೂ ಹೊಂದಿಲ್ಲ. ಅತ್ಯತಿಶಯದ ಕಾರಣ ಈ ಆಳ್ವಾರವರು ಈ ಮುಂಚೆಯೇ ಅನೇಕ ಕಡೆ ಪ್ರಪತ್ತಿಮಾಡಿ ಆಗಿದೆ. ಈಗ ಅವನ ಭೋಗ್ಯತೆ ಯನ್ನು ಬಿಡಲಾಗದೆ ಹಲವು ಸಲ ಪ್ರಪತ್ತಿ ಮಾಡುತ್ತಾರೆ. 'ಸಕೃದೇವ' ಎಂಬುವುದಕ್ಕೆ ಇದು ವಿರೋಧವಾಗುವುದಿಲ್ಲವೇ ?—ಎಂದರೆ ಈ ಅಧಿಕಾರಿಗೆ 'ಸಕೃದೇವ' ಎಂಬುದು 'ವಿಳಂಬ ನಿಷೇಧಪರ'ವೇವಿನಾ ಆವೃತ್ತಿ ನಿಷೇಧ ಪರವಲ್ಲ. ಆವೃತ್ತಿ ನಿಷೇಧಪರವಾದರೂ ಸಹ ಭಕ್ತಿಯೋಗಿಗೆ ಹೇಗೋ ಹಾಗೆ ಅನೇಕ ಜನ್ಮಗಳ ಆವೃತ್ತಿಯ ಅಪೇಕ್ಷೆ ಇಲ್ಲದಿರುವುದರಿಂದ ಹೀಗೆ ಆಗಬಹುದು. ತಿರುನರೈಯೂರಿನಲ್ಲಿ ಸ್ವಾಮಿಯನ್ನು ಕಂಡಕೂಡಲೇ ತಾನು ನೆನೆದಂತೆಲ್ಲಾ ಅನುಭವಿಸಲು ಅಪೇಕ್ಷಿಸಿದವರಾಗಿ ಅದಕ್ಕಾಗಿ ಪ್ರಪತ್ತಿಯನ್ನುಳಿದು ಬೇರೆ ಮಾರ್ಗವಿಲ್ಲದುದರಿಂದ ಪ್ರಪತ್ತಿ ಮಾಡುತ್ತಾರೆ ಎಂದೂ ಹೇಳಬಹುದಾಗಿದೆ.

**ಪೆಡ್ಡೈ ಅಡರ್ತ ಮಡವನ್ನತ್ ಪಿರಿಯಾದು ಮಲರ್‌ಕ್ಕಮಲಂ**
**ಮಡಲೆಡುತ್ತು ಮದುನುಹರುಂ ವಯಲುಡುತ್ತ**
**ತಿರುನರೈಯೂರ್**
**ಮುಡೈಅಡರ್ತ ಶಿರನೇಂದಿ ಮೂವುಲಹುಂ ಪಲಿ ತಿರಿವೋನ್**
**ಇಡರ್ ಕೆಡುತ್ತ ತಿರುವಾಳನ್ ಇಣೈಯಡಿಯೇ ಅಡೈ ನೆಂಜೇ**
**॥೧॥**

(ಪೆಡ್ಡೈ ಅಡರ್ತ) ದಯಿತೆಯೊಡನೆ ಕೂಡಿದ (ಮಡ ಅನ್ನಂ) ಸುಂದರವಾದ ಹಂಸಪಕ್ಷಿಯು (ಪಿರಿಯಾದು) ಆ ದಯಿತೆಯನ್ನು ಅಗಲದೆ (ಕಮಲಂ ಮಲರ್ ಮಡಲ್ ಎಡುತ್ತು) ತಾವರೆ ಹೂವಿನಲ್ಲಿ ದಳಗಳನ್ನು ಕಳಚಿಹಾಕಿ (ಮದುನು ಹರುಂ) ಮಧುಪಾನ ಮಾಡುತ್ತಿರುವ (ವಯಲ್ ಉಡುತ್ತ ತಿರುನರೈಯೂರ್) ಗದ್ದೆಗಳಿಂದ ಸುತ್ತುವರಿಯಲ್ಪಟ್ಟ ತಿರುನರೈಯೂರಿನಲ್ಲಿರುವವನಾಗಿ, (ಮುಡೈ

ಅಡರ್ತ್ತ ತಿರಂ ಏಂದಿ) ದುರ್ಗಂಧದಿಂದ ಕೂಡಿದ ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದುಕೊಂಡು (ಮೂ ಉಲಹಂ ಪಲಿತಿರಿವೋನ್) ಮೂರುಲೋಕಗಳಲ್ಲಿಯೂ ಭಿಕ್ಷೆಬೇಡಿ ಅಲೆಯುತ್ತಿದ್ದ ಶಿವನ (ಇಡರ್ ಕೆಡುತ್ತ ತಿರುಆಳನ್) ಶಾಪವನ್ನು ಹೋಗಲಾಡಿಸಿದ ಶ್ರಿಯಃಪತಿಯ (ಇಣೈ ಅಡಿಯ್ಯೆ ನೆಂಜೇ ಅಡೈ) ಪಾದ ಗಳೆರಡನ್ನೂ, ಓ ಮನಸ್ಸೇ, ಆಶ್ರಯಿಸಿಬಿಡು.

ಒಂದು ಕ್ಷಣವೂ ದಯಿತೆಯನ್ನು ಹಂಸ ಅಗಲಿ ಹೋಗಲಾರದು. ಆ ದಯಿತೆಗೆ ಯಾವಾಗಲೂ ಹಂಸದ ಬಗೆಗೆ ಅತಿಶಂಕೆ ಇರುವುದಾಯಿತು. ಆದರಿಂದ ಯಾವಾಗಲೂ ಅದು ಆ ಹಂಸವನ್ನು ಬಿಡದೆ ಜೊತೆಯಲ್ಲಿಯೇ ಇರುತ್ತದಂತೆ. ಸ್ತ್ರೀ ಹಂಸದ ಧರ್ಮವೆಲ್ಲಾ ಅದಲು ಬದಲಾಗಿ ಹೋಯಿತು. ಇಲ್ಲಿ ಭೋಕ್ತೃ ಸಾಹಿತ್ಯವನ್ನು ಸೂಚನೆಮಾಡಿದೆ. ಇಂಥ ಗದ್ದೆಗಳಿಂದ ಕೂಡಿದುದು ಆ ಕ್ಷೇತ್ರ. ಅಲ್ಲಿರುವವನು ಅತ್ಯಂತ ವತ್ಸಲನಾಗಿದ್ದಾನೆ. ಎಂಥ ಅಭಿಮಾನಿಗಳಾದರೂ ಪ್ರವೇಶಿಸಬಹುದಾಗಿದೆ ಆ ಕ್ಷೇತ್ರ. ಬ್ರಹ್ಮಕಪಾಲವು ರುದ್ರನ ಕೈಗೆ ಅಂಟಿಕೊಂಡಿದ್ದು ಆದರಿಂದ ಅವನು ಕಷ್ಟಪಡುತ್ತಿದ್ದಾಗ ಅವನ ಶಾಪವನ್ನು ಹೋಗಲಾಡಿಸಿದ ಶ್ರೀಮಾನಾದ ನಾರಾಯಣನು ಇರುವ ದಿವ್ಯ ದೇಶ ಇದು. 'ಅಭಿಮಾನಿಗಳೂ ಆಪತ್ತಿಗೊಳಗಾದವರೂ ಆಶ್ರಯಿಸುವ ಶ್ರೀಪಾದಗಳನ್ನು ನೀನು ಆಶ್ರಯಿಸು'—ಎಂದು ಮನಸ್ಸಿಗೆ ಹೇಳುತ್ತಾರೆ.

**ಕಟಿಯಾರುಂ ಕನಶಂಗುಂ ಕೆಲಂದೆಂಗುಂ ನಿರ್ಕ್ಯೆಂದೇರಿ**
**ವಟಿಯಾರ ಮುತ್ತು ಈನ್ರುವಳಂಕೊಡುಕ್ಕುಂ**
**ತಿರುನಕ್ಕೈಯೂರ್**
**ಪಟಿಯಾರುಂ ವಿರಲರಕ್ಕನ್ ಪರುಮುಡಿಹಳನ್ಯೈ ಶಿದರ**
**ಅಟಲಾರುಂ ಶರಂತುರನ್ದಾನ್ ಅಡಿಇಣೈಯೇ ಅಡೈನೆಂಜೇ**
**॥ ೨ ॥**

(ಕಟಿಆರುಂ) ಕಾಲುವೆಗಳಲ್ಲಿ ತುಂಬಿರುವ (ಕನಶಂಗುಂ) ದೊಡ್ಡವಾದ ಶಂಖ ಗಳು (ಎಂಗುಂ ಕೆಲಂದು) ಎಲ್ಲ ಜಾಗಗಳಲ್ಲಿಯೂ ಬಂದು ಸೇರಿ (ನಿರ್ಕ್ಯೆಂದು ಏರಿ) ಸರದಿಯಂತೆ ತುಂಬಿ ಹಾಯ್ದು (ವಟಿಆರ) ಬೀದಿಗಳೆಲ್ಲಾ ತುಂಬುವಂತೆ (ಮುತ್ತು ಈನ್ರು) ಮುತ್ತುಗಳನ್ನು ಸುರಿಸಿ (ವಳಂ ಕೊಡುಕ್ಕುಂ) ಹೀಗೆ

ಐಶ್ವರ್ಯವನ್ನು ತುಂಬಿಕೊಡತಕ್ಕ (ತಿರುನರ್ರೈಯೂರ್) ತಿರುನರ್ರೈಯೂರಿನಲ್ಲಿ ಇರುವವನೂ, (ಪಟಿಆರುಂ) ಅತ್ಯಧಿಕವಾದ ನಿಂದೆಗೊಳಗಾಗಿ (ವಿರಲ್ ಅರಕ್ಕನ್) ಬಲಿಷ್ಠನಾಗಿದ್ದ ರಾವಣನ (ಪರು ಮುಡಿಹಳ್ ಅವ್ವೈಶಿದರ) ಪುಷ್ಟವಾದ ಹತ್ತು ತಲೆಗಳೂ ಚದರಿಬೀಳುವಂತೆ (ಅಟಿಲ್ ಆರುಂಶರಂ) ಬೆಂಕಿಗೆ ಸಮಾನವಾದ ಬಾಣಗಳನ್ನು (ತುರಂದಾನ್) ಪ್ರಯೋಗಿಸಿದವನೂ ಆದ ಪರಮಾತ್ಮನ (ಅಡಿ ಇಣ್ಣೈಯೇ ನೆಂಜೇ ಅಡೈ) ಪಾದಗಳೆರಡನ್ನೂ, ಎಲೈ ಮನಸ್ಸೇ, ಆಶ್ರಯಿಸು.

ಸಮುದ್ರದಿಂದ ಹಾಯ್ದು ಬಂದ ಶಂಖಗಳು ಕಾಲುವೆಗಳು ತುಂಬುವಂತೆ ಬಂದು ಸೇರುತ್ತವೆ. ಇವು ಸಂಕೇತ ಮಾಡಿಕೊಂಡಂತೆ ಜೊತೆಗೂಡಿ ಎಲ್ಲೆಲ್ಲಿಯೂ ತುಂಬಿ ಮಾರ್ಗಗಳಲ್ಲಿ ಎಲ್ಲೆಲ್ಲಿಯೂ ಮುತ್ತುಗಳೇ ತುಂಬಿರುವಂತೆ ಮುತ್ತುಗಳನ್ನು ಉಂಟು ಮಾಡಿ ನಿರತಿಶಯವಾದ ಸಂಪತ್ತನ್ನು ದೊರಕಿಸಿ ಕೊಡುತ್ತವೆ. ಜಗನ್ಮಾತೆಗೆ ದ್ರೋಹವೆಸಗಿ 'ನ ನಮೇಯಂ' ಎಂದಿದ್ದವನ ತಲೆಗಳನ್ನು ಉದ್ದೀಪ್ತವಾದ ಅಗ್ನಿಗೆ ಸದೃಶವಾದ ಬಾಣಗಳಿಂದ ಕತ್ತರಿಸಿ ಉರುಳಿಸಿದ ಸ್ವಾಮಿ ಇಲ್ಲಿ ಇರುತ್ತಿದ್ದಾನೆ. 'ಅವನ ಪಾದಗಳನ್ನು ವಿನೀತನಾಗಿ ಹೋಗಿ ಆಶ್ರಯಿಸು'—ಎಂದು ಮನಸ್ಸಿಗೆ ತಿಳಿಯ ಹೇಳುತ್ತಾರೆ.

**ಶುಳ್ಳೈಕೊಂಡ ಪಲಂಕನಿಹಳ್ ತೇನ್‌ಪಾಯ, ಕದಲಿಹಳಿನ್**
**ತಿಳ್ಳೈಕೊಂಡ ಪಟಿವರ್ ಕೆಟಿಮರ್ ತಿಹಟ್ ಶೋಲೈ**
**ತಿರುನರ್ರೈಯೂರ್**
**ವಳ್ಳೈಕೊಂಡ ವಣ್ಣತ್ತನ್ ಪಿನ್‌ತೋನ್ರಲ್, ಮೂಉಲಹೋಡು**
**ಅಳ್ಳೈವೆಣ್ಣೈ ಉಂಡಾನ್ ತನ್ ಅಡಿ ಇಣ್ಣೈಯೇ ಅಡೈನೆಂಜೇ**
**॥೩॥**

(ಶುಳ್ಳೈಕೊಂಡ) ಅನೇಕ ತೊಳೆಗಳನ್ನುಳ್ಳ (ಪಲಂಕನಿಹಳ್) ಹಲಸಿನ ಹಣ್ಣುಗಳಿಂದ (ತೇನ್‌ಪಾಯ) ಜೇನು ಹರಿಯುತ್ತಿರುವಂಥವೂ, (ಕದಲಿಹಳಿನ್) ಬಾಳೆಯ ಗಿಡಗಳಲ್ಲಿ (ತಿಳ್ಳೈಕೊಂಡ ಪಟಿವರ್) ಚೆನ್ನಾಗಿ ಬಲಿತ ಹಣ್ಣುಗಳು (ಕೆಟಿಮರ್) ದಟ್ಟವಾಗಿ ತುಂಬಿರುವಂಥ (ತಿಹಟ್‌ಶೋಲೈ) ಬೆಳಗುವ ತೋಟಗಳನ್ನುಳ್ಳ (ತಿರುನರ್ರೈಯೂರ್) ತಿರುನರ್ರೈಯೂರಿನಲ್ಲಿ, (ವಳ್ಳೈಕೊಂಡ ವಣ್ಣತ್ತನ್) ಬೆಳ್ಳಗಿರುವ ದೇಹಕಾಂತಿಯನ್ನುಳ್ಳ ಬಲರಾಮನ (ಪಿನ್ ತೋನ್ರಲ್)

ನಂತರ ಅವನ ತಮ್ಮನಾಗಿ ಜನಿಸಿದವನೂ, (ಮೂಉಲಕೋಡು) ಮೂರು ಲೋಕಗಳ ಜೊತೆಗೆ (ಅಳೈವೆಣ್ಣೆಯ್) ಮೊಸರು ಬೆಣ್ಣೆಗಳನ್ನೂ (ಉಂಡಾನ್ ತನ್) ಭುಜಿಸಿದವನೂ ಆಗಿ ಇರುತ್ತಿರುವ ಸರ್ವೇಶ್ವರನ (ಅಡಿಇಣೈಯೇ ನೆಂಜೇ ಅಡೈ) ಪದದ್ವಂದ್ವಗಳನ್ನು, ಎಲೈ ಮನಸ್ಸೇ, ಆಶ್ರಯಿಸಿ ಬಿಡು.

ಹಿಂದಿನ ಪಾಶುರದಲ್ಲಿ ಸರ್ವಾತ್ಮನಾ 'ನ ನಮೇಯಂ' ಎಂದು ಇರುವವರ ತಲೆಯನ್ನು ತೆಗೆದುಹಾಕುವವನು ಆ ಸರ್ವೇಶ್ವರ ಎಂದರು. ತನಗೆ ಅನುಕೂಲರಾದವರ ಕರಸ್ಪರ್ಶವನ್ನುಳ್ಳ ದ್ರವ್ಯವನ್ನು ಬಿಟ್ಟು ಮತ್ತಾವುದರಿಂದಲೂ ಅವನು ತೃಪ್ತನಾಗುವವನಲ್ಲವೆಂದು ಇಲ್ಲಿ ಹೇಳುತ್ತಾರೆ. ತಿರುನರೈಯೂರಿನಲ್ಲಿರುವ ಫಲಸಮೃದ್ಧಿಯು ಅಲ್ಲಿರುವವನ ಫಲಪ್ರದಾತೃತ್ವವನ್ನು ಸೂಚಿಸುತ್ತದೆ.

> ತುನ್ರು ಓಳಿ ತುಹಿಲ್ ಪಟಲಮ್ ತುನ್ನಿ ಎಂಗುಂ ಮಾಳಿಕೈ ಮೇಲ್
> ನಿನ್ರು ಆರ ವಾನ್‌ಮೂಡುಂ ನೀಳ್ ಶೆಲ್ವತ್ತಿರುನರೈಯೂರ್
> ಮನ್ರಾರಕ್ಕುಡಮಾಡಿ, ವರೈಎಡುತ್ತು, ಮಳೈತಡುತ್ತ
> ಕುನ್ರಾರುಂ ತಿರಳ್ ತೋಳನ್ ಕುರೈಕಟಲೇ ಅಡೈ ನೆಂಜೇ ॥೪॥

(ತುನ್ರು ಓಳಿ) ನಿಬಿಡವಾಗಿ ನೆಯ್ದ (ತುಹಿಲ್ ಪಟಲಂ) ಧ್ವಜ ಪಟಗಳ ಸಮೂಹಗಳು (ಮಾಳಿಕೈ ಮೇಲ್ ಎಂಗುಂ ತುನ್ನಿ) ಮಾಳಿಗೆಗಳ ಮೇಲೆ ಎಲ್ಲೆಲ್ಲಿಯೂ ಸಾಂದ್ರವಾಗಿ (ಆರ ನಿನ್ರು) ಹರಡಿದ್ದು (ವಾನ್‌ಮೂಡುಂ) ಆಕಾಶವನ್ನು ಮರೆ ಮಾಡಿಬಿಡುವುದಾಗಿದ್ದು (ನೀಳ್ ಶೆಲ್ವತ್ತು) ತುಂಬಿದ ಸಂಪತ್ತನ್ನುಳ್ಳ (ತಿರುನರೈಯೂರ್) ತಿರುನರೈಯೂರಿನಲ್ಲಿರುವವನೂ (ಮನ್ರು ಆರಕುಡಂ ಆಡಿ) ಬೀದಿಯ ವಿಸ್ತಾರವೆಲ್ಲಾ ತುಂಬಿರುವಂತೆ ಘಟನರ್ತನವನ್ನು ಆಡಿದವನೂ, (ವರೈ ಎಡುತ್ತು ಮಳೈ ತಡುತ್ತ) ಗೋವರ್ಧನ ಪರ್ವತವನ್ನು ಕೊಡೆಯಂತೆ ಎತ್ತಿ ಹಿಡಿದು ಮಳೆಯನ್ನು ತಡೆದವನೂ, (ಕುನ್ರಾರುಂ ತಿರಳ್‌ತೋಳನ್) ಬೆಟ್ಟವನ್ನು ಹೋಲುವಂತಹ ಬಲಿಷ್ಠವಾದ ತೋಳುಗಳನ್ನುಳ್ಳವನೂ ಆದ ಪರಮಾತ್ಮನ (ಕುರೈಕಟಲೇ) ಧ್ವನಿಸುವ ವೀರ ಕಡಗಗಳನ್ನು ಧರಿಸಿರುವ ಶ್ರೀಪಾದಗಳನ್ನು (ನೆಂಜೇ ಅಡೈ) ಎಲೈ ಮನಸ್ಸೇ, ಹೋಗಿ ಆಶ್ರಯಿಸು.

ಸ್ವಾಮಿಯು ಇರುತ್ತಿರುವ ತಿರುನರೈಯೂರು ನಿರವಧಿಕವಾದ ಸಂಪತ್ತನ್ನುಳ್ಳುದಾಗಿದೆ. ಆಕಾಶವೇ ಕಾಣದೇ ಇರುವಂತೆ ಆ ಆಕಾಶವನ್ನು ಅಲ್ಲಿ ಮಾಳಿಗೆಗಳ ಮೇಲೆ ಕಟ್ಟಿರುವ ಧ್ವಜಗಳು ಮರೆಸುತ್ತವೆ. ಹಿಂದಿನ ಪಾಶುರದಲ್ಲಿ ಆಶ್ರಿತರ ಕರಸ್ಪರ್ಶವುಳ್ಳ ದ್ರವ್ಯವೇ ಅವನಿಗೆ ಧಾರಕವೆಂದರು. ಈ ಪಾಶುರದಲ್ಲಿ ಆಶ್ರಿತರಿಗೆ ಏನಾದರೂ ಆಪತ್ತುಂಟಾದರೆ ಬೆಟ್ಟವನ್ನಾದರೂ ಮೇಲೆತ್ತಿ ಹಿಡಿದು ಅದನ್ನು ಪರಿಹರಿಸುವವನು ಆ ಕ್ಷೇತ್ರದಲ್ಲಿರುವವನು ಎನ್ನುತ್ತಾರೆ. 'ಅಂಥವನ ಪಾದಗಳನ್ನು ಆಶ್ರಯಿಸು'—ಎಂದು ಮನಸ್ಸಿಗೆ ಉಪದೇಶಿಸುತ್ತಾರೆ.

**ಅಹಿಲ್ ಕರಡುಂ ಶಂದನಮುಂ ಅಮ್‌ಪೊನ್ನುಂ ಅಣಿಮುತ್ತುಂ**
**ಮಿಹಕ್ಕೊಣರ್‌ನ್ದು ತಿರೈ ಉಂದುಂ ವಿಯನ್‌ಪೊನ್ನಿ**
**ತಿರುನರೈಯೂರ್**
**ಪಹಲ್ ಕರನ್ದ ಶುಡರಾಟಿಪಡೈಯಾನ್ ಇವ್ವುಲಹೇಟುಂ**
**ಪುಹಕ್ಕರನ್ದ ತಿರುವಯತ್ತಿನ್ ಪೊನ್ನಡಿಯೇ ಅಡೈನೆಂಜೇ**
**॥೫॥**

(ಅಹಿಲ್ ಕರಡುಂ) ಅಹಿಲ್ ಮರದ ತುಂಡಗಳನ್ನೂ (ಶಂದನಮುಂ) ಶ್ರೀಗಂಧದ ಮರದ ತುಂಡಗಳನ್ನೂ (ಅಮ್‌ಪೊನ್ನುಂ) ಸುಂದರವಾದ ಚಿನ್ನವನ್ನೂ, (ಅಣಿಮುತ್ತುಂ) ಸುಂದರವಾದ ಮುತ್ತುಗಳನ್ನೂ (ತಿರೈ) ಅಲೆಗಳು (ಮಿಹ ಕೊಣರ್‌ನ್ದು) ಅತ್ಯಧಿಕವಾಗಿ ರಾಶಿಮಾಡಿಕೊಂಡು (ಉಂದುಂ) ದಡದ ಮೇಲೆ ತಂದುಹಾಕುವ (ವಿಯನ್‌ಪೊನ್ನಿ) ಆಶ್ಚರ್ಯಕರವಾದ ಕನಕಸರಿತ್ತನ್ನುಳ್ಳ (ತಿರುನರೈಯೂರ್) ತಿರುನರೈಯೂರಿನಲ್ಲಿರುವವನೂ, (ಪಹಲ್‌ಕರಂದ) ಭಾರತ ಸಂಗ್ರಾಮದಲ್ಲಿ ಸೂರ್ಯನನ್ನು ಮರೆಸಿದ (ಶುಡರ್ ಆಟಿಪಡೈಯಾನ್) ಉಜ್ವಲವಾದ ಸುದರ್ಶನ ಚಕ್ರವನ್ನು ಆಯುಧವನ್ನಾಗಿ ಹೊಂದಿದವನೂ, (ಇವ್ವುಲಹು ಏಟುಂ) ಈ ಲೋಕಗಳೆಲ್ಲವನ್ನೂ (ಪುಹಕರಂದ) ತನ್ನೊಳಗಿಟ್ಟು ಮರೆಮಾಡಿದ (ತಿರುವಯತ್ತಿನ್) ಉದರವನ್ನುಳ್ಳವನೂ ಆದ ನಮ್ಮ ಸ್ವಾಮಿಯ (ಪೊನ್ ಅಡಿಯೇ ನೆಂಜೇ ಅಡೈ) ಚೆಲುವಡಿಗಳನ್ನೇ ಎಲೈ ಮನಸ್ಸೇ, ಆಶ್ರಯಿಸು.

ಒಂದು ಊರಿಗೆ ಬಂದ ವರ್ಷಪ್ರಳಯವನ್ನು ಹೋಗಿಸಿದ ರೀತಿಯನ್ನು ಹಿಂದಿನ ಪಾಶುರದಲ್ಲಿ ಹೇಳಿದರು. ಈ ಪಾಶುರದಲ್ಲಿ ಲೋಕಕ್ಕೇ ಬಂದ ಪ್ರಳಯದ ಕೈಗೆ ಸಿಕ್ಕದಂತೆ ಎಲ್ಲವನ್ನೂ ತನ್ನ ಉದರದಲ್ಲಿಟ್ಟುಕೊಂಡು ರಕ್ಷಿಸಿದ ಬಗೆಯನ್ನು ಕೊಂಡಾಡಿದ್ದಾರೆ. ಕನಕಸರಿತ್ತು ತಳ್ಳಿಕೊಂಡು ಬಂದು ದಡದ ಮೇಲೆ ರಾಶಿರಾಶಿಯಾಗಿ ಹಾಕುವ ಶ್ರೀಗಂಧದ ಕೊರಡುಗಳು, ಚಿನ್ನ ಮುತ್ತುಗಳು ಎಷ್ಟು ಅಪಾರವಾಗಿವೆ ಎಂದರೆ ಅಲ್ಲಿರುವವರು ಅಷ್ಟನ್ನೂ ಉಪಯೋಗಿಸುವುದಕ್ಕೆ ಆಗುವುದೇ ಇಲ್ಲವಂತೆ. ಸುದರ್ಶನ ಚಕ್ರದ ನಿರವಧಿಕವಾದ ತೇಜಸ್ಸಿನಿಂದ ಆದಿತ್ಯನ ತೇಜಸ್ಸನ್ನು ಮರೆಸಿದನಂತೆ. ಆ ಸುದರ್ಶನದ ತೇಜಸ್ಸನ್ನು ಕಣ್ಣಿಂದ ನೋಡುವುದಕ್ಕಾಗದ ಕಾರಣ ಕತ್ತಲೆ ಕವಿದಂತಾಯಿತು. ತನ್ನನ್ನು ಆಶ್ರಯಿಸಿದವರನ್ನು ಒಳಗಿಟ್ಟುಕೊಂಡು ತನ್ನನ್ನೇ ಪ್ರಳಯಕ್ಕೆ ಲಕ್ಷ್ಯವನ್ನಾಗಿ ಮಾಡಿದ ಆ ಮಹೋದಾರನ ಶ್ರೀಪಾದಗಳನ್ನು ಆಶ್ರಯಿಸು ಎನ್ನುತಾರೆ.

**ಪೊನ್‌ಮುತ್ತುಂ ಅರಿಉಹಿರುಮ್ ಪುಟ್ಕೈಕ್ಕೆ ಮಾಕರಿ**
**ಕೋಡುಮ್**
**ಮಿನ್ನ ತತಿಣ್‌ರೈಉಂದುಂ ನಿಯೆನ್‌ಪೊನ್ನಿ ತಿರುನರೈಯೂರ್**
**ಮಿನ್ನೊತ್ತ ನುಣ್‌ಮರುಂಗುಲ್ ಮೇಲ್ ಇಯಲ್ಲೈ**
**ತಿರುಮಾರ್ ಪಿಲ್**
**ಮನ್ನ ಶಾನ್‌ವೈತ್ತು ಉಹಂದಾನ್ ಮಲರಡಿಯೇ ಅಡ್ಕೆನೆಂಜೇ**
**॥೬॥**

(ಮಿನ್ನ) ನದಿಯ ಮೇಲ್ಭಾಗದಲ್ಲಿ ಮಿಂಚು ಕಾಣಿಸಿಕೊಂಡಾಗಲೇ (ಪೊನ್ ಮುತ್ತುಂ) ಚಿನ್ನವನ್ನೂ ಮುತ್ತುಗಳನ್ನೂ (ಅರಿ ಉಹಿರುಂ) ಸಿಂಹಗಳ ನಖಗಳನ್ನೂ (ಪ್ರುಟ್ಕೈಕ್ಕೆ) ರಂಧ್ರವಿರುವ ತುದಿಗೈಯನ್ನುಳ್ಳ (ಮಾಕರಿಕೋಡುಂ) ದೊಡ್ಡ ದೊಡ್ಡ ಆನೆಗಳ ಕೊಂಬುಗಳನ್ನೂ (ತಣ್‌ತಿರೈ ಉಂದುಂ) ತಣ್ಣಗಿರುವ ಅಲೆಗಳ ಮೂಲಕ ಕೊಚ್ಚಿಕೊಂಡು ಬರುವ (ವಿಯನ್‌ಪೊನ್ನಿ ತಿರುನರೈಯೂರ್) ಆಶ್ಚರ್ಯವಾದ ಕನಕಸರಿತ್ತನ್ನು ಉಳ್ಳ ತಿರುನರೈಯೂರಿನಲ್ಲಿರುವವನೂ, (ಮಿನ್ ಒತ್ತ ನುಣ್‌ಮರುಂಗುಲ್) ಮಿಂಚನ್ನು ಹೋಲಿ ಅತಿಸೂಕ್ಷ್ಮವಾದ ಸೊಂಟವನ್ನುಳ್ಳವಳಾಗಿ (ಮೇಲ್ ಇಯಲ್ಲೈ) ಸೌಕುಮಾರ್ಯವನ್ನು ಸ್ವಭಾವವಾಗಿ ಉಳ್ಳ ಶ್ರೀ ಮಹಾಲಕ್ಷ್ಮಿಯನ್ನು (ತಿರುಮಾರ್ ಪಿಲ್) ತನ್ನ ವಕ್ಷಃಸ್ಥಲದಲ್ಲಿ

(ಮನ್ನತಾನ್ ವೈತ್ತು) ಹೊಂದಿರುವಂತೆ ಧರಿಸಿಕೊಂಡು (ಉಹಂದಾನ್) ಸಂತೋಷಗೊಂಡವನೂ ಆದ ಪರಮಾತ್ಮನ (ಮಲರ್ ಅಡಿಯೇ ನೆಂಜೇ ಅಡೈ) ಪಾದಕಮಲಗಳನ್ನೇ, ಎಲೈ ಮನಸ್ಸೇ, ಆಶ್ರಯಿಸು.

ಕನಕಸರಿತ್ತು ಬೆಟ್ಟಗಳಲ್ಲಿ ಉಂಟಾಗುವ ಚಿನ್ನವನ್ನೂ, ಬಿದಿರುಗಳಿಂದ ಉದುರಿದ ಮುತ್ತುಗಳನ್ನೂ, ಸಿಂಹಗಳ ನಖಗಳನ್ನೂ, ಆನೆಯ ದಂತಗಳನ್ನೂ ತನ್ನ ಪ್ರವಾಹದಲ್ಲಿ ಕೊಚ್ಚಿಕೊಂಡು ಬಂದು ತಿರುನರೈಯೂರಿನಲ್ಲಿ ದಡದ ಮೇಲೆ ರಾಶಿ ಹಾಕುತ್ತದೆ. ಅಲ್ಲಿರುವ ಸ್ವಾಮಿ ಯಾವಾಗಲೂ ತನ್ನ ವಕ್ಷಃ ಸ್ಥಲದಲ್ಲಿ 'ನ ಕಶ್ಚಿನ್ನಾಪರಾಧ್ಯತಿ' ಎಂದು ಹೇಳುವವಳಾದ ಶ್ರೀದೇವಿಯನ್ನು ಧರಿಸಿದ್ದಾನೆ. ಆದುದರಿಂದ ನಮ್ಮ ದೋಷಗಳನ್ನು ಅವನು ಎಣಿಸುವನೋ ಏನೋ ಎಂಬ ಆತಂಕವಿಲ್ಲದೆ ಅವನ ಶ್ರೀಪಾದಗಳನ್ನು ಆಶ್ರಯಿಸಬಹುದಾಗಿದೆ.

> ಶೀರ್ ತಟ್ಟಿತ್ತ ಕದಿರ್ ಶೆನ್ನೆಲ್ ಶೆಂಗಮಲತ್ತಿಡೈ ಇಡೈಯಿಲ್
> ಪಾರ್ ತಟ್ಟಿತ್ತು ಕುರುಂಬು ಓಂಗಿ ಪಯ್ರ್ವಿಳೈಕ್ಕುಂ
> ತಿರುನರೈಯೂರ್
> ಕಾರ್ ತಟ್ಟಿತ್ತ ತಿರುವುರುವನ್ ಕಣ್ಣಪಿರಾನ್
> ವಿಣ್ಣವರ್‌ಕೋನ್
> ತಾರ್‌ತಟ್ಟಿತ್ತ ತುಳಾಯ್ ಮುಡಿಯನ್ ತಳಿರಡಿಯೇ
> ಅಡೈನೆಂಜೇ ॥೭॥

(ಶೀರ್ ತಟ್ಟಿತ್ತ ಕದಿರ್) ಅತ್ಯಂತ ಸುಂದರವಾದ ತೆನೆಗಳನ್ನುಳ್ಳ (ಶೆನ್ನೆಲ್) ಕೆಂಭತ್ತದ ಪಯಿರುಗಳೂ ನಡುನಡುವೆ (ಶೆಂಗಮಲಂ) ಕೆಂದಾವರೆಗಳೂ (ಇಡೈ ಇಡೈಯಿಲ್) ನಡುನಡುವೆ (ಕರುಂಬು) ಕಬ್ಬುಗಳೂ (ಓಂಗಿ ಪಾರ್ ತಟ್ಟಿತ್ತು) ಉದ್ದವಾಗಿ ಬೆಳೆದು ನೆಲದ ಮೇಲೆ ಒರಗುವಂತೆ ಬಾಗಿ (ಪಯನ್ ವಿಳೈಕ್ಕುಂ) ಫಲಗಳನ್ನು ಕೊಡುವುವಾದ (ತಿರುನರೈಯೂರ್) ತಿರುನರೈ ಯೂರಿನಲ್ಲಿರುವವನೂ, (ಕಾರ್‌ತಟ್ಟಿತ್ತ) ಕಾಳಮೇಘವನ್ನು ಹೋಲುವ (ತಿರುಉರುವನ್) ದಿವ್ಯಮಂಗಳ ವಿಗ್ರಹವನ್ನುಳ್ಳವನೂ, (ವಿಣ್ಣವರ್ ಕೋನ್) ದೇವಾಧಿದೇವನೂ, (ತಾರ್‌ತಟ್ಟಿತ್ತ ತುಳಾಯ್ ಮುಡಿಯನ್) ಹೂಗಳಿಂದ ತುಂಬಿರುವ ತುಲಸೀಮಾಲೆಯನ್ನು ಮುಡಿಯಲ್ಲಿ ಧರಿಸಿರುವವನೂ ಆದ

(ಕಣ್ಣಪಿರಾನ್) ಕೃಷ್ಣಪರಮಾತ್ಮನ (ತಳಿರ್ ಅಡಿಯೇ ನೆಂಜೇ ಅಡೈ) ಪದ ಪಲ್ಲವಗಳನ್ನು ಎಲೈ ಮನಸ್ಸೇ, ಆಶ್ರಯಿಸು.

ಚರಣಶಬ್ದದಿಂದ ಉಪಲಕ್ಷಿತವಾದ ದಿವ್ಯಮಂಗಳ ವಿಗ್ರಹದ ವೈಲಕ್ಷಣ್ಯ ವನ್ನು ಉಳ್ಳವನೂ ಹಾಗೆಯೇ ಎಲ್ಲರನ್ನೂ ಉಜ್ಜೀವನಗೊಳಿಸಿ ಅದರಿಂದ ಕೃತಾರ್ಥನಾಗಿಅನುಪಮವಾದ ತುಲಸೀಮಾಲೆಯನ್ನು ಧರಿಸಿರುವವನೂ ಆದ ಸರ್ವೇಶ್ವರನನ್ನು ಆಶ್ರಯಿಸು ಎಂದು ಮನಸ್ಸಿಗೆ ಉಪದೇಶಿಸುತ್ತಾರೆ. ಆ ತಿರು ನರೈಯೂರಿನಲ್ಲಿನ ಸಸ್ಯಸಮೃದ್ಧಿಯನ್ನೂ ಪುಷ್ಪಸಮೃದ್ಧಿಯನ್ನೂ ಕೊಂಡಾಡಿ ದ್ದಾರೆ. ಚೆಲುವಾಂತ ಗದ್ದೆಗಳಲ್ಲಿ ಭತ್ತದಪಯಿರುಗಳು ತೆನೆಗಳಿಂದ ಶೋಭಿಸಿದರೆ ಹಾಗೆಯೇ ಇರುವ ಕೆಂದಾವರೆಗಳೂ ಕಬ್ಬಿನ ಗದ್ದೆಗಳೂ ಎಲ್ಲೆಲ್ಲೂ ದರ್ಶನೀಯ ವಾಗಿ ಶೋಭಿಸಿವೆ. ಅವುಗಳನ್ನು ನೋಡುತ್ತಲೇ ಇರಬೇಕೆಂಬ ಆಶೆಯನ್ನವು ಉಂಟುಮಾಡುತ್ತವೆಯಂತೆ. ಆ ಕ್ಷೇತ್ರದಲ್ಲಿರುವ ಸ್ವಾಮಿ ತಾನು ಮುಡಿಯಲ್ಲಿ ಧರಿಸಿರುವ ಶ್ರೀ ತುಲಸೀದಾಮದಿಂದ ತಾನೇ ಉಭಯವಿಭೂತಿ ನಾಯಕನೆಂಬು ದನ್ನು ತೋರಿಕೊಡುವಂತಿದೆ.

**ಕುಲೈ ಆರ್‌ನ್ದ ಪಟುಕ್ಕಾಯುಂ ಪಶುಂಗಾಯುಂ ಪಾಳೈಮುತ್ತುಂ**
**ತಲೈ ಆರ್‌ನ್ದ ಇಳಂಕಮುಕಿನ್ ತಡಂಶೋಲೈ ತಿರುನರೈಯೂರ್**
**ಮಲೈ ಆರ್‌ನ್ದ ಕೋಲಂ ಶೇರ್ ಮಣಿಮಾಡಂ ಮಿಹಮನ್ನಿ**
**ನಿಲೈಆರನಿನ್ರಾನ್ ತನ್ ನೀಳ್‌ಕಟಲೇ ಅಡೈ ನೆಂಜೇ ॥೮॥**

(ಕುಲೈಆರ್‌ನ್ದ) ಗೊಂಚಲು ಗೊಂಚಲಾಗಿ ತುಂಬಿರುವ (ಪಟುಕ್ಕಾಯುಂ) ಹಣ್ಣಾದ ಕಾಯಿಗಳನ್ನೂ (ಪಶುಂಗಾಯುಂ) ಹಣ್ಣಾಗುವ ದೋರುಕಾಯಿಗ ಳನ್ನೂ (ಪಾಳೈ ಮುತ್ತುಂ) ಹೊಂಬಾಳೆಗಳಲ್ಲಿ ಉಂಟಾದ ಮುತ್ತುಗಳನ್ನೂ (ತಲೈ ಆರ್‌ನ್ದ) ತಲೆಗಳಲ್ಲಿ ತುಂಬಿಕೊಂಡಿರುವಂಥ (ಇಳಕಮುಕಿನ್) ಎಳೆಯ ಅಡಕೆಯ ಮರಗಳನ್ನುಳ್ಳ (ತಡಶೋಲೈ ತಿರುನರೈಯೂರ್) ತಂಪಾದ ತೋಟಗಳಿಂದ ಸುತ್ತುವರಿಯಲ್ಪಟ್ಟಿರುವ ತಿರುನರೈಯೂರಿನಲ್ಲಿರುವವನೂ, (ಮಲೈ ಆರ್‌ನ್ದ ಕೋಲಂ ಶೇರ್) ಬೆಟ್ಟವನ್ನು ಹೋಲುತ್ತಾ ಸೌಂದರ್ಯವನ್ನುಳ್ಳ (ಮಣಿ ಮಾಡಂ ಮಿಹಮನ್ನಿ) ಮಣಿಮಾಡ ಕೋಯಿಲಿನಲ್ಲಿ ಅತ್ಯಧಿಕವಾಗಿ ಹೊಂದಿ ಕೊಂಡು (ನಿಲೈ ಆರ ನಿನ್ರಾನ್‌ತನ್) ಸ್ಥಿರವಾಗಿ ಇರುವವನೂ ಆದ ಪರಮಾತ್ಮನ

(ನೀಳ್ ಕಟಿಲೇ ನೆಂಜೇ ಅಡೈ) ನೀಡಿದ ಶ್ರೀಪಾದಗಳನ್ನೇ, ಎಲೈ ಮನಸ್ಸೇ, ಆಶ್ರಯಿಸು.

ಆ ತಿರುನರೈಯೂರಿನಲ್ಲಿರುವ ಅಡಿಕೆ ತೋಟಗಳ ಚೆಲುವು ಅನ್ಯಾದೃಶವಾದುದು. ಮಾಗಿದ ಕಾಯಿಗಳ ಗೊಂಚಲುಗಳನ್ನೂ ಮಾಗುತ್ತಿರುವ ಕಾಯಿಗಳ ಗೊಂಚಲುಗಳನ್ನೂ ಅಡಿಕೆ ಮರಗಳು ಹೊಂದಿವೆಯಂತೆ. ಒಂದೇ ಕಾಲದಲ್ಲಿ ಪ್ರಥಮಾವಸ್ಥೆಯನ್ನೂ ಚರಮಾವಸ್ಥೆಯನ್ನೂ ಕಂಡು ಆನಂದಿಸಬಹುದಾಗಿದೆ ಅಲ್ಲಿ. ಅವತಾರ ಕಾಲದಲ್ಲಿ ಮೈದೋರಿ ಮರೆಯಾಗಿಬಿಡುವಂತೆ ಮರೆಯಾಗದೆ ಪರ್ವತೋಪಮವಾಗಿ ದರ್ಶನೀಯವಾದ ಮಣಿಮಾಡಕ್ಕೋಯಿಲಿನಲ್ಲಿ ಆ ಸ್ವಾಮಿ ದೃಢವಾಗಿ ನೆಲಸಿದ್ದಾನೆ. ಮಿಗಿಲಾದ ಸೌಂದರ್ಯವನ್ನುಳ್ಳ ಆ ಪರಮಾತ್ಮನ ಶ್ರೀಪಾದಗಳು ತಮ್ಮ ಅಪರಿಚ್ಛಿನ್ನತ್ವ, ಪಾವನತ್ವ, ಭೋಗ್ಯತ್ವ—ಇವುಗಳಿಂದ ಅತ್ಯಂತ ವಿಮುಖರಾದವರನ್ನೂ ವಶಪಡಿಸಿಕೊಳ್ಳಬಲ್ಲವಾಗಿವೆ.

**ಮರೈಆರುಂ ಪೆರುವೇಳ್ವಿ ಕೊಟುಂಪುಹೈ**
**ಪೋಯ್‌ವಳರ್‌ನ್ದು ಎಂಗುಂ**
**ನಿರೈ ಆರ ವಾನ್‌ಮೂಡುಂ ನೀಳ್‌ಶೆಲ್ವತ್ತಿರುನರೈಯೂರ್**
**ಪಿರೈಯಾರುಂ ಶಡೈಯಾನುಂ ಪಿರಮನುಂ ಮುನ್**
**ತೊಟುದೇತ್ತ**
**ಇರೈಯಾಹಿ ನಿನ್ರಾನ್ ತನ್ ಇಣೈ ಅಡಿಯೇ ಅಡೈನೆಂಜೇ ॥೯॥**

(ಮರೈ ಆರುಂ) ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ (ಪೆರುವೇಳ್ವಿ) ದೊಡ್ಡ ಯಜ್ಞಗಳಿಂದುಂಟಾದ (ಕೊಟುಂಪುಹೈ) ಒಳ್ಳೆಯ ಧೂಮವಾದುದು (ವಳರ್‌ನ್ದು ಪೋಯ್ ಎಂಗುಂ ನಿರೈ ಆರ) ಮೇಲೆ ಎದ್ದು ಎಲ್ಲಾ ಜಾಗಗಳಲ್ಲಿಯೂ ತುಂಬಿಕೊಂಡಿದ್ದು (ವಾನ್‌ಮೂಡುಂ) ಆಕಾಶವನ್ನು ಮರೆಮಾಡಿಬಿಡುವಂತಹ (ನೀಳ್ ಶೆಲ್ವತ್ತಿರುನರೈಯೂರ್) ಅಮಿತೈಶ್ವರ್ಯವುಳ್ಳ ತಿರುನರೈಯೂರಿನಲ್ಲಿರುವವನೂ, (ಪಿರೈಆರುಂ ಶಡೈಯಾನುಂ) ಚಂದ್ರಕಲೆಯನ್ನು ಮುಡಿಯಲ್ಲಿ ಉಳ್ಳ ಶಿವನೂ (ಪಿರಮನುಂ) ಚತುರ್ಮುಖನೂ (ಮುನ್ ತೊಟುದು ಏತ್ತ) ಮುಂದೆ ನಿಂತು ನಮಿಸಿ ಸ್ತುತಿಸುವಂತೆ (ಇರೈ ಆಹಿ ನಿನ್ರಾನ್ ತನ್) ಸ್ವಾಮಿಯಾಗಿ ಇರುತ್ತಿರುವವನೂ ಆದ ಪರಮಾತ್ಮನ (ಇಣೈ ಅಡಿಯೇ ನೆಂಜೇ ಅಡೈ) ಪಾದದ್ವಂದ್ವಗಳನ್ನು, ಎಲೈ ಮನಸ್ಸೇ, ಆಶ್ರಯಿಸು.

ಹಿಂದಿನ ಪಾಶುರದಲ್ಲಿ ಸ್ವಾಮಿ ಈ ಕ್ಷೇತ್ರದಲ್ಲಿ 'ನಿಲೈಯಾರ ನಿನ್ರಾನ್' ಎಂದು ತಿಳಿಸಿದರು. ಆಶ್ರಯಣೀಯರು ಎಂದು ಜನ ಭ್ರಮಿಸತಕ್ಕ ಬ್ರಹ್ಮ ರುದ್ರರುಗಳೂ ಬಂದು ಈ ಸ್ವಾಮಿಯನ್ನು ಆಶ್ರಯಿಸುತ್ತಿದ್ದಾರೆ ಎಂದು ತಿಳಿಸಿ ಬೇರೆ ಆಶ್ರಯಣೀಯರು ನಮಗಿನ್ನಾರೂ ಇಲ್ಲ ಎಂಬುದನ್ನು ಈ ಪಾಶುರದಲ್ಲಿ ತಿಳಿಸಿ ಆ ಸರ್ವೇಶ್ವರನನ್ನು ಆಶ್ರಯಿಸು ಎಂದು ಮನಸ್ಸಿಗೆ ಉಪದೇಶಿಸುತ್ತಾರೆ. ಆ ಊರಿನವರು ವೇದೋಕ್ತವಾದ ಮಹಾಯಜ್ಞಗಳನ್ನು ಫಲಾಭಿಸಂಧಿ ರಹಿತ ರಾಗಿ ಅನುಷ್ಠಿಸುತ್ತಾರೆ. ಆ ಯಾಗಗಳ ಹೋಮಧೂಮ ಆಕಾಶವನ್ನೇ ಮರೆ ಮಾಡುತ್ತದಂತೆ. ಅಂಥ ನಿರವಧಿಕ ಸಂಪತ್ತಿರುವ ಆ ಕ್ಷೇತ್ರದಲ್ಲಿ ಸರ್ವಾಧಿಕನಾದ ಸ್ವಾಮಿ ಎಲ್ಲರಿಗೂ ಆಶ್ರಯಣೀಯನಾಗಿದ್ದಾನೆ.

**ತಿಣ್‌ಕಳಕಮದಿಳ್ ಪುಡೈಶೂಟ್ ತಿರುನರೈಯೂರ್ ನಿನ್ರಾನ್ನೈ**
**ವಣ್‌ಕಳಕಂ ನಿಲವು ಎರಿಕ್ಕುಂವಯಲ್ ಮಂಗೈ ನಹರಾಳನ್**
**ಪಣ್ಣಳ್ ಅಹಂ ಪಯಿನ್ರಶೀರ್ ಪಾಡಲ್ ಇವೈಪತ್ತುಂ ವಲ್ಲಾರ್**
**ವಿಣ್ಣಳ್ ಅಹತ್ತು ಇವ್ವೈಯವರಾಯ್ ವೀಟ್ಟಿರುಂದು**
**ವಾಟ್ವಾರೇ ॥೧೦॥**

(ತಿಣ್) ದೃಢವಾಗಿರುವುದೂ (ಕಳಕಂ) ಸುಣ್ಣ ಬಣ್ಣ ಮೊದಲಾದವುಗಳ ಅಲಂಕಾರವುಳ್ಳುದೂ ಆದ (ಮದಿಳ್) ಪ್ರಾಕಾರದಿಂದ (ಪುಡೈಶೂಟ್) ನಾಲ್ಕು ಕಡೆಯೂ ಸುತ್ತುವರಿಯಲ್ಪಟ್ಟ (ತಿರುನರೈಯೂರ್) ತಿರುನರೈಯೂರಿನಲ್ಲಿ (ನಿನ್ರಾನೈ) ಬಿಜಯಮಾಡಿಸಿರುವ ಸ್ವಾಮಿಯನ್ನು ಕುರಿತಂತೆ (ವಣ್‌ಕಳಕಂ) ಸುಂದರವಾದ ಹಂಸಪಕ್ಷಿಗಳು (ನಿಲವು ಎರಿಕ್ಕುಂ) ಬೆಳುದಿಂಗಳಂತೆ ಸೊಗಯಿ ಸುತ್ತಿರುವಂಥ (ವಯಲ್) ಗದ್ದೆಗಳನ್ನುಳ್ಳ (ಮಂಗೈನಹರಾಳನ್) ತಿರುಮಂಗೈ ನಾಡಿಗೆ ನಿರ್ವಾಹಕರಾದ ಆಳ್ವಾರವರು (ಪಣ್ಣಳ್ ಅಹಂ ಪಯಿನ್ರ) ಗಾನ ಗಳಲ್ಲೆಲ್ಲಾ ಸಾರತಮವಾದ ಗಾನದಲ್ಲಿ ಹೇಳಿದ (ಶೀರ್) ಹಿರಿಮೆಯನ್ನು ಹೊಂದಿರುವ (ಪಾಡಲ್ ಇವೈಪತ್ತುಂ) ಈ ಹತ್ತು ಪಾಶುರಗಳನ್ನೂ (ವಲ್ಲಾರ್) ಹಾಡಬಲ್ಲವರು (ವಿಣ್ಣಳ್ ಅಹತ್ತು) ಊರ್ಧ್ವಲೋಕಗಳಲ್ಲಿ ಮುಖ್ಯವಾದ ಪರಮ ಪದದಲ್ಲಿ (ಇವ್ವೈಯವರ್ ಆಯ್) ನಿತ್ಯಸೂರಿಗಳ

ಜೊತೆಗೆ ಸೇರಿದವರಾಗಿ (ವೀಟ್ಟಿರುಂದು) ಹಿರಿಮೆಯನ್ನು ಹೊಂದಿ (ವಾಟ್ವಾರ್) ಬಾಳುವರು.

ತಿರುನರೈಯೂರಿನಲ್ಲಿರುತ್ತಿರುವ ಆ ಪರವಸ್ತುವಿನ ಹಿರಿಮೆಗೆ ತಕ್ಕಂತೆ ಆ ಊರಿನ ಪ್ರಾಕಾರಗಳೂ ಭವ್ಯವಾಗಿವೆ. ತಿರುಮಂಗೈ ಕ್ಷೇತ್ರದ ಗದ್ದೆಗಳಲ್ಲಿ ಸಂಚರಿಸುವ ಹಂಸಗಳು ಅಲ್ಲಿ ಬೆಳುದಿಂಗಳು ಚೆಲ್ಲಿದ ಹಾಗೆ ಶೋಭಿಸುತ್ತವಂತೆ. ರಸತಮವಾದ ಸಾರವನ್ನು ಹೊಂದಿರುವ ಈ ದಶಕವನ್ನು ಓದಬಲ್ಲವರು ಪರಮ ಪದಕ್ಕೆ ಹೋಗಿ ನಿತ್ಯಸೂರಿಗಳ ಗೋಷ್ಠಿಯಲ್ಲಿ ಸೇರಿ ಆ ಪರಮಾತ್ಮನ ನಿತ್ಯಾನು ಭವವನ್ನು ಹೊಂದುವವರಾಗುತ್ತಾರೆ.

**ಆರನೆಯ ಪತ್ತು—ಹತ್ತನೆಯ ತಿರುಮೊಳಿ**

# ಕಿಡಂದ ನಂಬಿ

## ಪ್ರವೇಶ

ಹಿಂದಿನ ದಶಕದಲ್ಲಿ ಸರ್ವೇಶ್ವರನ ಶ್ರೀಪಾದಗಳಲ್ಲಿ ಶರಣಾಗು ಎಂದು ಉಪದೇಶಿಸಿದರು. ತ್ರೈವರ್ಣಿಕರು ತ್ರೈವರ್ಣಿಕರಲ್ಲದವರು ಎಂಬ ಭೇದವಿಲ್ಲದೆ ಅವನನ್ನು ಆಶ್ರಯಿಸಲು ಸರ್ವಾಧಿಕಾರಿಕವಾದ ಕರಣ ಮಂತ್ರವು ಯಾವುದೋ ಎಂದು ವಿಚಾರಿಸಿದಾಗ — ಸರ್ವವ್ಯಾಪಕೋತ್ತಮವಾದ ಶ್ರೀನಾಮವು 'ನಾರಾಯಣ' ಎಂಬುದೇ. ಅದರೊಡನೆ ಸಾಧ್ಯೋಪಾಯವನ್ನು ಹೇಳುವ 'ನಮಃ' ಎಂಬ ಶಬ್ದವನ್ನು ಸೇರಿಸಿಕೊಳ್ಳುವುದೇ ಆಶ್ರಯಣವನ್ನು ಹೊಂದು ವವರಿಗೆ ಬೇಕಾದುದು'—ಎಂದು ಇಲ್ಲಿ ತಿಳಿಸುತ್ತಾರೆ. 'ನಾನ್ ಕಂಡುಕೊಂಡೇನ್ ನಾರಾಯಣಾ ಎನ್ನುಂ ನಾಮವರ್' ಎಂದು ಹೇಳಿದ ಶ್ರೀ ನಾಮವನ್ನು ಮರೆತೆಯೋ ಎಂದು ಅದನ್ನು ಇಲ್ಲಿ ಸ್ಮರಣೆಗೆ ತಂದುಕೊಟ್ಟಿದ್ದಾರೆ. ಈ ದಶಕದಲ್ಲಿ ಪ್ರಮೇಯ ಸ್ವರೂಪವನ್ನು ನಿರೂಪಿಸಿದ್ದಾರೆ. ಆಶ್ರಿತ ಸುಲಭನೂ,

ಅತಿಮಾನುಷ ಚೇಷ್ಟಿತನೂ, ವಿರೋಧಿ ನಿರಸನ ಶೀಲನೂ, ಉಭಯ ವಿಭೂತಿಯುಕ್ತನೂ ಆದ ಸ್ವರೂಪಕ್ಕೆ ವಾಚಕವಾದ 'ನಾರಾಯಣ' ನಾಮ ದೊಡನೆ 'ಶ್ರಿಯಃಪತಿತ್ವ'ವನ್ನೂ ಸೇರಿಸಿ ಅನುಸಂಧಾನ ಮಾಡಿದ್ದಾರೆ.

**ಕಿಡನ್ದ ನಂಬಿ ಕುಡನ್ದೈಮೇವಿ ಕೇಟಲಾಯ್ ಉಲಹೈ**
**ಇಡನ್ದ ನಂಬಿ ಎಂಗಳ್ ನಂಬಿ ಎರಿಞರ್ ಅರಣ್ ಅಟಿಯ**
**ಕಡನ್ದ ನಂಬಿ ಕಡಿಯಾರಿಲಂಗೈ ಉಲಕೈ ಈರಡಿಯಾಲ್**
**ನಡನ್ದ ನಂಬಿ ನಾಮವರ್ ಶೊಲ್ಲಿಲ್ ನಮೋ ನಾರಾಯಣಮೇ**
**॥೧॥**

(ಕುಡಂದೈ ಮೇವಿ ಕಿಡಂದ ನಂಬಿ) ತಿರುಕ್ಕುಡಂದೈಯಲ್ಲಿ ಹೊಂದಿದ್ದುಕೊಂಡು ಶಯನಿಸಿಕೊಂಡಿರುವ ಸ್ವಾಮಿಯೂ, (ಕೇಟಿಲ್ ಆಯ್ ಉಲಹೈ ಇಡಂದ ನಂಬಿ) ವರಾಹ ರೂಪಿಯಾಗಿ ಭೂಮಿಯನ್ನು ಅಂಡಭಿತ್ತಿಯಿಂದ ಬಿಡಿಸಿ ಮೇಲೆ ತಂದ ಸ್ವಾಮಿಯೂ, (ಎಂಗಳ್ ನಂಬಿ) ನಮ್ಮ ಕೊರೆಗಳನ್ನು ತೀರಿಸಬಲ್ಲ ಸ್ವಾಮಿಯೂ, (ಎರಿಞರ್ ಅರಣ್) ಶತ್ರುಗಳ ಕೋಟೆಯು (ಅಟಿಯ) ನಾಶವಾಗುವಂತೆ (ಕಡಿಯಾರ್ ಇಲಂಗೈ ಕಡಂದ ನಂಬಿ) ಕಠೋರವಾದ ರೂಪ ಹೊಂದಿದ್ದ ರಾಕ್ಷಸರು ಬಾಳುತ್ತಿದ್ದ ಲಂಕೆಯನ್ನು ನಾಶಮಾಡಿದ ಸ್ವಾಮಿಯೂ (ಉಲಹೈ ಈರಡಿಯಾಲ್ ನಡಂದ ನಂಬಿ) ಲೋಕಗಳನ್ನೆಲ್ಲಾ ಎರಡು ಪಾದ ನ್ಯಾಸಗಳಿಂದ ಅಳೆದುಕೊಂಡ ಸ್ವಾಮಿಯೂ ಆದ ಸರ್ವೇಶ್ವರನ (ನಾಮಮ್ ಶೊಲ್ಲಿಲ್) ಶ್ರೀನಾಮವು ಯಾವುದೆಂದು ಹೇಳಬೇಕಾದರೆ (ನಮೋ ನಾರಾಯಣಮೇ) ಅದು ನಮೋ ನಾರಾಯಣ ಎಂಬುವ ತಿರುಮಂತ್ರವೇ ಆಗುತ್ತದೆ.

ಪರಮ ಪದಕ್ಕಿಂತಲೂ, ಕ್ಷೀರಸಾಗರಕ್ಕಿಂತಲೂ ಅಧಿಕವಾಗಿ ತಿರುಕ್ಕುಡಂದೈಯಲ್ಲಿ ಶಯನಿಸಿರುವ ಸೌಂದರ್ಯವನ್ನು ಯಾವಾಗಲೂ ಕೊರೆಯಾಗದೆ ಅನುಭವಿಸುವುದಕ್ಕಾಗುವಂತೆ ಸೌಂದರ್ಯದಿಂದ ಪೂರ್ಣನಾಗಿರುವನವನು. ಅಂಡಭಿತ್ತಿಯಲ್ಲಿ ಸೇರಿಹೋಗಿದ್ದ ಭೂಮಿಯನ್ನು ಅಲ್ಲಿಂದ ಬಿಡಿಸಿ ಮೇಲೆತ್ತಿ ತರುವುದಕ್ಕೆ ಬೇಕಾದ ಸಾಮರ್ಥ್ಯಹೊಂದಿ ಸ್ವಲ್ಪವೂ ಕೊರೆ ಇಲ್ಲದವನಾಗಿದ್ದಾನೆ. ಸಂಸಾರಿಗಳಾಗಿ ಕೊರೆಯನ್ನು ಹೊಂದಿರುವುದನ್ನೇ ಸ್ವರೂಪಕ್ಕೆ

ನಿರೂಪಕವಾಗಿ ಹೊಂದಿರುವಂತಹ ನಮ್ಮ ಕೊರೆಯೆಲ್ಲವನ್ನೂ ತೀರಿಸಬಲ್ಲ ಪೌಷ್ಕಲ್ಯವನ್ನು ಹೊಂದಿದವನವನು. ಶತ್ರುಗಳು ಕಟ್ಟಿದ್ದ ಕೋಟೆಯನ್ನು ನಾಶಪಡಿಸಿ, ಕ್ರೂರರಾದ ರಾಕ್ಷಸರಿಂದ ತುಂಬಿದ್ದ ಲಂಕೆಯನ್ನು ಧೂಳೀಪಟ ಮಾಡಿ ಅದರಿಂದ ಉಂಟಾದ 'ವೀರಶ್ರೀ'ಯಿಂದ ಪೂರ್ಣನಾದವನು. ವಿಸ್ತಾರವಾಗಿ ಹರಡಿದ್ದ ಭೂಮಿಯೆಲ್ಲವನ್ನೂ ಎರಡಡಿಯಿಂದ ಅಳೆದ ಅದ್ಭುತ ಕರ್ಮನವನು. ಅವನ ನಾಮ—'ನಮೋ ನಾರಾಯಣ' ಎಂಬುದೇ ಆಗಿದೆ.

**ವಿಡವಾ್ ತಾನುಡೈಯ ಅರವಂ ವೆರುವ ಶೆರುವಿಲ್**
**ಮುನನಾಳ್ ಮುನ್**
**ತಡನ್ಗಾಮರೈ ನೀರ್ ಪೊಯ್ಗೈಪುಕ್ಕು ಮಿಕ್ಕ ತಾಳಾಳನ್**
**ಇಡನ್ದಾನ್ ವೈಯಂ ಕೇಟಲಾಹಿ ಉಲಹೈ ಈರಡಿಯಾಲ್**
**ನಡನ್ದಾನುಡೈಯ ನಾಮಂ ಶೊಲ್ಲಿಲ್ ನಮೋ**
**ನಾರಾಯಣಮೇ ॥೨॥**

(ಮುನನಾಳ್) ಹಿಂದೊಂದು ಕಾಲದಲ್ಲಿ (ವಿಡವ್ ಉಡೈಯ ಅರವಂತಾನ್) ವಿಷವನ್ನು ಹೊಂದಿದ್ದ ಕಾಳಿಯ ನಾಗವು (ವೆರುವ) ಹೆದರುವಂತೆ (ಮುನ್) ಗೋಪಬಾಲಕರ ಕಣ್ಮುಂದೆ (ತಡತಾಮರೈ ಪೊಯ್ಗೈ ನೀರ್ ಪುಕ್ಕು) ದೊಡ್ಡ ದೊಡ್ಡ ತಾವರೆಗಳನ್ನುಳ್ಳ ಯಮುನೆಯ ಮಡುವಿನ ನೀರಿನಲ್ಲಿ ಧುಮುಕಿ (ಶೆರುವಿಲ್) ಆನಾಗನೊಡನೆ ಯುದ್ಧಮಾಡಿದುದರಲ್ಲಿ (ಮಿಕ್ಕ) ಹಿರಿಮೆಯನ್ನು ಹೊಂದಿದ (ತಾಳಾಳನ್) ಶ್ರೀಪಾದಗಳನ್ನುಳ್ಳವನೂ, (ಕೇಟಿಲ್ ಆಹಿ) ವರಾಹಮೂರ್ತಿಯಾಗಿ (ವೈಯಮ್ ಇಡನ್ದಾನ್) ಭೂಮಿಯನ್ನು ಅಂಡಭಿತ್ತಿಯಿಂದ ಕಿತ್ತು ಮೇಲೆ ತಂದವನೂ, (ಈರಡಿಯಾಲ್ ಉಲಹೈ ನಡನ್ದಾನುಡೈಯ) ಎರಡು ಹೆಜ್ಜೆಗಳಿಂದ ಲೋಕಗಳನ್ನು ಅಳೆದುಕೊಂಡವನೂ ಆದ ಸರ್ವೇಶ್ವರನ (ನಾಮಮ್ ಶೊಲ್ಲಿಲ್ ನಮೋ ನಾರಾಯಣಮೇ) ಹೆಸರು ಯಾವುದೆಂದರೆ 'ನಮೋ ನಾರಾಯಣ'–ಎಂಬುದೇ.

ಹಿಂದೆ ಪ್ರತಿಪಾದಿಸಿದ 'ವಿರೋಧಿ ನಿರಸನಶೀಲತ್ವ'ವನ್ನು ಮತ್ತೊಂದು ಬಗೆಯಲ್ಲಿ ಉಪಪಾದನೆಮಾಡಿ ಹಿಂದೆ ಹೇಳಿದ ಅವನ ಸಾಮರ್ಥ್ಯವನ್ನೂ, ಅದ್ಭುತ ಕರ್ಮಗಳನ್ನೂ ಅನುಸಂಧಾನ ಮಾಡುತ್ತಾರೆ. ವಿಷಯುಕ್ತನಾದ

ಕಾಳೀಯನು ಅಂಜುವಂತೆ ಯುದ್ಧದಲ್ಲಿ ಅವನನ್ನು ನಿರಸನ ಮಾಡಿದನಿವನು. ವಿಸ್ತಾರವಾದ ಹರಹಿನಲ್ಲಿ ಹೂಬಿಟ್ಟ ತಾವರೆಗಳನ್ನುಳ್ಳದೂ, ನೆನೆದಂತೆ ವಿನಿಯೋಗಿಸಲು ತಕ್ಕುದಾದ ಜಲಸಮೃದ್ಧಿಯನ್ನುಳ್ಳದೂ ಆದ ಯಮುನೆಯ ಮಡುವಿನಲ್ಲಿ ಧುಮ್ಮಿಕ್ಕಿ ಆ ವಿಷಧರನಾದ ನಾಗನನ್ನು ಅಲ್ಲಿಂದ ಓಡಿಸಿದ ಹಿರಿಮೆಯನ್ನು ಹೊಂದಿದವನು ಅವನು. ಕೃಷ್ಣ, ವರಾಹ, ವಾಮನ ಮೊದಲಾದ ರೂಪವನ್ನು ಹೊಂದಿದವನೇ ಆದರೂ ಅವನನ್ನು ಆಶ್ರಯಿಸುವುದಕ್ಕೆ 'ನಮೋ ನಾರಾಯಣ' ಎಂಬುದು ದಿವ್ಯನಾಮವಾಗುತ್ತದೆ ಎಂದು ನಿರೂಪಿಸುತ್ತಾರೆ.

**ಪೂಣಾದು ಅನಲುಮ್ ತರುಕಣ್ ವೇೞಮ್ ಮರುಹ**
**ವಳ್ಳೆಮರುಪ್ಪೊ**
**ಪೇಣಾನ್ ವಾಂಗಿ ಅಮುದಂಕೊಂಡ ಪೆರುಮಾನ್**
**ತಿರುಮಾರ್ವನ್**
**ಪಾಣ್ ಆ ವಂಡು ಮುರಲುಂ ಕೂಂದಲ್**
**ಆಯ್ಚ್ಚಿ ತಯಿರ್ ವೆಣ್ಣೆಯ್**
**ನಾಣಾತುಣ್ಡಾನ್ ನಾಮಮ್ ಶೊಲ್ಲಿಲ್ ನಮೋ**
**ನಾರಾಯಣಮೇ ॥೩॥**

(ಪೂಣಾದು) ಕಟ್ಟಿ ತಿರುಗಿಸುವುದಕ್ಕಾಗದಂತೆ (ಅನಲುಂ) ಕೋಪಗೊಂಡು ಬೆಂಕಿಯನ್ನುಗುಳುವಂತಿರುವುದೂ (ತರು ಕಣ್) ಜಾತಿಪ್ರಯುಕ್ತವಾದ ಗುಂಡಾದ ಸಣ್ಣ ಕಣ್ಣುಗಳನ್ನುಳ್ಳದೂ ಆದ (ವೇೞಮ್) ಕುವಲಯಾಪೀಡ ವೆಂಬುವ ಆನೆಯು (ಮರುಹ) ಭಯದಿಂದ ಗ್ರಸ್ತವಾಗುವಂತೆ (ಪೇಣಾನ್) ಅದನ್ನು ಲಕ್ಷ್ಯಮಾಡದೆ (ವಳ್ಳೆಮರುಪ್ಪೊವಾಂಗಿ) ಅದರ ಬಿಳಿಯ ದಂತಗಳನ್ನು ಕಿತ್ತೆಸೆದವನೂ, (ಅಮುದಂ ಕೊಂಡ ಪೆರುಮಾನ್) ಸಮುದ್ರ ಮಥನವಮಾಡಿ ಅಮೃತವನ್ನು ತೆಗೆದುಕೊಟ್ಟ ಹಿರಿಮೆಯುಳ್ಳವನೂ, (ತಿರುಮಾರ್ವನ್) ಶ್ರೀ ಮಹಾಲಕ್ಷ್ಮಿಯನ್ನು ವಕ್ಷಃ ಸ್ಥಲದಲ್ಲಿ ಉಳ್ಳವನೂ, (ವಂಡು ಪಾಣ್ ಆ ಮುರಲುಂ) ದುಂಬಿಗಳು ಗಾನ ವಿಶೇಷಗಳನ್ನು ಅಪ್ರಯುತ್ನವಾಗಿ ಹಾಡುವುದ ಕ್ಕಾಶ್ರಯವಾದ (ಕೂಂದಲ್) ತಲೆಗೂದಲು ಮುಡಿಯನ್ನುಳ್ಳ (ಆಯ್ಚ್ಚಿ ತಯಿರ್ ವೆಣ್ಣೆಯ್) ಯಶೋದೆಯು ತೆಗೆದಿಟ್ಟ ಮೊಸರು, ಬೆಣ್ಣೆ ಮೊದಲಾದವನ್ನು (ನಾಣಾದು ಉಂಡಾನ್) ಲಜ್ಜೆಯಿಲ್ಲದೆ ಕದ್ದು ಭುಜಿಸಿದ

ವನೂ-ಆದ ಪರಮಾತ್ಮನ (ನಾಮಂ ಶೊಲ್ಲಿಲ್ ನಮೋ ನಾರಾಯಣಮೇ) ಹೆಸರನ್ನು ಹೇಳಿದರೆ 'ನಮೋ ನಾರಾಯಣ' ಎಂದೇ ಹೇಳಬೇಕು.

ಮೊದಲ ಪಾಶುರದಲ್ಲಿ ವಿವಕ್ಷಿತವಾದ ವಿರೋಧಿನಿರಸನ ಸ್ವಭಾವವನ್ನೂ, ಅದ್ಭುತ ಚೇಷ್ಟಿತಗಳನ್ನೂ, ಆಶ್ರಿತ ಸುಲಭತ್ವವನ್ನೂ ಮತ್ತೊಂದು ಬಗೆಯಲ್ಲಿ ಇಲ್ಲಿ ಅನುಸಂಧಾನ ಮಾಡಿದ್ದಾರೆ. ಕುವಲಯಾ ಪೀಡವು ಭಯದಿಂದ ತತ್ತರಿಸು ವಂತೆ ಮಾಡಿದ ಪ್ರಭು ಇವನು. ಹಿರಿಯ ಬಲವನ್ನುಳ್ಳ ಒಂದು ಪದಾರ್ಥ ವೆಂದು ಅದನ್ನು ಎಣಿಸದೆ, ಅದನ್ನು ಅನಾದರಿಸಿ ಅವರ ಕೊಂಬುಗಳನ್ನು ಲೀಲಾಚಾಲವಾಗಿ ಕಿತ್ತೆಸೆದನು. ಇದಕ್ಕೆ ಅವನು ಸರ್ವೇಶ್ವರನಾಗಿರುವುದೇ ಕಾರಣ. 'ಪಶ್ಯತಾಂ ಸರ್ವದೇವಾನಾಂ ಯಯೌ ವಕ್ಷಃ ಸ್ಥಲಂ ಹರೇಃ'– ಎಂದು ಹೇಳಿದಂತೆ ಶ್ರೀದೇವಿಯನ್ನು ತನ್ನ ವಕ್ಷಃ ಸ್ಥಲದಲ್ಲಿ ಉಳ್ಳವನವನು. ದೇವತೆಗಳಿಗೆ ಅಮೃತವನ್ನು ಉಣಬಡಿಸಿದ ಅವನು 'ಪೆಣ್ಣಮುದಂ' ಉಂಡುದೂ ಒಂದು ಅದ್ಭುತ ಚಾರಿತ್ರವೇ ಅಲ್ಲವೇ ? ಹೀಗೆ ಆಯಾ ನೆಲೆಗಳಲ್ಲಿ ಆಶ್ಚರ್ಯಚೇಷ್ಟಿತಗಳನ್ನು ಮಾಡಿದವನನ್ನು ಪಡೆಯಲು ಉದ್ದೇಶಿಸಿ ಆಶ್ರಯಿಸಲೂ ಈ ಮಂತ್ರವೇ ಸಾಕು ಎನ್ನುತ್ತಾರೆ.

**ಕಲ್ಲಾರ್ ಮದಿಳ್ ಶೂಟ್ ಕಚ್ಚಿ ನಹರುಳ್ ನಚ್ಚಿ ಪಾಡಹತ್ತುಳ್ ಎಲ್ಲಾ ಉಲಹುಂ ವಣಂಗ ಇರುಂದ ಅಮ್ಮಾನ್ ಇಲಂಗೈಕ್ಕೋನ್ ವಲ್ ಆಳ್ ಆಹಂ ವಿಲ್ಲಾಲ್ ಮುನಿಂದ ಎಂದೈ ವಿಬೀಡಣಕ್ಕು ನಲ್ಲಾನುಡೈಯ ನಾಮಮ್ ಶೊಲ್ಲಿಲ್ ನಮೋ ನಾರಾಯಣಮೇ**

**॥೪॥**

(ಕಲ್ಲಾರ್ ಮದಿಳ್‌ಶೂಟ್ ಕಚ್ಚಿನಹರುಳ್) ಕಲ್ಲುಗಳಿಂದ ಕಟ್ಟಲ್ಪಟ್ಟ ಕೋಟೆಗಳಿಂದ ಸುತ್ತುವರಿಯಲ್ಪಟ್ಟ ಕಾಂಚಿಪುರದಲ್ಲಿ (ನಚ್ಚಿ) ವಾಸ ಮಾಡಲು ಇಚ್ಛಿಸಿ (ಎಲ್ಲಾ ಉಲಹುಂ ವಣಂಗ) ಲೋಕವೆಲ್ಲಾ ನಮಿಸಿ ಸೇವಿಸುವಂತೆ (ಪಾಡಹತ್ತುಳ್ ಇರುಂದ ಅಮ್ಮಾನ್) ಪಾಡಹ ಕ್ಷೇತ್ರದಲ್ಲಿ ನಿತ್ಯವಾಸ ಮಾಡುತ್ತಿರುವ ಸ್ವಾಮಿಯೂ, (ಇಲಂಗೈ ಕೋನ') ಲಂಕಾಧಿಪತಿಯಾದ ರಾವಣನ (ವಲ್ ಆಳ್ ಆಹಂ) ಅತ್ಯಂತ ಬಲಿಷ್ಠವಾದ ಶರೀರವನ್ನು (ವಿಲ್ಲಾಲ್ ಮುನಿಂದ) ಬಿಲ್ಲಿನಿಂದ ಸೀಳಿ ಬಿಸುಟ (ಎಂದೈ) ಸ್ವಾಮಿಯಾದವನೂ

(ವಿಬೀಡಣರ್ಕು ನಲ್ಲಾನುಡೈಯ) ವಿಭೀಷಣನ ವಿಷಯದಲ್ಲಿ ಎಲ್ಲ ಒಳಿತನ್ನೂ ಮಾಡಿದವನೂ ಆದ ನಮ್ಮ ಸ್ವಾಮಿಯ (ನಾಮಮ್ ಶೊಲ್ಲಿಲ್ ನಮೋ ನಾರಾಯಣಮೇ) ಹೆಸರು ಏನೆಂದು ಹೇಳಬೇಕಾದರೆ 'ನಮೋ ನಾರಾಯಣ' ಎಂದೇ ಹೇಳಬೇಕು.

ಮೊದಲ ಪಾಶುರದಲ್ಲಿ ಹೇಳಿದ ಆಶ್ರಿತ ಸೌಲಭ್ಯವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಅವನ ವಿರೋಧಿ ನಿರಸನ ಸ್ವಭಾವವನ್ನೂ ಮತ್ತೆ ಮತ್ತೆ ಅನುಸಂಧಾನ ಮಾಡಿದ್ದಾರೆ. ರಕ್ಷಣೆಗೆ ಸಾಕಾಗುವಂತಿರುವ ಕೋಟೆಗಳನ್ನುಳ್ಳ ಕಾಂಚಿಪುರದಲ್ಲಿರಲು ಆಸೆಪಟ್ಟು ಅಲ್ಲಿನ ತಿರುಪ್ಪಾಡಹ ಕ್ಷೇತ್ರದಲ್ಲಿ ಎಲ್ಲ ಲೋಕಗಳವರೂ ಬಂದು ಆಶ್ರಯಿಸುವುದಕ್ಕಾಗುವಂತೆ ಪರಮ ಸೌಲಭ್ಯವನ್ನು ತೋರಿ ಇರುತ್ತಿರುವ ಸರ್ವೇಶ್ವರನವನು. ದುರ್ಮಾನಿಯಾದ ರಾವಣನನ್ನು ಧ್ವಂಸಮಾಡಿದ ದೇವನಿವನು. ಆವಿಭೀಷಣನ ಅಣ್ಣನ ಬಗೆಗೆ ದ್ವೇಷವು ಹೇಗೆ ಅಧಿಕವಾಗಿತ್ತೋ ಹಾಗೆಯೇ ಅವನ ಬಗೆಗೆ ಸ್ನೇಹವು ಅಧಿಕವಾಗಿತ್ತು. 'ಮಿತ್ರಭಾವೇನ ಸಂಪ್ರಾಪ್ತಂ' ಎಂದಲ್ಲವೇ ಅವನು ಹೇಳಿದುದು ? ತನ್ನ ಬಂಟರಾದ ವಾನರ ಮುಖಂಡರುಗಳೆಲ್ಲರ ಮೇಲೆ ಮಾಡುವ ಸ್ನೇಹವನ್ನು ಇವನೊಬ್ಬನಲ್ಲಿಯೇ ಮಾಡಿದವನ ಶ್ರೀನಾಮ ಇದು. ಈ ಶ್ರೀನಾಮ ವಾತ್ಸಲ್ಯಕ್ಕೂ ವಾಚಕವಾದುದೇ ಆಗಿದೆ.

**ಕುಡೈಯಾ ವರೈಯಾಲ್ ನಿರೈಮುನ್ ಕಾತ್ತ ಪೆರುಮಾನ್**
**ಮರುವಾದ**
**ವಿಡೈತಾನೇಟುಮ್ ವೆನ್ರಾನ್ ಕೋವಲ್ ನಿನ್ರಾನ್**
**ತೆನ್ನಿಲಂಗೈ**
**ಅಡೈಯಾ ಅರಕ್ಕರ್ ವೀಯ ಪೊರದುಮೇವಿ**
**ವೆಮ್‌ಕೂತ್ತಮ್**
**ನಡೈ ಆ ಉಣ್ಣಕ್ಕಂಡಾನ್ ನಾಮಂ ನಮೋ ನಾರಾಯಣಮೇ**
**॥೫॥**

(ಮುನ್) ಹಿಂದೊಂದು ಕಾಲದಲ್ಲಿ (ಕುಡೈಯಾಂವರೈಯಾಲ್) ಕೊಡೆಯಾಗಿ ಮಾಡಿಕೊಂಡ ಗೋವರ್ಧನಗಿರಿಯಿಂದ (ನಿರೈಕಾತ್ತ ಪೆರುಮಾನ್) ಹಸುಗಳ ಮಂದೆಯನ್ನು ಧಾರಾಕಾರವಾದ ಮಳೆಯಿಂದ ರಕ್ಷಿಸಿ ಅನುಗ್ರಹಿಸಿದವನೂ,

(ವಿಭೀಡಣರ್ಕು ನಲ್ಲಾನುಡೈಯ) ವಿಭೀಷಣನ ವಿಷಯದಲ್ಲಿ ಎಲ್ಲ ಒಳಿತನ್ನೂ ಮಾಡಿದವನೂ ಆದ ನಮ್ಮ ಸ್ವಾಮಿಯ (ನಾಮಮ್ ಶೊಲ್ಲಿಲ್ ನಮೋ ನಾರಾಯಣಮೇ) ಹೆಸರು ಏನೆಂದು ಹೇಳಬೇಕಾದರೆ 'ನಮೋ ನಾರಾಯಣ' ಎಂದೇ ಹೇಳಬೇಕು.

ಮೊದಲ ಪಾಶುರದಲ್ಲಿ ಹೇಳಿದ ಆಶ್ರಿತ ಸೌಲಭ್ಯವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಅವನ ವಿರೋಧಿ ನಿರಸನ ಸ್ವಭಾವವನ್ನೂ ಮತ್ತೆ ಮತ್ತೆ ಅನುಸಂಧಾನ ಮಾಡಿದ್ದಾರೆ. ರಕ್ಷಣೆಗೆ ಸಾಕಾಗುವಂತಿರುವ ಕೋಟೆಗಳನ್ನುಳ್ಳ ಕಾಂಚಿಪುರದಲ್ಲಿರಲು ಆಸೆಪಟ್ಟು ಅಲ್ಲಿನ ತಿರುಪ್ಪಾಡಹ ಕ್ಷೇತ್ರದಲ್ಲಿ ಎಲ್ಲ ಲೋಕಗಳವರೂ ಬಂದು ಆಶ್ರಯಿಸುವುದಕ್ಕಾಗುವಂತೆ ಪರಮ ಸೌಲಭ್ಯವನ್ನು ತೋರಿ ಇರುತ್ತಿರುವ ಸರ್ವೇಶ್ವರನವನು. ದುರ್ಮಾನಿಯಾದ ರಾವಣನನ್ನು ಧ್ವಂಸಮಾಡಿದ ದೇವನಿವನು. ಆವಿಭೀಷಣನ ಅಣ್ಣನ ಬಗೆಗೆ ದ್ವೇಷವು ಹೇಗೆ ಅಧಿಕವಾಗಿತ್ತೋ ಹಾಗೆಯೇ ಅವನ ಬಗೆಗೆ ಸ್ನೇಹವು ಅಧಿಕವಾಗಿತ್ತು. 'ಮಿತ್ರಭಾವೇನ ಸಂಪ್ರಾಪ್ತಂ' ಎಂದಲ್ಲವೇ ಅವನು ಹೇಳಿದುದು ? ತನ್ನ ಬಂಟರಾದ ವಾನರ ಮುಖಂಡರುಗಳೆಲ್ಲರ ಮೇಲೆ ಮಾಡುವ ಸ್ನೇಹವನ್ನು ಇವನೊಬ್ಬನಲ್ಲಿಯೇ ಮಾಡಿದವನ ಶ್ರೀನಾಮ ಇದು. ಈ ಶ್ರೀನಾಮ ವಾತ್ಸಲ್ಯಕ್ಕೂ ವಾಚಕವಾದುದೇ ಆಗಿದೆ.

**ಕುಡೈಯೊ ವರೈಯಾಲ್ ನಿರೈಮುನ್ ಕಾತ್ತ ಪೆರುಮಾನ್**
**ಮರುವಾದ**
**ವಿಡೈಕಾನೇಟುಮ್ ವೆನ್ರಾನ್ ಕೋವಲ್ ನಿನ್ರಾನ್**
**ತೆನ್ನಿಲಂಗೈ**
**ಅಡೈಯಾ ಅರಕ್ಕರ್ ವೀಯ ಪೊರದುಮೇವಿ**
**ವೆನ್‌ಕೂತ್ತಮ್**
**ನಡೈ ಆ ಉಣ್ಣಕ್ಕಂಡಾನ್ ನಾಮಂ ನಮೋ ನಾರಾಯಣಮೇ**
**॥೫॥**

(ಮುನ್) ಹಿಂದೊಂದು ಕಾಲದಲ್ಲಿ (ಕುಡೈಯಾಂವರೈಯಾಲ್) ಕೊಡೆಯಾಗಿ ಮಾಡಿಕೊಂಡ ಗೋವರ್ಧನಗಿರಿಯಿಂದ (ನಿರೈಕಾತ್ತ ಪೆರುಮಾನ್) ಹಸುಗಳ ಮಂದೆಯನ್ನು ಧಾರಾಕಾರವಾದ ಮಳೆಯಿಂದ ರಕ್ಷಿಸಿ ಅನುಗ್ರಹಿಸಿದವನೂ,

(ಮರುವಾದ ವಿಡೈ ಏಟುಂ ವೆನ್ರಾನ್) ಆಕ್ರಮಿಸಿ ಬಂದ ಸಪ್ತವೃಷಭಗಳನ್ನೂ ನಿರಸನಮಾಡಿ ಜಯಿಸಿದವನೂ, (ಕೋವಲ್ ನಿನ್ರಾನ್) ತಿರುಕ್ಕೋವ ಲೂರಿನಲ್ಲಿ ಸುಂದರವಾದ ಅಲಂಕಾರದಿಂದ ನಿಂತಿರುವವನೂ (ತೆನ್‌ಇಲಂಗೈ ಅಡೈಯಾ ಅರಕ್ಕರ್) ದಕ್ಷಿಣದ ಲಂಕೆಯಲ್ಲಿರುವವರಾಗಿ ತನ್ನನ್ನು ಆಶ್ರಯಿಸದ ರಾಕ್ಷಸರು (ವೀಯು) ನಾಶವಾಗುವಂತೆ (ಪೊರದು) ಯುದ್ಧಮಾಡಿ (ವೆಪಕ್ ಕೊತ್ತಂ) ಕ್ರೂರಿಯಾದ ಮೃತ್ಯುವಾದವನು (ಮೇವಿ ನಡೈ ಆ) ಹೆದರದೇ ಇರುತ್ತಾ ಇದುವೇ ತನಗೆ ಕಾರ್ಯವಾಗಿ (ಉಣ್ಣಕ್ಕಂಡಾನ್) ಲಂಕೆಯನ್ನು ಭುಜಿಸು ವಂತೆ ಮಾಡಿದವನೂ ಆದ ಪರಮಾತ್ಮನ (ನಾಮಮ್ ಶೊಲ್ಲಿಲ್ ನಮೋ ನಾರಾಯಣಮೇ) ಹೆಸರಾದರೂ ನಮೋನಾರಾಯಣ ಎಂಬುವುದೇ ಆಗಿದೆ.

ಬೆಟ್ಟವನ್ನೆತ್ತಿ ಹಿಡಿದುದು ಭಾರವಾಗಿರುವುದು ಹೋಗಿ ಮಳೆ ಬಂದಾಗ ಛತ್ರಿಯನ್ನು ಬಿಚ್ಚಿ ಹಿಡಿದುಕೊಂಡಂತಾಯಿತು. ಪಶುಗಳಿಗೂ ಗೋಪಾಲಕರಿಗೂ ರಕ್ಷಕನಾಗಿ ಅವರಿಗೆ ನಿರ್ವಾಹಕನಾಗಿ ನಿಂತ ನಿಲುವು ಇದು. ಅಸುರಾವೇಶದ ಕಾರಣ ಒಂದು ಮತ್ತೊಂದರೊಡನೆ ಹೊಂದಿಕೊಂಡು ಇರದೆ ಇದ್ದ ಏಳು ವೃಷಭಗಳನ್ನೂ ಅಡಗಿಸಿದ ಬಲಿಷ್ಠನಿವನು. 'ಅವನು ತ್ರಿವಿಕ್ರಮನಾದಾಗ ಅವನನ್ನು ನಾವು ಕಾಣಲಿಲ್ಲ. ನಾವು ಅನಂತರ ಎಂದೋ ಹುಟ್ಟಿದವರು' —ಎಂದು ಯಾರೂ ಹೇಳುವುದಕ್ಕಾಗದಂತೆ ತಿರಕ್ಕೋವಲೂರಿನಲ್ಲಿ ತ್ರಿವಿಕ್ರಮನ ರೂಪದಲ್ಲಿಯೇ ಇರುತ್ತಿದ್ದಾನೆ. ಲಂಕೆಯಲ್ಲಿನ ರಾಕ್ಷಸರನ್ನು ಧೂಳೀಪಟ ಮಾಡಿದ ಸ್ವಾಮಿ ಇವನು. ಹಿಂದೆ ಮೃತ್ಯುದೇವತೆಯೂ ಸಹ ರಾಕ್ಷಸರ ಅಪ್ಪಣೆಯನ್ನು ಪರಿಪಾಲಿಸಬೇಕಾಗಿತ್ತು. ಈಗಲಾದರೂ ಶ್ರೀರಾಮನ ಬಾಹುವಿನ ನೆರಳಲ್ಲಿ ನಿಂತು ತೃಪ್ತಿಯಾಗುವಂತೆ ಆ ಲಂಕೆಯವರ ನ್ನೆಲ್ಲಾ ಕಬಳಿಸಿತು. ಇಂಥ ಸ್ವಭಾವದ ಆ ಸರ್ವೇಶ್ವರನ ಶ್ರೀನಾಮವಾದರೂ 'ನಮೋ ನಾರಾಯಣ' ಎಂಬುದೇ.

**ಕಾನವೆಣ್ಣುಂ ಕುರಂಗುಂ ಮುಶುವುಮ್ ಪಡೈ ಆ**
**ಅಡಲರಕ್ಕರ್**
**ಮಾನಂ ಅಟಿತ್ತು ನಿನ್ರವೆನ್ರಿ ಅಮ್ಮಾನ್ ಎನಕ್ಕೆನ್ರುಮ್**

**ಶೇನುವನ್ ಪಾಲುವುಮೆಮುದುಂ ಆಯ ತಿರುಮಾಲ್ ತಿರುನಾಮಂ**
**ನಾನುಮ್ ಶೊನ್ನೇನ್ ನಮರುಂ ಉರೈಮಿನ್ ನಮೋ ನಾರಾಯಣಮೇ ॥೬॥**

(ಕಾನವರ್ ಎಣ್ಣುಂ) ಕಾಡುಕರಡಿಗಳನ್ನೂ (ಕುರಂಗುಂ) ಕಪಿಗಳನ್ನೂ (ಮುಶುವುವರ್) ಮುಶು ಎನ್ನುವ ಜಾತಿಯ ಕಪಿಗಳನ್ನೂ (ಪಡೈಆ) ಸೇನೆ ಯನ್ನಾಗಿ ಮಾಡಿಕೊಂಡು (ಅಡಲ್ ಅರಕ್ಕರ್) ಕ್ರೂರರಾದ ರಾಕ್ಷಸರ (ಮಾನಂ ಅಟಿತ್ತು ನಿನ್ರ) ಸೊಕ್ಕನ್ನು ನಾಶಪಡಿಸಿದ (ವೆನ್ರಿ ಅಮ್ಮಾನ್) ಜಯಶೀಲನಾದ ಸ್ವಾಮಿಯೂ, (ತಿರುಮಾಲ್) ಶ್ರಿಯಃಪತಿಯೂ ಆದವನ ದಿವ್ಯನಾಮವಾಗಿ—(ಎನಕ್ಕು ಎನ್ರುಂ ತೇನುಂಪಾಲುಂ ಅಮುದುಂ ಆಯ) ನನಗೆ ಎಂದೆಂದೂ ಜೇನು, ಹಾಲು, ಅಮೃತದಂತೆ ಪರಮ ಭೋಗ್ಯವಾಗಿ ಇರುವ (ತಿರುನಾಮಂ ನಮೋ ನಾರಾಯಣಂ) ಶ್ರೀನಾಮವಾದ ನಮೋ ನಾರಾಯಣ ಎಂಬ ತಿರುಮಂತ್ರವನ್ನು (ನಾನುಂ ಶೊನ್ನೇನ್) ನಾನೂ ಉಚ್ಚರಿಸಿದೆನು. (ನಮರುಂ ಉರೈಮಿನ್) ನಮಗೆ ಸೇರಿದವರೂ ಉಚ್ಚರಿಸುವವರಾಗಿ.

ಇಂದ್ರಾದಿ ದೇವತೆಗಳೂ ಸಹ ರಾವಣನನ್ನು ಎದುರಿಸಲಾರದೆ ಅವನಿಗೆ ಬೆನ್ನುತೋರಿ ಪಲಾಯನ ಮಾಡಿದರು. ಅಂಥ ದರ್ಪಿಷ್ಠನಾದ ರಾವಣನ ದುರ್ಮಾನವನ್ನು ನಾಶಪಡಿಸಿದ ಸರ್ವಾಧಿಕ ಪರಮಾತ್ಮಾ, ಕಾಡಿನಲ್ಲಿ ಇರುವುದೊಂದನ್ನು ಬಿಟ್ಟು ಮತ್ತೇನನ್ನೂ ಅರಿಯದ ಕರಡಿಗಳು, ಕಪಿಗಳು ಮೊದಲಾದವುಗಳನ್ನು ತನ್ನ ಸೈನ್ಯವನ್ನಾಗಿ ಮಾಡಿಕೊಂಡ ಆ ದೇವ ದೇವ. 'ತಿರುಮಾಲ್' ಎಂದು ಹೇಳಿ ಆಳ್ವಾರವರು ಶ್ರೀದೇವಿಯೊಡನೆ ಎಡೆಬಿಡದೆ ಕೂಡಿರುವ ರೀತಿಯಲ್ಲಿಯೇ ಅವನ ಶ್ರೀನಾಮವನ್ನು ಹೇಳಿ ಆನಂದಿಸುತ್ತಾರೆ. 'ಇತರ ವಿಷಯಗಳ ಹೆಸರನ್ನೇ ಯಾವಾಗಲೂ ಹೇಳಿಕೊಂಡು ಹೋಗುತ್ತಿದ್ದ ನಾನೇ ಆ ಶ್ರೀ ನಾಮವನ್ನು ಹೇಳಿದೆನಲ್ಲವೆ? ಇದನ್ನು ಕಂಡ ಮೇಲೆ ಇದನ್ನು ಉಚ್ಚರಿಸುವುದಕ್ಕೆ ಯಾರಿಗೂ ಅಡ್ಡಿ ಇಲ್ಲವಲ್ಲ!'—ಎನ್ನುತ್ತಾರೆ ಆಳ್ವಾರ್ರವರು. ಆಳ್ವಾರರುಗಳ ಗೋಷ್ಠಿಯಲ್ಲಿ ಇದನ್ನು ಬಿಟ್ಟು ಬೇರೆ ಶ್ರೀನಾಮವಿದೆಯೆಂದು ನೆನೆದವರಿಲ್ಲ. ಹಾಗೆ

ಇದೆಯೆಂದು ಹೇಳುವಾಗ 'ಆಯಿರಂ' ಎಂದು ಒಟ್ಟಾರೆ ಹೇಳುತ್ತಾರಷ್ಟೇ ? ಅಂತರ್ಯಾಮಿ ಬ್ರಾಹ್ಮಣದಲ್ಲಿ ಹಾಗೂ ಕಾರಣ ವಾಕ್ಯಗಳಲ್ಲಿ ಈ ದಿವ್ಯ ನಾಮವನ್ನೇ ತಾನೇ ಹೇಳಿರುವುದು. 'ನಾರಾಯಣ' ಎಂಬುವ ಈ ದಿವ್ಯ ನಾಮವೇ ಅವನಿಗೆ ಸ್ವರೂಪ ನಿರೂಪಕವಾಗಿರುವುದಷ್ಟೇ ?

**ನಿನ್ರವರ್ರೈಯುಂವರ್ ಕಿಡಂದಕಡಲುಂ ತಿಶೈಯುಂ ಇರುನಿಲನುಂ**
**ಒನ್ರುಂ ಒಟಿಯಾವಣ್ಣಂ ಎಣ್ಣಿ ನಿನ್ರ ಅಮ್ಮಾನಾರ್**
**ಕುನ್ರು ಕುಡೈಯಾ ಎಡುತ್ತ ಅಡಿಹಳುಡೈಯ ತಿರುನಾಮಂ**
**ನನ್ರುಕಾಣ್ಮಿನ್ ತೊಂಡೀರ್ ಶೊನ್ನೇನ್ ನಮೋ**
**ನಾರಾಯಣಮೋ ॥೭॥**

(ನಿನ್ರ ಪರ್ರೈಯುಂ) ಸ್ಥಿರವಾಗಿ ನಿಂತಿರುವ ಬೆಟ್ಟಗಳನ್ನೂ (ಕಿಡಂದ ಕಡಲುಂ) ಬತ್ತದೆ ಇರುವ ಸಮುದ್ರವನ್ನು (ತಿಶೈಯುಂ) ದಿಕ್ಕುಗಳನ್ನೂ (ಇರುನಿಲಮುಂ) ವಿಸ್ತಾರವಾಗಿ ಹರಡಿರುವ ಭೂಮಿಯನ್ನೂ—ಇವೆಲ್ಲವನ್ನೂ (ಒನ್ರು ಒಟಿಯಾವಣ್ಣಂ) ಸ್ವಲ್ಪವೂ ಹಾಳಾಗದಂತೆ (ಎಣ್ಣಿನಿನ್ರ) ತನ್ನ ಸಂಕಲ್ಪದಿಂದ ಪ್ರವಾಹ ನಿತ್ಯವನ್ನಾಗಿ ಮಾಡಿಕೊಂಡು ಬರುವ (ಅಮ್ಮಾನಾರ್) ಸ್ವಾಮಿಯೂ, (ಕುನ್ರುಂ ಕುಡೈ ಆ) ಗೋವರ್ಧನ ಪರ್ವತವನ್ನು ಕೊಡೆಯನ್ನಾಗಿ ಎತ್ತಿಹಿಡಿದ ಸ್ವಾಮಿಯೂ ಆದ ಸರ್ವೇಶ್ವರನ (ತಿರುನಾಮಂ ನಮೋ ನಾರಾಯಣಂ) ದಿವ್ಯನಾಮವು 'ನಮೋ ನಾರಾಯಣ' ಎಂಬುದೇ (ತೊಂಡೀರ್) ಭಕ್ತರುಗಳೇ (ನನ್ರು ಶೊನ್ನೇನ್ ಕಾಣ್ಮಿನ್) ನಾನು ಚೆನ್ನಾಗಿ ಹೇಳಿದ್ದೇನೆ. ತಿಳಿದುಕೊಳ್ಳಿ.

ಅಲ್ಲಾಡದೆ ನಿಂತಿರುವ ಕುಲಪರ್ವತಗಳೇನು, ಈಶ್ವರ ಸಂಕಲ್ಪಕ್ಕನು ಸಾರವಾಗಿ ತನ್ನ ಎಲ್ಲೆಯನ್ನು ಅತಿಕ್ರಮಿಸದೆ ಇರುತ್ತಿರುವ ಸಾಗರವೇನು, ಪರಾಪರ ವಿಭಾಗವನ್ನು ಮಾಡುವುದಕ್ಕೆ ಆಸ್ಪದವಾಗಿರುವ ದಿಕ್ಕುಗಳೇನು, ಪ್ರಾಣಿಗಳು ಸಂಚಾರ ಮಾಡುವುದಕ್ಕೆ ತಕ್ಕುದಾದ ವಿಸ್ತಾರವನ್ನುಳ್ಳ ಭೂಮಿಯೇನು—ಹೀಗೆ ಇರುವ ಪದಾರ್ಥಗಳಲ್ಲಿ ಯಾವುದೂ ಕೊರೆಯಾಗ ದಂತೆ ತನ್ನ ಸಂಕಲ್ಪದಿಂದ ಎಲ್ಲವನ್ನೂ ಸೃಜಿಸಿಕೊಂಡು ಇರುತ್ತಿದ್ದಾನೆ ಆ ಸರ್ವೇಶ್ವರ, ಕಾರಣಭೂತನಾದ ಅವನ ದಿವ್ಯನಾಮವನ್ನು ಹೇಳುವುದು ಪ್ರಾಪ್ತವಾದುದಷ್ಟೇ ? ಭಗವದ್ವಿಷಯದಲ್ಲಿ ಕೈಂಕರ್ಯ ರುಚಿ ಇರುವವ

ರೆಲ್ಲರಿಗೂ ನಾನು ಹೇಳುತ್ತಿದ್ದೇನೆ. ಉಚ್ಚರಿಸುವುದಕ್ಕೆ ಅತ್ಯಂತ ಸುಲಭವಾದ 'ನಮೋ ನಾರಾಯಣ' ಎಂಬುದನ್ನು ಹೇಳುತ್ತಿದ್ದೇನೆ.

**ಕಡುಂಗಾಲ್ ಮಾರಿ ಕಲ್ಲೇ ಪೊಟಿಯ ಅಲ್ಲೇ ಎಮಕ್ಕೆನ್ರು**
**ಪಡುಂಗಾಲ್ ನೀಯೇ ಶರಣ್ ಎನ್ರು ಆಯರ್ ಅಂಜ**
**ಅಂಜಾಮುನ್**
**ನೆಡುಂಗಾಲ್ ಕುನ್ರಂಕುಡ್ಯೆ ಒನ್ರುಏಂದಿ ನಿರೈಯ್ಯೆ ಶಿರಮತ್ತಾಲ್**
**ನಡುಂಗಾ ವಣ್ಣಂ ಕಾತ್ತಾನ್ ನಾಮಂ ನಮೋ**
**ನಾರಾಯಣಮೇ ॥೮॥**

(ಕಡುಕಾಲ್) ಚಂಡ ಮಾರುತದೊಡನೆ ಕೂಡಿದ (ಮಾರಿ) ಮೇಘವು (ಕಲ್ಲೇ ಪೊಟಿಯ) ಕಲ್ಮಳೆಯನ್ನು ವರ್ಷಿಸುತ್ತಿರಲು (ಎಮಕ್ಕು ಅಲ್ಲೇ ಎನ್ರು) ಇದು ನಮಗೆ ಕಾಳರಾತ್ರಿಯಾಗಿಯೇ ಇದೆ ಎಂದು (ಪಡುಂಗಾಲ್) ಮನಸ್ಸಿಗೆ ತೋರಲು (ಆಯರ್) ಗೋಪಾಲಕರು (ನೀಯೇ ಶರಣ್ ಎನ್ರು ಅಂಜಿ) ನೀನೇ ನಮಗೆ ರಕ್ಷಕನಾಗಬೇಕು ಎಂದು ಹೇಳಿಕೊಂಡು ಅಂಜಿರಲು (ಅಂಜಾಮುನ್) ಆ ಭಯದ ಕಾರ್ಯವು ಫಲಿಸುವ ಮೊದಲೇ (ನೆಡುಕಾಲ್ ಕುನ್ರಂ ಒನ್ರು) ಸುತ್ತಲೂ ಬೆಟ್ಟಗಳನ್ನು ಹೊಂದಿದ್ದ ಒಂದು ಗೋವರ್ಧನ ಪರ್ವತವನ್ನು (ಕುಡೈ ಏಂದಿ) ಕೊಡೆಯನ್ನಾಗಿ ಎತ್ತಿ ಹಿಡಿದು (ನಿರೈಯ್ಯೆ) ಹಸುಗಳ ಮಂದೆಗಳನ್ನು (ಶಿರಮತ್ತಾಲ್ ನಡುಂಗಾವಣ್ಣಂ) ಆಯಾಸದಿಂದ ನೋವು ಪಡದಂತೆ (ಕಾತ್ತಾನ್) ರಕ್ಷಿಸಿದ ಪರಮಾತ್ಮನ (ನಾಮಂ ನಮೋ ನಾರಾಯಣಂ) ದಿವ್ಯವಾದ ಹೆಸರು 'ನಮೋ ನಾರಾಯಣ'—ಎಂಬುದೇ.

ಪ್ರಬಲವಾದ ಬಿರುಗಾಳಿಯೊಡನೆ ಕೂಡಿದ ಮೇಘ ಭಯಂಕರವಾದ ಕಲ್ಮಳೆಯನ್ನು ವರ್ಷಿಸಿದಾಗ, 'ಇದು ಪ್ರಳಯ ಕಾಲದಲ್ಲಿ ಬರುವ ಕಾಳ ರಾತ್ರಿಯೋ ?'—ಎಂದು ಅವರುಗಳ ಮನಸ್ಸಿನಲ್ಲಿ ತೋರಿತು. ಅವರು ಅಂಜಿದವರಾಗಿ ಆ ಪರಮನಲ್ಲಿ ರಕ್ಷಣೆ ಬೇಡಿದಾಗ ಅವರು ಅಂಜಿಕೆಯಿಂದ ಮುಗಿದುಹೋಗುವ ಮುನ್ನವೇ ಗೋವರ್ಧನವನ್ನೆತ್ತಿ ಹಿಡಿದು ಮಳೆಯಿಂದ ಅವರನ್ನು ರಕ್ಷಿಸಿದ. ಮಾಡಿದ ಉಪಕಾರವನ್ನು ಅರಿಯದ ಪಶುಗಳನ್ನು ಅವು ಶ್ರಮದಿಂದ ನೋವು ಹೊಂದದಂತೆ ಕಾಪಾಡಿದ. ಸ್ವಾಭಾವಿಕವಾದ ಸಂಬಂಧದ ಕಾರಣ ಅವನು ರಕ್ಷಿಸಿದನಷ್ಟೇ ?

**ಪೊಂಗು ಪುಣರಿ ಕಡಲ್ ಶೂಟ್ ಆಡೈ ನಿಲಮಾಮಹಳ್**
**ಮಲರ್‌ಮಾ**
**ಮಂಗೈ ಪಿರಮನ್ ಶಿವನ್ ಇಂದಿರನ್ ವಾನವರ್**
**ನಾಯಕರಾಯ**
**ಎಂಗಳಡಿಹಳ್ ಇಮೈಯೋರ್ ತಲೈವರುಡೈಯ ತಿರುನಾಮಂ**
**ನಂಗಳ್ ವಿನೈಹಳ್ ತವಿರ ಉರೈಮಿನ್ ನಮೋ**
**ನಾರಾಯಣಮೇ ॥೯॥**

(ಪೊಂಗು ಪುಣರಿ) ಮೇಲೆ ಮೇಲೆ ಏಳುವ ಅಲೆಗಳನ್ನುಳ್ಳ (ಕಡಲ್) ಸಮುದ್ರವನ್ನು (ಶೂಟ್ ಆಡೈ) ತನಗೆ ಉಡುವ ವಸನವನ್ನಾಗಿ ಉಳ್ಳ (ನಿಲವರ್ ಮಾಮಹಳ್) ಭೂದೇವಿಗೂ, (ಮಲರ್ ಮಾಮಂಗೈ) ಶ್ರೀದೇವಿಗೂ (ಪಿರಮನ್ ಶಿವನ್ ಇಂದಿರನ್) ಬ್ರಹ್ಮ, ರುದ್ರ ಇಂದ್ರ ಮೊದಲಾದವರಿಗೂ (ವಾನವರ್) ಮತ್ತಿತರ ದೇವತೆಗಳಿಗೂ (ನಾಯಕರ್ ಆಯ) ನಿರ್ವಾಹಕನಾಗಿರುವವನೂ, (ಎಂಗಳ್ ಅಡಿಹಳ್) ನಮಗೆ ಸ್ವಾಮಿಯಾಗಿರುವವನೂ, (ಇಮೈಯೋರ್ ತಲೈವರುಡೈಯ) ನಿತ್ಯ ಸೂರಿಗಳಿಗೆ ನಾಯಕನಾಗಿರುವವನೂ ಆದ ಪರಮಾತ್ಮನ (ತಿರುನಾಮಂ ನಮೋ ನಾರಾಯಣಂ) ದಿವ್ಯನಾಮವು 'ನಮೋ ನಾರಾಯಣ' ಎಂಬುದೇ. (ನಂಗಳ್ ವಿನೈಹಳ್ ತವಿರ ಉರೈಮಿನ್) ನಮ್ಮ ಪಾಪಗಳು ತೊಲಗಿ ಹೋಗುವಂತೆ ಆ ಶ್ರೀನಾಮವನ್ನು ಹೇಳಿರಿ.

'ನೀವು ಈ ದಿವ್ಯ ನಾಮವನ್ನು ಬಹಳವಾಗಿ ಆದರಿಸುತ್ತಿದ್ದೀರಿ. ಇದಕ್ಕೆ ಏನು ಕಾರಣ ?'—ಎಂದರೆ ಆಳ್ವಾರ್ ಹೇಳುತ್ತಾರೆ : 'ಈ ಶ್ರೀನಾಮವು ಉಭಯ ವಿಭೂತಿ ನಾಯಕನ ಶ್ರೀನಾಮವಾದುದರಿಂದ' ಎಂದು. ದೇವತೆಗಳೆಲ್ಲ ರಿಗೂ ಅವನೇ ನಿರ್ವಾಹಕ. ನಿತ್ಯಸೂರಿಗಳಿಗೂ ಅವನೇ ನಾಯಕ. ಇದು ನಾರಾಯಣ ಶಬ್ದಾರ್ಥ, ನಾವು ಅನಾದಿಕಾಲದಿಂದ ಮಾಡಿದ ಪಾಪಗಳೆಲ್ಲವನ್ನೂ ಈ ದಿವ್ಯನಾಮವು ಹೋಗಲಾಡಿಸುವ ಪ್ರಭಾವವನ್ನು ಹೊಂದಿರುವುದಾಗಿದೆ.

**ವಾವಿತ್ತಡಂ ಶೂಟ್ ಮಣಿಮುತ್ತಾರು ನರೈಯೂರು**
**ನೆಡುಮಾಲೈ**
**ನಾವಿಲ್‌ಪರವಿ ನೆಂಜಿಲ್‌ಕೊಂಡು ನಂಬಿನಾಮುತ್ತೈ**

**ಕಾವಿತ್ತಡಂಗಳ್ ಪುಡವಾರ್ ಕೇಳ್ವನ್ ಕಲಿಯನೊಲಿಮಾಲೈ**
**ಮೇವಿ ಶೊಲ್ಲವಲ್ಲಾರ್ ಪಾವಂನಿಲ್ಲಾ ವೀಯುಮೇ ॥೧೦॥**

(ವಾವಿತ್ತಡಂ) ಬಾವಿಗಳು ಮತ್ತು ತಟಾಕಗಳಿಂದಲೂ (ಪಣ್ ಮುತ್ತಾರು) ಮಣಿ ಮುತ್ತಾರು ಎಂಬ ನದಿಯಿಂದಲೂ (ಶೂಟ್‌ನರ್ರೈಯೂರು) ಸುತ್ತುವರಿಯಲ್ಪಟ್ಟ ತಿರುನರ್ರೈಯೂರಿನಲ್ಲಿ ಇರುವ (ನೆಡುಮಾಲೈ) ಸರ್ವೇಶ್ವರನನ್ನು (ನಾವಿಲ್‌ಪರವಿ) ನಾಲಿಗೆಯಿಂದ ಸ್ತುತಿಸಿ (ನೆಂಜಿಲ್‌ಕೊಂಡು) ಮನಸ್ಸಿನಲ್ಲಿ ಚಿಂತಿಸಿ (ನಂಬಿನಾ ಮತ್ತೈ) ಆ ತಿರುನರ್ರೈಯೂರ್ ನಂಬಿಯ ಶ್ರೀನಾಮವನ್ನು ಕುರಿತಂತೆ (ಕಾವಿತಡಕಣ್ ಪುಡವಾರ್ ಕೇಳ್ವನ್) ಕನ್ನೈದಿಲೆ ಹೂವನ್ನು ಹೋಲುವ ವಿಸ್ತಾರವಾದ ಕಣ್ಣುಗಳನ್ನುಳ್ಳ ಲಲನೆಯರಿಗೆ ಹಿಂದೆ ಮನಸೋಲುವವರಾಗಿದ್ದ (ಕಲಿಯನ್) ತಿರುಮಂಗೈ ಆಳ್ವಾರ್ ಅವರು (ಒಲಿಮಾಲೈ) ಹಾಡಿದ ಈ ನುಡಿಮಾಲೆಯನ್ನು (ಮೇವಿ) ಬಯಸಿ (ಶೊಲ್ಲವಲ್ಲಾರ್ ಪಾವಂ) ಹೇಳ ಬಲ್ಲವರ ಪಾಪಗಳು (ನಿಲ್ಲಾ) ನಿಲ್ಲದೆ (ವೀಯುಂ) ನಾಶವಾಗಿ ಹೋಗುವುವು.

ವಾಪೀತಟಾಕಾದಿಗಳ ಜಲಸಮೃದ್ಧಿಯನ್ನು ಹೊಂದಿರುವ ತಿರುನರ್ರೈಯೂರಿನಲ್ಲಿ ಬಂದು ನೆಲಸಿರುವ ಸರ್ವಾಧಿಕನಾದ ಸರ್ವೇಶ್ವರನನ್ನು ಆಳ್ವಾರವರು ಮನಸ್ಸಿನಲ್ಲಿ ಅನುಸಂಧಾನಮಾಡಿ ಬಾಯಿಯಲ್ಲಿ ಅವನ ದಿವ್ಯನಾಮಗಳನ್ನು ಹೇಳುವವರಾಗಿದ್ದಾರೆ. ಭಗವದನುಗ್ರಹವಾಗುವ ಮೊದಲಿನ ಹಿಂದೊಂದು ಕಾಲದಲ್ಲಿ ಅವರು ನೆನೆಯುತ್ತಿದ್ದುದು ಬೇರೆಯಾಗಿದ್ದಿತು. 'ಈಗ ನನಗೆ ಉಂಟಾದ ಭಕ್ತಿಯನ್ನೂ ಆದರವನ್ನೂ ನೋಡಿ. ಈಗ ಮನೋವಾಕ್ಕಾಯಗಳು ಮೂರಕ್ಕೂ ಆ ಸರ್ವಾಧಿಕನಾದ ನಂಬಿಯೇ ವಿಷಯನಾಗಿದ್ದಾನೆ'—ಎನ್ನುತ್ತಾರೆ ಅವರು. ಈ ದಶಕವನ್ನು ಅಭ್ಯಾಸಮಾಡಿ ಅನುಸಂಧಾನ ಮಾಡುವವರಿಗೆ ಲಭಿಸುವ ಪರಮ ಫಲವನ್ನು ಇಲ್ಲಿ ಸೂಚಿಸಿದ್ದಾರೆ. ಅವರ ಪಾಪಗಳೆಲ್ಲಾ ಅವರನ್ನು ಬಿಟ್ಟೋಡುತ್ತವೆ.

**ಆರನೆಯ ಪತ್ತು ಮುಗಿದುದು.**

**ತಿರುಮಂಗೈಯಾಳ್ವಾರ್ ತಿರುವಡಿಹಳೇ ಶರಣಮ್.**

# ತಿರುವೆಳುಕ್ಕೂತ್ತಿರುಕ್ಕೈ

ಈ ಚಿಕ್ಕ ಆದರೆ ಮಹತ್ವಪೂರಿತವಾದ ಪ್ರಬಂಧದಲ್ಲಿ ತಿರುಮಂಗೈ ಆಳ್ವಾರ್‌ರವರು ಭಗವಂತನ ನಿತ್ಯ ಕೈಂಕರ್ಯವನ್ನೇ ಬಯಸಿ, ಅವನನ್ನೇ ಪಡೆಯಲಿಚ್ಛಿಸಿದವರಾಗಿ ಕುಂಭಕೋಣದಲ್ಲಿ ವಿರಾಜಿಸಿರುವ ಸ್ವಾಮಿಯ ಪಾದಗಳಲ್ಲಿ ಶರಣಾಗತಿಯನ್ನು ಅನುಷ್ಠಿಸಿದ್ದಾರೆ. ಇದರಲ್ಲಿ 47 ಸಾಲುಗಳು ಮಾತ್ರ ಇವೆ. ಚಿತ್ರ ಕಾವ್ಯದ ಪ್ರಕಾರಗಳಲ್ಲಿ ಒಂದಾದ 'ರಥಬಂಧ'ದಲ್ಲಿ ಇದನ್ನು ರಚಿಸಿದ್ದಾರೆ. ಈ ಪ್ರಬಂಧದ ಪದಗಳನ್ನೂ ಪದ ಸಮುಚ್ಚಯಗಳನ್ನೂ ರಥದ ರೂಪದಲ್ಲಿ ಜೋಡಿಸಬಹುದು.

ಸಂಸಾರಸ್ವಭಾವವನ್ನು ನೆನೆದು ಬಹಳ ಖಿನ್ನರಾದ ಆಳ್ವಾರ್‌ರವರು ಅದನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಭಗವದ್ಗುಣಗಳನ್ನು ಮಾನಸಾ ಸ್ಮರಿಸಿ ಬಾಯಿನಲ್ಲಿ ಉಚ್ಚರಿಸುತ್ತಾ ಅವನ ಪಾದಗಳಲ್ಲಿ ನಮಸ್ಕಾರ ಮಾಡುತ್ತಾರೆ. ಭಗವದನುಭವಕ್ಕೆ ವಿರೋಧಿಯಾಗಿರುವ ಸಂಸಾರವನ್ನು ಅದರ ವಾಸನೆಯೊಡನೆ ನಾಶಪಡಿಸಿ ರಕ್ಷಿಸಬೇಕು ಎಂದು ದೇವರಲ್ಲಿ ಮೊರೆಯಿಟ್ಟಿದ್ದಾರೆ. 'ನಾನು ಅದನ್ನು ಮಾಡಲಾಗುವುದೇ ?' ಎಂದು ಭಗವಂತ ಕೇಳಿದರೆ ಅದಕ್ಕೆ ಉತ್ತರವಾಗಿ 'ನಿನ್ನನ್ನು ಬಿಟ್ಟು ಸಕಲಪದಾರ್ಥಗಳ ಉತ್ಪತ್ತಿ, ಸ್ಥಿತಿ ನಾಶಗಳಿಗೆ ಕಾರಣನಾದವನೂ ಸರ್ವಸಮಾಶ್ರಯಣೀಯನಾದವನೂ ಆಪತ್ಸಖನೂ ಆದ ನೀನೇ ನನ್ನ ಈ ಸಂಸಾರ ದುಃಖವನ್ನು ಹೋಗಲಾಡಿಸಬೇಕೇ ವಿನಾ ನನ್ನಿಂದ ಇದನ್ನು ಹೋಗಲಾಡಿಸಿಕೊಳ್ಳುವುದು ಸಾಧ್ಯವಿಲ್ಲ' ಎಂದು ನಮ್ಮ ದೆಶೆಯನ್ನು ಭಗವಂತನ ಪಾದಗಳಲ್ಲಿ ಬಿದ್ದು ನಿವೇದನ ಮಾಡಿಕೊಂಡಿದ್ದಾರೆ ಈ ಪ್ರಬಂಧದಲ್ಲಿ. ಬೇರೆ ಬೇರೆ ಅವತಾರಗಳಲ್ಲಿ ಸ್ವಾಮಿ ಮಾಡಿದ ರಕ್ಷಣೆಯ ಪ್ರಕಾರವನ್ನೂ ಅವನ ಮಹಿಮೆಯನ್ನೂ ಹದಿನೇಳು ಖಂಡಗಳಲ್ಲಿ ನಿರೂಪಿಸಿ, 18 ನೆಯ ಖಂಡದಲ್ಲಿ ತಿರುಕ್ಕುಡಂದೈ ಸ್ವಾಮಿಯನ್ನು ಉದ್ದೇಶಿಸಿ 19 ನೆಯ ಖಂಡದಲ್ಲಿ ಶರಣಾಗತಿಯನ್ನು ಆಚರಿಸಿದ್ದಾರೆ.

1] 'ಒರು ಪೇರ್ ಉಂದಿ ಇರುಮಲರ್ ತವಿಶಲ್
ಒರುಮುಱೈ ಅಯನೈ ಯೀನ್ರನೈ' 2] ಒರುಮುಱೈ
ಇರುಶುಡರ್ ಮೀದಿನಿಲ್ ಇಯಂಗಾ ಮುಮ್ಮದಿಳ್
ಇಲಂಗೈ ಇರುಕಾಲ್ವಳೈಯ ಒರುಶಿಲೈ
ಒನ್ರಿಯ ಈರ್ ಎಯಿತ್ತು ಅೞಲ್ ವಾಯ್ ವಾಳಿಯಿಲ್
ಅಟ್ಟನೈ ;

3] 'ಮೂವಡಿನಾನಿಲಂ ವೇಂಡಿ
ಮುಪ್ಪುರಿ ನೂಲೊಡು ಮಾನ್ ಉರಿ ಇಲಂಗು
ಮಾರ್ವಿನಿಲ್ ಇರುಪಿರಪ್ಪು ಒರು ಮಾಣ್ ಆಹಿ
ಒರುಮುಱೈ ಈರ್ಅಡಿ ಮೂಉಲಹು ಅಳಂದನೈ ;

4] 'ನಾಲ್ ತಿಶೈ ನಡುಂಗ ಅಞ್ ಶಿಱೈ ಪಱವೈ
ಏಱಿ ನಾಲ್‌ವಾಯ್ ಮುಮ್ಮದತ್ತು ಇರುಶೆವಿ
ಒರುತನಿ ವೇೞತ್ತು ಅರಂದೈಯೈ ಒರುನಾಳ್
ಇರು ನೀರ್ ಮಡುವುಳ್ ತೀರ್ತ್ತನೈ ;

5] 'ಮುತ್ತೀ
ನಾಲ್‌ಮಱೈ ಐವಹೈ ವೇಳ್ವಿ ಅರುತೊೞಿಲ್
ಅಂದಣರ್ ವಣಂಗಂ ತನ್ಮೈಯೈ'

6] 'ಐಂಬುಲನ್
ಆಹತ್ತಿನುಳ್ ಶೆರುತ್ತು ನಾನ್ಗುಡನಡಕ್ಕಿ
ಮುಕ್ಕುಣತ್ತು ಇರಂಡವೈ ಅಹತ್ತಿ ಒನ್ರಿನಿಲ್
ಒನ್ರಿನಿನ್ರು ಆಂಗು ಇರಪಿರಪ್ಪು ಅಱುಪ್ಪೋರ್
ಅಱಿಯುಂ ತನ್ಮೈಯೈ

7] 'ಮುಕ್ಕಣ್ ನಾಲ್‌ತೋಳ್
ಐವಾಯ್ ಅರವೋಡು ಆಱು ಪೊದಿ ಶಡೈಯೋನ್
ಅಱಿವರುಂ ತನ್ಮೈಪ್ಪೆರುಮೈಯುಳ್ ನಿನ್ರನೈ

8] ಏೞ್‌ಉಲಹು ಎಯಿತ್ತಿನಿಲ್ ಕೊಂಡನೈ

9] 'ಕೂರಿಯ
ಅಱುಶುವೈ ಪ್ಪಯನುಂ ಆಯಿನೈ'

10] 'ಶುಡರ್ವಿಡುಂ
ಐಮ್ಪಡೈ ಅಞ್‌ಕೈಯುಳ್ ಅಮರ್ನ್ದನೈ'

11] 'ಶುಂದರ
ನಾಲ್‌ತೋಳ್ ಮುನ್ನೀರ್‌ವಣ್ಣಾ, ನಿನ್ ಈರ್ ಅಡಿ
ಒನ್ರಿಯ ಮನತ್ತಾಲ್ ಒರುಮತಿ ಮುಹತ್ತು
ಮಂಗೈಯರ್ ಇರುವರುಂ ಮಲರ್‌ಅನ ಅಂಗೈಯಿಲ್
ಮುಪ್ಪೊಟುದುವರ್ ವರುಡ ಅರಿತುಯಿಲ್ ಅಮರ್‌ನ್ದನೈ

12] ನೆರಿಮುರೈ ನಾಲ್ವಹೈ ವರುಣಮುಂ ಆಯಿನೈ
13] ಮೇ ತಹುಂ ಐಂಪೆರುಂ ಪೂತಮುವರ್ ನೀಯೇ
14] ಅರುಪದಂ ಮುರಲುಂ ಕೊಂದಲ್‌ಕಾರಣಂ
ಏಟ್‌ವಿಡೈ ಅಡಂಗ ಶೆತ್ತನೈ
15] ಅರುವಹೈ
ಶಮಯಮುಂ ಅರಿವು ಅರು ನಿಲೈಯನೈ
16] ಐಂಬಾಲ್
ಓದಿಯೈ ಅಹತ್ತಿರುತ್ತಿನೈ
17] ಅರಂಮುದಲ್ .
ನಾನ್ಗು ಅವೈಯಾಯ್ ಮೂರ್ತಿ ಮೂನ್ರಾಯ್
ಇರುವಹೈ ಪಯನಾಯ್ ಒನ್ರಾಯ್ ವಿರಿಂದು
ನಿನ್ರನೈ
18] ಕುನ್ರಾಮಡು ಮಲರ್ ಶೋಲೈ
ವಣ್‌ಕೊಡಿ ಪಡಪ್ಪೈ ವರುಪುನಲ್‌ಪೊನ್ನಿ
ನಾಮಣಿ ಅಲೈಕ್ಕುಂ ಶೆನ್ನೆಲ್ ಒಣ್‌ಕಬಿನಿ
ತಿಹಟ್ ವನಮುಡುತ್ತ ಕರ್ಪೋರ್‌ಪುರಿಶೈ
ಕನಕಮಾಳಿಹೈ ನಿಮಿರ್‌ಕೊಡಿ ವಿಶುಂಬಿಲ್
ಇಳವರ್‌ಪಿರೈ ತುವಕ್ಕುಂ ಶೆಲ್ವರ್ ಮಲ್‌ಹು ತೆನ್
ತಿರುಕ್ಕುಡಂದೈ ಅಂದಣರ್ ಮಂದಿರಮೊಟಿಯುಡನ್
ವಣಂಗ, ಆಡು ಅರವು ಅಮಳಿಯಿಲ್ ಅರಿತುಯಿಲ್
ಅಮರ್‌ನ್ದ ಪರಮ.
19] ನಿನ್ನಡಿಯಿಣೈ ಪಣಿವನ್
ವರುವರ್ ಇಡರ್ ಅಹಲ ಮಾತ್ತೋ ವಿನೈಯೇ

1] ಒಮ್ಮೆ ಜಗತ್ತು ಇಲ್ಲದ ಆ ಪ್ರಳಯ ಕಾಲದಲ್ಲಿ ಸೃಜಿಸಲು ಸಂಕಲ್ಪಿಸಿ ಪ್ರಧಾನವೂ, ಆದ್ಯವೂ, ವಿಶಾಲವೂ ಆದ ನಿನ್ನ ನಾಭಿಯಲ್ಲಿ ತೋರಿದ ವಿಶಾಲವಾದ ತಾವರೆ ಹೂವಿನ ದಳದ ಮೇಲೆ ಬ್ರಹ್ಮನನ್ನು ಸೃಜಿಸಿದೆ.

2] ಮತ್ತೊಮ್ಮೆ ಚಂದ್ರಸೂರ್ಯರೂ ಸಹ ಮೇಲೆ ಸಂಚರಿಸಲೂ ಭಯಪಡುತ್ತಿದ್ದುದೂ, ಗಿರಿದುರ್ಗ, ಜಲದುರ್ಗ, ವನದುರ್ಗ ಎಂಬ ಮೂರು ದುರ್ಗಗಳನ್ನುಳ್ಳದೂ, ಭಯಪ್ರದವಾದುದೂ ಆದ ಲಂಕೆಯನ್ನು ನೀನು, ಎರಡು ಕೋಟಿಯೂ ಬೆಳೆದು ನಿಲ್ಲುವ ಶಾರ್ಙ್ಗವೆಂಬ ನಿನ್ನ ಧನುಸ್ಸಿಗೆ ಸಮಾನವಾದ ಎರಡು ಹಲ್ಲುಗಳನ್ನುಳ್ಳದೂ ಬೆಂಕಿಯನ್ನುಗುಳುವ ಬಾಯನ್ನುಳ್ಳದೂ ಆದ ಬಾಣಗಳನ್ನು ಪ್ರಯೋಗಿಸಿ ಸುಟ್ಟು ಹಾಕಿದೆ.

3] ಒಮ್ಮೆ (ಬಾಣದಿಂದ ಸಾಧಿಸಲಾಗದುದನ್ನು ಸೌಂದರ್ಯದಿಂದ ಸಾಧಿಸಲು) ನಾಲ್ಕು ಬಗೆಯಾಗಿದ್ದ ಭೂಮಿಯಲ್ಲಿ ಮೂರಡಿಯ ನೆಲವನ್ನು ಯಾಚಿಸಿದೆ. (ಕಾಳಮೇಘದಲ್ಲಿ ಮಿಂಚು ಹೊಳೆಯುವಂತೆ) ಪ್ರಕಾಶಿಸುವ ಮೂರೆಳೆಯ ಯಜ್ಞೋಪವೀತದೊಡನೆ ಕೃಷ್ಣಾಜಿನವೂ ಸೇರಿ ಬೆಳಗುತ್ತಿರುವ ವಕ್ಷಃಸ್ಥಳದಿಂದ ಶೋಭಿಸಿದೆ. ದ್ವಿಜನಾಗಿ ಅನುಪಮನಾದ ಶ್ರೀವಾಮನ ಬ್ರಹ್ಮಚಾರಿ ಆಗಿ ಮೂರುಲೋಕವನ್ನೂ ಎರಡು ಅಡಿಗಳಲ್ಲಿ ಅಳೆದುಕೊಂಡೆ.

4] ಮತ್ತೊಮ್ಮೆ, (ಗಜೇಂದ್ರನಿಗೆ ಬಂದ ಆಪತ್ತನ್ನು ನೆನೆದು ದುಃಖದಿಂದ) ನಾಲ್ಕು ದಿಕ್ಕುಗಳೂ ನಡುಗುತ್ತಿರಲು, ಸುಂದರವಾದ ರೆಕ್ಕೆಗಳುಳ್ಳ ಗರುಡನನ್ನೇರಿ ಬಂದು ನೀನು ಜೋತಾಡುವ ಸೊಂಡಲುಳ್ಳದೂ, ಎರಡು ಕಿವಿಗಳನ್ನು ಉಳ್ಳದೂ, ಮೂರು ಬಗೆಯ ಮದಧಾರೆಯನ್ನು ಸುರಿಸುತ್ತಿದ್ದುದೂ ಆಗಿ ಒಂದು ಸಹಾಯವೂ ಇಲ್ಲದೆ ಆಳವಾದ ಮಡುವಿನಲ್ಲಿ ಮೊಸಳೆಯ ಬಾಯಿಗೆ ಸಿಕ್ಕಿ ಬಿದ್ದಿದ್ದ ಆನೆಯ ಮಹದ್ದುಃಖವನ್ನು ಹೋಗಲಾಡಿಸಿದೆ.

5] ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳನ್ನು ಉಪಾಸನೆ ಮಾಡುವವರೂ, ಋಗ್ಯಜುಸ್ಸಾಮಾಥರ್ವವೇದಗಳನ್ನುಳ್ಳವರೂ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞ ಎಂಬ ಐದು ಬಗೆಯ ಯಜ್ಞಗಳನ್ನು ಅನುಷ್ಠಿಸುವವರೂ, ಯಜನ ಯಾಜನ, ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಎಂಬ ಆರು ಬಗೆಯ ಕರ್ಮಗಳನ್ನುಳ್ಳವರೂ ಆದ ಅನನ್ಯಪ್ರಯೋಜನರಾದ ಬ್ರಾಹ್ಮಣರಿಂದ ಆಶ್ರಯಿಸಲ್ಪಡುವವನು ನೀನು.

6] ಚಕ್ಷುರಾದಿ ಇಂದ್ರಿಯಗಳು ಶಬ್ದಾದಿ ವಿಷಯಗಳಲ್ಲಿ ಹೋಗದಂತೆ ಅವುಗಳನ್ನು ಒಳಗೆ ಅಡಗಿಸಿ, ಮನಸ್ಸು, ಬುದ್ಧಿ, ಚಿತ್ತ ಅಹಂಕಾರಗಳನ್ನೂ

ಸಂಯಮಗೊಳಿಸಿ, ಆಹಾರ ನಿದ್ರಾಭಯ ಮೈಥುನಗಳೆಂಬ ನಾಲ್ಕನ್ನೂ ಪರಿಹರಿಸಿ, ಸತ್ವರ ಜಸ್ತಮಸ್ಸುಗಳೆಂಬ ಮೂರು ಗುಣಗಳಲ್ಲಿ ರಜಸ್ಸು, ತಮಸ್ಸುಗಳೆಂಬ ಎರಡನ್ನು ತ್ಯಾಗಮಾಡಿ, ಸತ್ವವೊಂದರಲೇ ನೆಲೆಯಾಗಿ ನಿಂತು, ಆ ಯೋಗದಲ್ಲಿ ಪುಣ್ಯಪಾಪರೂಪವಾದ ಕರ್ಮಗಳಿಂದ ಬರುವ ಸಂಸಾರವನ್ನು ಕತ್ತರಿಸಿ ಹಾಕುವ ಉಪಾಸಕರಿಂದ ತಿಳಿಯಲ್ಪಡುವ ಸ್ವಭಾವವುಳ್ಳವನು ನೀನು.

7] ಐದು ಬಾಯಿಯುಳ್ಳ ಸರ್ಪವನ್ನೂ, ಗಂಗೆಯನ್ನೂ, ತನ್ನ ಜಟೆಯ ಒಂದು ಸಣ್ಣ ಜಾಗದಲ್ಲಿ ಅಡಗಿಸಿದವನೂ, ಮೂರುಕಣ್ಣುಗಳನ್ನುಳ್ಳವನೂ ನಾಲ್ಕು ತೋಳುಗಳನ್ನುಳ್ಳವನೂ ಆದ ಬಹುಪರಿಕರವುಳ್ಳ ರುದ್ರದೇವನೂ ಅರಿಯಲಾರದ ಆಶ್ಚರ್ಯಕರವಾದ ಸ್ವರೂಪವನ್ನುಳ್ಳವನು ನೀನು.

8] ಮಹಾವರಾಹನಾಗಿ ಏಳು ಲೋಕವನ್ನು ನಿನ್ನ ಕೋರೆಹಲ್ಲುಗಳಿಂದ ಮೇಲಕ್ಕೆ ಎತ್ತಿ ಉದ್ಧರಿಸಿದವನು ನೀನು.

9] ಶಾಸ್ತ್ರಗಳು ಹೇಳುವ, ಮನುಷ್ಯರಿಗೆ ಭೋಗ್ಯವಾದ, ಷಡ್ರಸರೂಪವಾದ ಪ್ರಯೋಜನವನ್ನು ಅನುಗ್ರಹಿಸುವವನು ನೀನು.

10] ಅತ್ಯುಜ್ವಲವಾಗಿ ತೇಜಸ್ಸನ್ನು ಕೆದರುವ ಪಂಚಾಯುಧಗಳನ್ನು ನಿನ್ನ ಸುಂದರವಾದ ಕೈಗಳಲ್ಲಿ ಆಭರಣದೋಪಾದಿಯಲ್ಲಿ ಸ್ಥಿರವಾಗಿ ಧರಿಸಿರುವವನು ನೀನು.

11] ಸೌಂದರ್ಯವೇ ಮೂರ್ತಿವೆತ್ತಂತೆ ಇರುವ ನಾಲ್ಕು ತೋಳುಗಳನ್ನುಳ್ಳವನೂ ಸಾಗರದಂತೆ ನೀಲವರ್ಣವನ್ನುಳ್ಳವನೂ ಆದವನೇ ! ಕಲ್ಮಷರಹಿತವಾದ ಪೂರ್ಣಚಂದ್ರನಂತೆ ಮುಖವನ್ನುಳ್ಳವರೂ ನಿತ್ಯ ಯೌವ್ವನವುಳ್ಳವರೂ ಆದ ಶ್ರೀದೇವಿ ಭೂದೇವಿ ಎಂಬ ದೇವಿಯರಿಬ್ಬರೂ ಪುಷ್ಪಸದೃಶವಾದ ತಮ್ಮ ಸುಂದರವಾದ ಕೈಗಳಿಂದ ಸರ್ವಕಾಲವೂ ನಿನ್ನ ಪಾದಕಮಲಗಳೆರಡನ್ನೂ ಅನನ್ಯಭೋಗ್ಯರಸರಾಗಿ ಒಮ್ಮನಸ್ಸಿನಿಂದ ಒತ್ತುತ್ತಿರಲು ಯೋಗನಿದ್ರೆಯಲ್ಲಿ ಪವಡಿಸಿರುವವನು ನೀನು.

12] ಶಾಸ್ತ್ರಮರ್ಯಾದೆ ತಪ್ಪದಂತೆ ಇರಲು ಚಾತುರ್ವರ್ಣ್ಯವೂ ನಿನ್ನಿಂದ ಆಗಿವೆ. ಆತ್ಮರುಗಳಿಗೆ ವರ್ಣಗಳನ್ನು ಕೊಡುವವನೂ, ಅವರ ಅನುಷ್ಠಾನಗಳಿಂದ ಆರಾಧ್ಯನಾದವನೂ ನೀನೇ ಆಗಿರುವಿ.

13] ಆತ್ಮರುಗಳು 'ನಾನು ದೇವ, ನಾನು ಮನುಷ್ಯ' ಎಂದು ತಿಳಿದುಕೊಳ್ಳಲು ತಕ್ಕುದಾದುದೂ ದೇಹಾರಂಭಕಗಳೂ ಆದ ಪೃಥಿವೀ ಅಪ್ಪು ತೇಜಸ್ಸು, ವಾಯು, ಆಕಾಶ ಎಂಬ ಪಂಚಮಹಾಭೂತಗಳೂ ನೀನೇ ಆಗಿರುವೆ,

14] ಜೇನನ್ನು ಸುರಿಸಿ ಮೊರೆಯುತ್ತಿರುವ ದುಂಬಿಗಳನ್ನುಳ್ಳ ಸುಂದರ ವಾದ ತಲೆಗೂದಲನ್ನುಳ್ಳ ನಪ್ಪಿನ್ನೈದೇವಿಗಾಗಿ ಏಳು ವೃಷಭಗಳನ್ನು ನೀನು ನಿರಸನ ಮಾಡಿದೆ.

15] ನಿನ್ನನ್ನು ಆಶ್ರಯಿಸದೆ ಆರು ವಿಧಗಳಾದ ಬಾಹ್ಯಮಂತಗಳನ್ನವ ಲಂಬಿಸಿದವರು ಅರಿಯಲು ಅಶಕ್ಯನಾದವನು ನೀನು.

16] ಮಾರ್ದವ, ಶೈತ್ಯ, ಸೌಗಂಧ್ಯ, ನೈಲ್ಯ ಮತ್ತು ದೈರ್ಘ್ಯವೆಂಬ ಐದು ಗುಣಗಳನ್ನುಳ್ಳ ತಲೆಗೂದಲನ್ನುಳ್ಳ ಶ್ರೀದೇವಿಯನ್ನು ನಿನ್ನ ವಕ್ಷಃಸ್ಥಲ ದಲ್ಲಿ ಸ್ಥಾಪಿಸಿಕೊಂಡಿರುವವನು ನೀನು.

17] ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರು ಷಾರ್ಥಗಳನ್ನು ಅನುಗ್ರಹಿಸುವವನೂ, ತ್ರಿಮೂರ್ತಿ ಸ್ವರೂಪವನ್ನುಳ್ಳವನೂ ಸುಖ ದುಃಖಗಳೆಂಬ ಎರಡು ಬಗೆಯ ಫಲಗಳಿಗೂ ನಿರ್ವಾಹಕನಾದವನೂ, ಸರ್ವವನ್ನೂ ವ್ಯಾಪಿಸಿದವನಾಗಿ ಸರ್ವಪ್ರಕಾರಿಯಾಗಿ ಒಬ್ಬನೇ ಆದವನು ನೀನು.

18. ಕೊರೆಯಾಗದ ಮಧು ಪ್ರವಾಹವನ್ನುಳ್ಳ ಹೂಗಳ ಸಮೃದ್ಧಿ ಯನ್ನೂ ಸುಂದರವಾದ ಲತೆಗಳನ್ನೂ ಹೊಂದಿದ ತೋಟಗಳ ನಡುವೆ ಹರಿದು ಬರುವ ಕಾವೇರಿ ನದಿಯು ತನ್ನ ಪ್ರವಾಹದಿಂದ ಶ್ಲಾಘ್ಯವಾದ ರತ್ನಗಳನ್ನು ದಡದ ಮೇಲೆ ತಂದು ಹಾಕುವಂಥದೂ, ಕೆಂಪು ಬತ್ತದ ಗದ್ದೆಗಳಿಂದ ಚೆಲು ವಾಂತದೂ ಕಲಿತವರಿರುವಂಥದೂ, ಮೇಲೆತ್ತಿ ಕಟ್ಟಿದ ಧ್ವಜಗಳಿಂದ ಆಕಾಶದಲ್ಲಿ ಚಂದ್ರನ ಗತಿಯನ್ನು ತಡೆಯುವಂತಿರುವ ಉನ್ನತವಾದ ಕನಕಮಂದಿರಗಳನ್ನು ಳ್ಳುದೂ, ನಿರತಿಶಯವಾದ ಸಂಪತ್ತಿನ ಸಮೃದ್ಧಿಯನ್ನುಳ್ಳುದೂ ಆದ ತಿರುಕ್ಕು ಡಂದೈಯಲ್ಲಿ ಅನನ್ಯ ಪ್ರಯೋಜನರಾದ ಬ್ರಾಹ್ಮಣರು ಪಠಿಸುವ ರಹಸ್ಯವಾದ ಸೂಕ್ತಿಗಳಿಗನುಗುಣವಾಗಿ ಆಡುವ ಹೆಡೆಗಳನ್ನುಳ್ಳ ಆದಿಶೇಷನ ಮೇಲೆ ತೂಗು ತೊಟ್ಟಿಲಿನಲ್ಲಿ ಹೇಗೋ ಹಾಗೆ ಯೋಗನಿದ್ರೆಯಲ್ಲಿ ಶಯನಿಸಿರುವ ಪರಾತ್ಪರ ನಾದ ಆರಾವಮುದ ಸ್ವಾಮಿಯೇ,

19] ನಿನ್ನೆರಡು ಪಾದಗಳಲ್ಲಿಯೇ ಶರಣು ಹೋಗಿದ್ದೇನೆ. ಈ ನಿನ್ನ ದಿವ್ಯವಾದ ಅನುಭವಕ್ಕೆ ವಿರೋಧಿಯಾದುದನ್ನೆಲ್ಲಾ ಹೋಗಲಾಡಿಸು. ಸಂಸಾರ ವನ್ನು ಕೊನೆಗಾಣಿಸು.'

ಈ ಚಿಕ್ಕ ಪ್ರಬಂಧದಲ್ಲಿ ಆಳ್ವಾರ್ರವರು ತತ್ವ, ಹಿತ, ಪುರುಷಾರ್ಥಗನ್ನೆಲ್ಲಾ ಹೀಗೆ ವಿಶದವಾಗಿ ನಿರೂಪಿಸಿದ್ದಾರೆ.

# ಇದೇ ಲೇಖಕರ ಕೆಲವು ಕೃತಿಗಳು

| | | | |
|---|---|---|---|
| 1) | ಶ್ರೀಭಾಷ್ಯ–ಪ್ರಥಮ ಸಂಪುಟ | ಕನ್ನಡಾನುವಾದ ಮತ್ತು ವಿವರಣೆ | 60–00 |
| 2) | ಶ್ರೀಭಾಷ್ಯ–ದ್ವಿತೀಯ ಸಂಪುಟ | " | 60–00 |
| 3) | ಶ್ರೀಭಾಷ್ಯ–ತೃತೀಯ ಸಂಪುಟ | " | 60–00 |
| 4) | ಶ್ರೀರಂಗರಾಜಸ್ತವ | " | 10–00 |
| 5) | ಮುದಲ್ ತಿರುವಂದಾದಿ | " | 8–00 |
| 6) | ತಿರುವಂದಾದಿಗಳು | " | 10–00 |
| 7) | ಪೆರಿಯತಿರುವಂದಾದಿ | " | 6–00 |
| 8) | ತಿರುವಿರುತ್ತಂ | " | 10–00 |
| 9) | ಮೂರುಸ್ತವಗಳು | " | 12–00 |
| 10) | ಪೆರಿಯ ತಿರುಮೊಳಿ–ಭಾಗ 1 | | 6–00 |
| 11) | ಪೆರಿಯ ತಿರುಮೊಳಿ–ಭಾಗ 2 | | 12–00 |
| 12) | ಪೆರಿಯ ತಿರುಮೊಳಿ–ಭಾಗ 3 | | 16–00 |
| 13) | Two Upanishads | | 15–00 |
| 14) | Five Upanishads | | 15–00 |
| 15) | ಶ್ರೀಗುಣರತ್ನಕೋಶ | | 4–00 |
| 16) | ಶ್ರೀರಂಗ ಗದ್ಯ | | 8–00 |

ಪ್ರತಿಗಳು ದೊರೆಯುವ ಸ್ಥಳ :

**ನವಯುಗ ಪ್ರಕಾಶನ**

ನಂ. 80, 18ನೇ ಕ್ರಾಸ್, ಒಂದನೇ ಬ್ಲಾಕು,
ರಾಜಾಜಿನಗರ, ಬೆಂಗಳೂರು – 560 010.